

# ಹೊಸತು

## ನೆಮ್ಮದಿಯ ನಾಳೆ ನಮ್ಮದು




ಜನವರಿ ೨೦೦೦
ಬೆಲೆ : ರೂ. ೧೦

೨೦೦೦
ಹೊಸ ವರ್ಷದ
ಶುಭಾಶಯಗಳು

## ನಾನೊಬ್ಬ ಸಮಾಜವಾದಿ

- ಸ್ವಾಮಿ ವಿವೇಕಾನಂದ

# ನವಕರ್ನಾಟಕ ಪ್ರಕಾಶನದ ಮಹತ್ವದ ಪ್ರಕಟಣೆಗಳು

## ನಿಮ್ಮ ಪುಸ್ತಕ ಸಂಗ್ರಹದಲ್ಲಿ ಇರಲೇಬೇಕಾದ ಅಮೂಲ್ಯ ಕೃತಿಗಳು

ಪ್ರೊ॥ ಜಿ. ವೆಂಕಟಸುಬ್ಬಯ್ಯ



ಎರವಲು ಪದಕೋಶ



### ಎರವಲು ಪದಕೋಶ

(ಕನ್ನಡದಲ್ಲಿರುವ ಅನ್ಯದೇಶ್ಯಗಳ ನಿಘಂಟು)

ಪ್ರೊ॥ ಜಿ. ವೆಂಕಟಸುಬ್ಬಯ್ಯ

ಪುಟ : 248 ಬೆಲೆ : ರೂ. 100

ಒಂದು ಭಾಷೆಗೆ ಬೇರೊಂದು ಭಾಷೆಯಿಂದ ಎರವಲಾಗಿ ಬಂದು ಬಳಕೆಯಾಗುವ ಪದಗಳ ಕುರಿತ ವ್ಯಾಸಂಗವು ಭಾಷಾಶಾಸ್ತ್ರದ ಬಹು ಮುಖ್ಯವಾದ ಅಂಗವಾಗಿದೆ. ಇದು ಭಾಷೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಂಸ್ಕೃತಿಯ ದೃಷ್ಟಿಯಿಂದಲೂ ಪ್ರಧಾನವಾಗಿದೆ. ಹಲವು ವರ್ಷಗಳ ಅವಧಿಯಲ್ಲಿ, ಕೆಲವು ಪ್ರಭಾವಗಳಿಂದ ತನ್ನಷ್ಟಕ್ಕೆ ನಡೆದುಹೋಗುವ ಪದಗಳ ಇಂಥ ಹೊಕ್ಕು ಬಳಕೆಯ ಅರ್ಥವ್ಯಾಪ್ತಿಯು ಅತ್ಯಂತ ರೋಚಕವಾಗಿದೆ. ಎರವಲು ಪದಗಳು ಕನ್ನಡದ ಸ್ವಭಾವವನ್ನು, ಸ್ವರೂಪವನ್ನೂ ಹೇಗೆ ಪಡೆಯುತ್ತವೆ ಎಂಬುದು ಕುತೂಹಲಕಾರಿಯಾಗಿದೆ.

ಇಗೋ ಕನ್ನಡ

ಸಾಮಾಜಿಕ ನಿಘಂಟು



ಪ್ರೊ॥ ಜಿ. ವೆಂಕಟಸುಬ್ಬಯ್ಯ

### ಇಗೋ ಕನ್ನಡ

ಸಾಮಾಜಿಕ ನಿಘಂಟು

ಪ್ರೊ॥ ಜಿ. ವೆಂಕಟಸುಬ್ಬಯ್ಯ

ಪುಟ : 448 (2ನೇ ಮುದ್ರಣ)

ಜನಪ್ರಿಯ ಆವೃತ್ತಿ : ರೂ. 150

ಗ್ರಂಥಾಲಯ ಆವೃತ್ತಿ : ರೂ. 180

ಇದೊಂದು ಅರ್ಥಕೋಶ ಅಥವಾ ನಿಘಂಟು ಎಂದು ತಿಳಿಯಬೇಕಾಗಿಲ್ಲ. ಓದಿದಾಗ ಮುದ ಕೊಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೇ ಸೀಮಿತವಾಗಿಲ್ಲ. ಪದದ ಅರ್ಥ ಹುಡುಕುತ್ತ ಅದರ ಬೇರು, ಕಾಂಡ, ರೆಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮ ಈ ಕೃತಿಗೆ ಹಿನ್ನೆಲೆಯಾಗಿದೆ.

ಪಾ. ವೆಂ. ಆಚಾರ್ಯ



ಪದಾರ್ಥ ಚಿಂತಾಮಣಿ



### ಪದಾರ್ಥ ಚಿಂತಾಮಣಿ

(ಎರಡನೇ ಮುದ್ರಣ)

ಪಾ. ವೆಂ. ಆಚಾರ್ಯ

ಪುಟ : 352 ಬೆಲೆ : ರೂ. 140

ಅಧ್ಯಯನದ ಸಂದರ್ಭದಲ್ಲಿ ಎದುರಾಗುವ ಹಲವು ಪದಗಳ ಅರ್ಥ ಹುಡುಕುತ್ತ ಹೋದಂತೆ ಅವು ನಮ್ಮನ್ನು ಹಲವು ಕಡೆ ತಿರುಗಾಡಿಸಿ ಬೇರೊಂದು ಕಾಲಕ್ಕೆ, ಬೇರೊಂದು ಸಂಸ್ಕೃತಿಗೆ ಒಯ್ದು ಅಚ್ಚರಿ ಉಂಟುಮಾಡಬಲ್ಲವು. ಈ ಪದಾರ್ಥಲೋಕ ನಾವೆಣಿಸಿಕೊಂಡದ್ದಕ್ಕಿಂತಲೂ ರಂಗುರಂಗಿನದು; ಶಬ್ದ ಮೂಲಗಳು ಯಾವ ಯಾವ ಐತಿಹಾಸಿಕ, ನರವಂಶ ಚರಿತ್ರೆಯ, ಅರ್ಥವ್ಯವಸ್ಥೆಯ, ಸಂಸ್ಕೃತಿ ಸಂಪ್ರದಾಯಗಳ ಬಗ್ಗೆ ಗುಟ್ಟು ಹೇಳುತ್ತವೆ ಎಂಬುದು ಇವುಗಳಿಂದ ತಿಳಿಯುತ್ತದೆ. ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆಯುಂಟು, ಐತಿಹ್ಯವುಂಟು, ಕಥೆಯುಂಟು. 'ವರ್ಡ್‌ಲೋರ್'ಗೆ ಸಂಬಂಧಿಸಿದ ಮೊತ್ತಮೊದಲ ಪುಸ್ತಕ.

### ಹೊಸತು

ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 250/- ನೀಡಿ ನವಕರ್ನಾಟಕ ಪ್ರಕಾಶನದ ಎಲ್ಲಾ ಪುಸ್ತಕಗಳ ಮೇಲೆ 20% ರಿಯಾಯಿತಿ ಪಡೆಯಿರಿ


## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು-560 001

ದೂರವಾಣಿ / ಫ್ಯಾಕ್ : 2203580 / 81 / 82 e-mail : nkp@bgl.vsnl.net.in

ನವಕರ್ನಾಟಕ ಶಾಖೆಗಳು

5ನೇ ಮುಖ್ಯ ರಸ್ತೆ ಗಾಂಧಿನಗರ
ಬೆಂಗಳೂರು - 560 009 ☎ : 2251138

ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - 560 009 ☎ : 2872385

ಕೆ. ಎಸ್. ಆರ್. ರಸ್ತೆ
ಮಂಗಳೂರು - 575 001 ☎ : 441016

ರಾಮಸ್ವಾಮಿ ವೃತ್ತ
ಮೈಸೂರು - 570 024 ☎ : 444094

ಸ್ಟೇಷನ್ ರಸ್ತೆ
ಗುಲ್ಬರ್ಗಾ - 585 102 ☎ : 24302

# ಹೊಸತು

## ಒಳಗೇನಿದೆ.....




ಚಿತ್ರಗಳು : ಗುಜ್ಜಾರ್, ಮೋಹನ, ನಾಡಿಗ್, ರವಿಕುಮಾರ್ ಅಜ್ಜೀಪುರ
ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ, ಛಾಯಾಚಿತ್ರ : ಬಿ. ವಿ. ಶ್ರೀನಿವಾಸ್
ಕಚೇರಿ ಸಹಕಾರ : ಜಿ. ವಿ. ತೇಜೋವತಿ


ಅಲ್ಮೋರಾ ಬಳಿ ಮಾಯಾವತಿ ಎಂಬಲ್ಲಿ ಪ್ರಸಿದ್ಧವಾದ ರಾಮಕೃಷ್ಣಾಶ್ರಮವೊಂದಿದೆ. ಸುಮಾರು ಮೂರು ದಶಕಗಳ ಹಿಂದೆ ಅಲ್ಲಿ ಮೂರು-ನಾಲ್ಕು ದಿನ ತಂಗಿದ್ದೆ. ಆಗ್ಗೆ ಒಬ್ಬ ಸ್ವಾಮೀಜಿಯ ಭೇಟಿಯಾಗಿತ್ತು. ಗಟ್ಟಿಮುಟ್ಟಾದ ಆಸಾಮಿ. ತಿನ್ನುವುದು, ಉಣ್ಣುವುದು ಚೆನ್ನಾಗಿ ಮಾಡುತ್ತಿದ್ದರು. ಬೇರೆಯವರನ್ನೂ ಹಾಗೇ ನೋಡಿಕೊಳ್ಳುತ್ತಿದ್ದರು. ಸ್ವಲ್ಪ ತಮಾಷೆಯಾಗಿ ಮಾತನಾಡುತ್ತಾ ನಾನು ಹೇಳಿದೆ : ''ಇಷ್ಟು ಸೊಗಸಾದ ಜಾಗದಲ್ಲಿ ತಂಪಾಗಿ ಬಾಳುವ ಅವಕಾಶವಿರುವುದಾದರೆ ನಾನೂ ಸಂನ್ಯಾಸ ಸ್ವೀಕರಿಸಿಯೇನು.'' ವಿನೋಬಾಜಿಯವರಿಗೆ ಆಪ್ತರಾಗಿದ್ದ ಶಂಕರರಾವ್ ದೇವ್ ಅವರಿಗೂ ಒಮ್ಮೆ ಹಾಗೆ ಹೇಳಿದ್ದೆ : ''ನಿಮ್ಮ ಸಾತ್ವಿಕ ಉಪಹಾರ ನಮ್ಮ ಊಟಕ್ಕಿಂತ ಚೆನ್ನಾಗಿದೆ. ಮೊಸರು, ಜೇನುತುಪ್ಪ, ದ್ರಾಕ್ಷಿ ಇವೆಲ್ಲಾ ಯಾರಿಗೆ ಬೇಡ!'' -ಅದಿರಲಿ, ರಾಮಕೃಷ್ಣಾಶ್ರಮದ ಸ್ವಾಮಿಗಳು ನೀಡಿದ ಉತ್ತರ ಹೀಗಿತ್ತು : ''ನಾವು ಎಲ್ಲವನ್ನೂ ಬಿಟ್ಟು ಸಂನ್ಯಾಸ ಸ್ವೀಕರಿಸಿದ್ದೇವೆ. ಹಾಗಿರುವಾಗ ಇಷ್ಟಾದರೂ ಬೇಡವೆ!'' ಇಷ್ಟೇ ಸಾಕೆ, ಎನ್ನುತ್ತಾರೆ ಇನ್ನು ಕೆಲವರು.

ನಮ್ಮ ಪೇಜಾವರ ಸ್ವಾಮಿಗಳು ಸಂನ್ಯಾಸ ಸ್ವೀಕರಿಸಿದ ೬೦ನೆಯ ವಾರ್ಷಿಕೋತ್ಸವ ಬೆಂಗಳೂರಿನಲ್ಲಿ ಎಷ್ಟು ವೈಭವದಿಂದ ನಡೆಯಿತೆಂದರೆ ಒಬ್ಬ ಸಾಮಾನ್ಯ ವ್ಯಕ್ತಿ ತನ್ನ ೧೦೦ನೆಯ ಹುಟ್ಟುಹಬ್ಬವನ್ನು ಅದರ ಸಾವಿರದೊಂದು ಪಾಲಿನ ಮಟ್ಟಿಗೂ ಆಚರಿಸಿಕೊಳ್ಳಲಾರ. ಸಂನ್ಯಾಸದ ಸ್ವೀಕಾರವು ಇಷ್ಟೊಂದು ಸಂಭ್ರಮದ ಹಾಗೂ ಖರ್ಚಿನ ಬಾಬ್ತು ಎಂಬುದೊಂದು ಅಶ್ಲೀಲ ವಿಪರ್ಯಾಸ. ಅಲ್ಲಿ ಉತ್ಸವದ ಸಡಗರಕ್ಕೇನು ಅರ್ಥವಿದ್ದೀತು! ವ್ಯಾಮೋಹದ ಪರಮಾವಧಿಗೂ ಸಂನ್ಯಾಸಕ್ಕೂ ಎತ್ತಣ ಸಂಬಂಧ! ತಪಶ್ಚರ್ಯೆಯ ಫಲವನ್ನು ಶಿಷ್ಯಕೋಟಿಗೆ ಮುಟ್ಟಿಸುವ ಕಾತುರವಿರುವ ಸಂನ್ಯಾಸಿ ಬೇಕಾದರೆ ಉಪದೇಶ ನೀಡಬಹುದು; ಆದರೆ ಅದಕ್ಕೆ ಡಂಗುರ, ಗದ್ದಲ, ಬೀದಿಬೀದಿಯಲ್ಲಿ ಚಿತ್ರಫಲಕ, ಹಣ ಚೆಲ್ಲುವ ಕಾರ್ಯಕ್ರಮ, ಇವೆಲ್ಲ ಅಸಹ್ಯ ಹುಟ್ಟಿಸುವಂತಹ ಕ್ರಮಗಳು.

ಸಮಾರಂಭದ ಸಂದರ್ಭದಲ್ಲಿ ಹಾಜರಿದ್ದ ಹಿರಿಯ ನಾಯಕರನ್ನು ನೋಡಿದರೆ ಸ್ವಾಮೀಜಿಯವರ ಸಂನ್ಯಾಸದೀಕ್ಷೆ ಮತ್ತು ವೇದಾಂತದ ಅಧ್ಯಯನಗಳಿಗಿಂತಲೂ ಅವರ ರಾಜಕೀಯ ಒಲವುಗಳು ಹಾಗೂ ಕ್ರಿಯಾಶಾಲಿತ್ವವೇ ಹೆಚ್ಚು ಆಕರ್ಷಕವಾಗಿ ಕಂಡುವೇನೋ ಎಂಬ ಭಾವನೆ ಅನಿವಾರ್ಯವಾಗಿತ್ತು. ನವೆಂಬರ್ ೨೬ರ ಸಮಾರಂಭದಲ್ಲಿ ಕೇಂದ್ರಮಂತ್ರಿ ಮುರಲಿ ಮನೋಹರ ಜೋಶಿಯವರು ಉಪಸ್ಥಿತರಿದ್ದು ಆಶ್ಚರ್ಯಕರವಾದ ಉಪನ್ಯಾಸ ನೀಡಿದರು. ಆಧ್ಯಾತ್ಮವೇ ಸರ್ವಸ್ವ, ಅದರ ಮುಂದೆ ಅಭಿವೃದ್ಧಿಯ ಮಾತೇ ಅರ್ಥಹೀನ, ವಿದೇಶಿಯರು ಅನಾಗರಿಕರಾಗಿದ್ದ ವೇಳೆಗಾಗಲೆ ನಾವು ಸಂಸ್ಕೃತಿಯ ಪರಾಕಾಷ್ಠೆ ಮುಟ್ಟಿದ್ದೆವು, ಅವರಿಂದ ಕಲಿಯಬೇಕಾದ್ದೇನಿದೆ, ಇತ್ಯಾದಿ ಅವರು ನಿರರ್ಗಳವಾಗಿ ಮಾತನಾಡಿದಾಗ ಅವರ ಭೌತಶಾಸ್ತ್ರದ ಪ್ರಜ್ಞೆ ಎಲ್ಲಿ ಮಾಯವಾಯಿತೆಂಬ ಕೌತುಕ ಉಂಟಾಗುವಂತಿತ್ತು. ಸಚಿವ ಸಂಪುಟದ ಸಭೆಗಳಲ್ಲಿಯೂ ಇವರು ಈ ಪ್ರತಿಪಾದನೆಗಳನ್ನು ಮಾಡುತ್ತಾರೆಯೆ ಎಂಬುದನ್ನು ತಿಳಿಯುವ ಕುತೂಹಲವೂ ಉಂಟಾಗುತ್ತಿತ್ತು.

ವಾಸ್ತವಿಕ ಪ್ರಪಂಚದ ಅನೇಕ ಸವಾಲುಗಳ ಸನ್ನಿವೇಶಗಳಲ್ಲಿ ಸಂನ್ಯಾಸಿಗಳು ಮಧ್ಯಪ್ರವೇಶ ಮಾಡಬಾರದೆಂದೇನೂ ಇಲ್ಲ. ಆದರೆ ಇಂದು ನಾವು ಕಾಣುತ್ತಿರುವ ಸ್ವಾಮಿಗಳನೇಕರ ವ್ಯವಹಾರಗಳು ಅಷ್ಟೇನೂ ಆಪ್ಯಾಯಮಾನವಾಗಿಲ್ಲ. ಪೇಜಾವರ ಸ್ವಾಮಿಗಳ ವಿಜೃಂಭಿತ ವಜ್ರಮಹೋತ್ಸವದ ಆಚರಣೆಯು ಮತ್ತೊಮ್ಮೆ ಅದನ್ನು ಮನನ ಮಾಡುವಂತೆ ಮಾಡಿತು.

★ ★ ★

ಡಿಸೆಂಬರ್ ೨೫ ಮತ್ತು ೨೬ರಂದು ಹಿರಿಯ ಸಾಹಿತಿ ವ್ಯಾಸರಾಯ ಬಲ್ಲಾಳರ ೭೫ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಸಂವಾದ, ವಿಚಾರಗೋಷ್ಠಿ ಹಾಗೂ ಅಭಿನಂದನಾ ಸಮಾರಂಭಗಳು ನಡೆದವು. ಅದರಲ್ಲಿ ಅದ್ದೂರಿ, ಆಡಂಬರಗಳಿರಲಿಲ್ಲ. ಪ್ರಚಾರಪ್ರಿಯರಲ್ಲದ ಬಲ್ಲಾಳರಿಗೆ ಅವು ಅಹಿತವೂ ಆಗಿರುತ್ತಿದ್ದುವೇನೋ! ಹೇಮಂತಗಾನ, ಉತ್ತರಾಯಣ, ಬಂಡಾಯ, ಮುಂತಾದ ಪ್ರಭಾವಶಾಲಿ ಕಾದಂಬರಿಗಳನ್ನು ಕನ್ನಡ ಸಾಹಿತ್ಯಲೋಕಕ್ಕೆ ಕೊಟ್ಟಿರುವ ಬಲ್ಲಾಳರು ಖ್ಯಾತ ವಿಚಾರವಂತರು, ಸ್ವತಂತ್ರ ಮನೋಭಾವದವರು, ಕ್ರಿಯಾಶಾಲಿಗಳು. ಅವರ ಪ್ರಜ್ಞೆ ಸಂ-ನ್ಯಸ್ತವಾದುದೆಂದು ಎಲ್ಲ ಓದುಗರಿಗೂ ತಿಳಿದಿದೆ. ಆದರೆ ಉಪದೇಶ- ಸಹಸ್ರ ಅವರ ಬಾಯಿಂದ ಉದುರುವುದಿಲ್ಲ. ಅಭಿನಂದನಾ ಸಮಾರಂಭಗಳಲ್ಲಿ ಆರ್ಭಟ ವಿಲ್ಲದೆಯೂ ಅರ್ಥವಂತಿಕೆ ಸಾಧ್ಯವೆಂಬುದನ್ನು ಬಲ್ಲಾಳರ ಹುಟ್ಟುಹಬ್ಬದ ಕಾರ್ಯಕ್ರಮ ತೋರ್ಪಡಿಸಿದೆ. ಇದನ್ನು ನೋಡಿದರೆ ಸಾಹಿತಿಗಳು ಸ್ವಾಮಿಗಳಾಗುವುದು ನಿರರ್ಥಕವೆಂದು ಸ್ಥಿರಪಟ್ಟಿದೆ.

- [illegible signature]

ತಿಂಗಳ ಪತ್ರಿಕೆ
**ಹೊಸತು**
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧ ಸಂಚಿಕೆ - ೬ ಜನವರಿ ೨೦೦೦



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

**ಹೊಸತು ಕಚೇರಿಯ ವಿಳಾಸ**

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ವಿಕೃತ ತೀರ್ಥಯಾತ್ರೆ

ನಮ್ಮ ಸಂವಿಧಾನದ ಪ್ರಕಾರ ಕಾರ್ಯಾಂಗವು ತನ್ನ ವಿಧಿ-ವಿಧಾನಗಳನ್ನು ಶಾಸಕಾಂಗದಿಂದ ರೂಪಿಸಿಕೊಳ್ಳಬೇಕು: ಯಾವ ಉದ್ದೇಶಕ್ಕಾಗಿ, ಎಂತಹ ಕಟ್ಟುಪಾಡುಗಳನ್ನು ಅನುಸರಿಸಬೇಕೆಂಬುದನ್ನು ನಿರ್ದೇಶಿಸುವುದು ಶಾಸಕಾಂಗ. ವಿಧಿಗಳ ಉಲ್ಲಂಘನೆ ಅಥವಾ ಕಾರ್ಯಾಚರಣೆಯ ನ್ಯೂನತೆಗಳನ್ನು ಸಮೀಕ್ಷಿಸಿ ತಕ್ಕ ಮಾರ್ಗದರ್ಶನ ಮಾಡುವುದು ಶಾಸಕಾಂಗ. ಕಾರ್ಯಾಂಗವು ತನ್ನ ಸರಿ-ತಪ್ಪುಗಳ ಸಮರ್ಥನೆ ಮಾಡಿಕೊಳ್ಳಬೇಕಾದ್ದು ಸಹ ಶಾಸಕಾಂಗದೆದುರು. ಆದರೆ ಪ್ರಜಾಪ್ರಭುತ್ವವೆನ್ನಲಾದ ನಮ್ಮ ಕ್ರಮದಲ್ಲಿ ಶಾಸನಸಭೆ, ಲೋಕಸಭೆಗಳಿಗಿಂತಲೂ ಉನ್ನತ ಸ್ಥಾನದಲ್ಲಿರುವಂತೆ ವ್ಯವಹರಿಸುವ ಒಂದು ವಿಶಿಷ್ಟ 'ಸಭೆ' ಇದೆ. ಅದು ವಾಣಿಜ್ಯ ಮತ್ತು ಉದ್ದಿಮೆಗಳ ಅರಸರ ಮಹಾಸಭೆ. ಪ್ರತಿವರ್ಷ ಅದು ಅಧಿವೇಶನಗಳನ್ನು ನಡೆಸುತ್ತದೆ. ಕೇಂದ್ರ ಮಂತ್ರಿಗಳು ಅಲ್ಲಿಗೆ ಹೋಗಿ ನಜರು ಒಪ್ಪಿಸುವುದು ಒಂದೆರಡು ದಶಕಗಳಿಂದ ರೂಢಿಗೆ ಬಂದಿದೆಯಾದರೂ ಉದಾರೀಕರಣದ ಪ್ರಕ್ರಿಯೆ ಆರಂಭವಾದ ನಂತರ ಅದರ ಮಹತ್ವ ಹೆಚ್ಚಿದೆ. ಪ್ರಧಾನಿ, ಅರ್ಥಸಚಿವ, ವಾಣಿಜ್ಯಸಚಿವ, ವಿದೇಶಾಂಗಸಚಿವ, ಗೃಹಸಚಿವ, ಮುಂತಾದವರಲ್ಲದೆ ವಿರೋಧ ಪಕ್ಷದ ನಾಯಕರು ಸಹ ಅಲ್ಲಿಗೆ ಹೋಗಿ ತಮ್ಮ ವರದಿಗಳನ್ನು ಒಪ್ಪಿಸುತ್ತಾರೆ ಮತ್ತು 'ಮಹಾಸಭೆ'ಯ ಅನುಮತಿ-ಆಶೀರ್ವಾದಗಳನ್ನು ಪಡೆದು ಬರುತ್ತಾರೆ. ಇದೊಂದು ವಿಕೃತ ತೀರ್ಥಯಾತ್ರೆ. ಪಾರ್ಲಿಮೆಂಟಿಗಿಂತಲೂ ಉದ್ಯಮಪತಿಗಳು ಬಲಶಾಲಿಗಳು ! ಜನರ ಅನುಮೋದನೆಗಿಂತ ಇವರ ಅನುಮೋದನೆ-ಬೆಂಬಲಗಳು ಆದ್ಯತೆ ಪಡೆಯುವ ಸನ್ನಿವೇಶ ನಮ್ಮದು.

ಡಿಸೆಂಬರ್ ಅಧಿವೇಶನದಲ್ಲಿ ವಾಜಪೇಯಿ, ಸಿನ್ಹಾ, ಅದ್ವಾನಿ, ಸೋನಿಯಾ, ಎಲ್ಲಾ ಹೋಗಿ ತಾವೆಲ್ಲಾ ವಾಣಿಜ್ಯೋದ್ಯಮಪತಿಗಳ ಹಿತರಕ್ಷಣೆಗಾಗಿ ಅವರ ಆಣತಿಯಂತೆ ನಡೆದುಕೊಳ್ಳಲು ಬದ್ಧರೆಂದು ಸಾರಿ ಬಂದಿದ್ದಾರೆ. ಅಂದರೆ, ಇಡೀ ದೇಶದ ಆರ್ಥಿಕ ವ್ಯವಸ್ಥೆ ಯಾರಿಗಾಗಿ ರೂಪಿತವಾಗುತ್ತಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಜನರ ಕಣ್ಣೀರೊರೆಸುವುದೇ ತಮ್ಮ ಪರಮ ಧ್ಯೇಯವೆಂದು ಹೇಳಿಕೊಳ್ಳುತ್ತಲೇ ಅವರ ದಮನ ಮತ್ತು ಶೋಷಣೆಯಲ್ಲಿ ತೊಡಗಿರುವವರ ಕೈಂಕರ್ಯ ನಡೆಸುವುದು ಆಳುವ ಪಕ್ಷಗಳು ಮಾಡುತ್ತಿರುವ ಕೆಲಸ. ವಿರೋಧ ಪಕ್ಷಗಳ ದೊಡ್ಡ ಭಾಗವಾದ ಸೋನಿಯಾ ಪಕ್ಷವೂ ಅದರಲ್ಲಿ ಸಹಭಾಗಿ, ಸಮಭಾಗಿ.

ಆದ್ದರಿಂದಲೇ ವಿಮಾ ಮಸೂದೆ, ಪೇಟೆಂಟ್ ಕಾಯಿದೆ, ಬೌದ್ಧಿಕ ಆಸ್ತಿಯ ಹಕ್ಕುಗಳ ಕಾಯಿದೆ, ಇತ್ಯಾದಿಗಳನ್ನು ವಾಜಪೇಯಿ ಮತ್ತು ಸೋನಿಯಾ ಒಕ್ಕೊರಲಿನಿಂದ ಸ್ವಾಗತಿಸಿ ಅವನ್ನು ಶಾಸನಗಳನ್ನಾಗಿ ಮಾಡುತ್ತಾರೆ. ಅವುಗಳಿಂದ ಜನಸಾಮಾನ್ಯರಿಗೆ ಕೇಡುಗಾಲ ಸಮೀಪಿಸಿದರೆ ಅವರಿಗೆ ತಳಮಳವಿಲ್ಲ. ಏಕೆಂದರೆ, ಅವರು ದೇಶದ ಅಭಿವೃದ್ಧಿಯನ್ನು ಪರಿಗಣಿಸುವುದು ವಾಣಿಜ್ಯೋದ್ಯಮಗಳ ಯಜಮಾನರ ನಿಟ್ಟಿನಿಂದ. ಸಾಮಾನ್ಯ ರೈತ, ಕೂಲಿಯಾಳು, ಕಾರ್ಮಿಕ, ಮುಂತಾದ ದುಡಿಯುವ ಜನ ಈ ಶಾಸನಗಳ ಅಡಿಯಲ್ಲಿ ಸಿಕ್ಕಿ ನಿರ್ಜೀವಿಗಳಾದರೆ ಅಡ್ಡಿಯಿಲ್ಲ. ಅದರಿಂದ ಉದ್ಯಮಪತಿಗಳ ಲಾಭಕ್ಕೇನೂ ಕೊರತೆಯುಂಟಾಗುವುದಿಲ್ಲವೆಂಬ ಖಾತರಿ ಇದೆ.

ಅಂತರರಾಷ್ಟ್ರೀಯ ಮಟ್ಟದಲ್ಲೂ ಇದೇ ಸೂತ್ರ ಅನ್ವಯಿಸುತ್ತದೆ. ಪಾಶ್ಚಿಮಾತ್ಯ ರಾಷ್ಟ್ರಗಳ ಸರ್ಕಾರಗಳು ಪ್ರಜಾತಂತ್ರ, ಮಾನವ ಹಕ್ಕು, ನ್ಯಾಯಯುತವಾದ ವ್ಯಾಪಾರ, ಮುಂತಾದ ಸಿಹಿಮಾತುಗಳನ್ನಾಡುತ್ತಾ ಬಹುರಾಷ್ಟ್ರೀಯ ಕಂಪನಿಗಳ ರಕ್ಷಣೆ ಮತ್ತು ಬಲವರ್ಧನೆಗಾಗಿ ತಮ್ಮೆಲ್ಲ ಬಲವನ್ನೂ ಪ್ರಯೋಗಿಸುತ್ತವೆ. ಖಾಸಗಿತನವನ್ನು ಹೊಗಳುವ ಈ ಸರ್ಕಾರಗಳು ಖಾಸಗಿ ಲಾಭದ ಹೆಚ್ಚಳಕ್ಕೆ ನೇರವಾಗಿ ನೆರವಾಗುತ್ತವೆ. ಒಂದು ಸಾಧಾರಣ ಅಂಶವನ್ನು ಗಮನಿಸಿದರೆ ಇದು ಮನದಟ್ಟಾಗುತ್ತದೆ. ಇತ್ತೀಚೆಗೆ ಅಮೆರಿಕಾದ ಸಿಯಾಟಲ್‌ನಲ್ಲಿ ಜರುಗಿದ ವಿಶ್ವ ವ್ಯಾಪಾರ ಸಂಸ್ಥೆಯ ಅಧಿವೇಶನವನ್ನು ಆಯೋಜಿಸಲು 'ಸಿಯಾಟಲ್ ಆತಿಥೇಯ ಕೂಟ'ವೊಂದನ್ನು ರಚಿಸಲಾಗಿತ್ತು. ಅದರಲ್ಲಿದ್ದವರೆಲ್ಲಾ ಬಹುರಾಷ್ಟ್ರೀಯ ಕಂಪನಿಗಳವರೇ. ಮೈಕ್ರೋಸಾಫ್ಟ್ ಮತ್ತು ಬೋಯಿಂಗ್ ಎಂಬ ಎರಡು ಕಂಪನಿಗಳು ಅತಿಮುಖ್ಯ ಪ್ರಾಯೋಜಕರು. ಇಂತಿಷ್ಟು ಲಕ್ಷ ಡಾಲರುಗಳನ್ನು ಕೊಟ್ಟರೆ ಬೇರೆ ಬೇರೆ ದೇಶಗಳ ಇಂತಿಷ್ಟು ಮಂತ್ರಿಗಳೊಡನೆ ಭೋಜನಕೂಟದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಡಲಾಗುವುದೆಂಬ ಆಮಿಷ ಬೇರೆ ! ಅಲ್ಲಿ ವ್ಯವಹಾರಗಳನ್ನು ಕುದುರಿಸಿಕೊಳ್ಳಬಹುದು. ಹೀಗೆ ಉಂಟಾದ ಒಪ್ಪಂದಗಳು ಆಯಾ ದೇಶಗಳಿಗೆ ಆಮೇಲೆ ನೇಣು ಹಗ್ಗಗಳಾಗುತ್ತವೆ. ಅದನ್ನು ವಿವೇಚನೆಯಿಂದ ತಿಳಿದುಕೊಂಡು ಬಹುರಾಷ್ಟ್ರೀಯ ಕಂಪನಿಗಳ ಹಾಗೂ ಅವುಗಳ 'ಸ್ವದೇಶ' ಭಂಟರ ಹುನ್ನಾರಗಳನ್ನು ಸೋಲಿಸುವುದು ಜನಸಮುದಾಯದ ಸುಸಂಘಟಿತ ಹೋರಾಟಗಳ ಕರ್ತವ್ಯವಾಗಿದೆ.

## ಕಣ್ಣೀರಿದ್ದರೆ ಅದನ್ನೀಗ ಸುರಿಸತೊಡಗಿ.....

ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸೈದ್ಧಾಂತಿಕ ಬದ್ಧತೆಯು ಅಪ್ರಸ್ತುತವೆಂದು ಅದನ್ನು ಅತ್ಯಂತ ಹೀನಾಯವಾದ ರೀತಿಯಲ್ಲಿ ಆಚರಣೆಗೆ ತರುತ್ತಿರುವ ವ್ಯಕ್ತಿಯೆಂದರೆ ಕಲ್ಯಾಣ ಸಿಂಗ್. ಯಾವ ಪಕ್ಷದ ಸಿದ್ಧಾಂತ ಮತ್ತು ಚಟುವಟಿಕೆಗಳು ಆತನನ್ನು ಮುಖ್ಯಮಂತ್ರಿಯ ಸ್ಥಾನಕ್ಕೆ ಕೊಂಡೊಯ್ದುವೋ ಅವನ್ನು ಒಂದರೆಕ್ಷಣದಲ್ಲಿ ಆತ ನಿರಾಕರಿಸಲು ಸಿದ್ಧನಿದ್ದಾನೆ. ತಾವು ಏರಿಹೋದ ಏಣಿಯನ್ನು ಒದ್ದು ನಿಲ್ಲಬಲ್ಲ ಇಂತಹ ನಾಯಕರು ರಾಜಕೀಯವು ಹೊಲಸುಗೊಳ್ಳುವುದಕ್ಕೆ ಕಾರಣರಾಗುತ್ತಾರೆ. ಭಾರತೀಯ ಜನತಾ ಪಕ್ಷ ಮತ್ತು ಅದರ ಪರಿವಾರವನ್ನು ತೊರೆದುಬಂದ ಧೀಮಂತನೆಂದು ಯಾರಾದರೂ ಆತನನ್ನು ಶ್ಲಾಘಿಸುವುದಾದರೆ ಅದು ಕುರುಡುತನವಾಗುತ್ತದೆ. ಪಾಂಡಿಚೆರಿಯಲ್ಲಿ ಕಮ್ಯುನಿಸ್ಟ್ ಪಕ್ಷದ ಶಾಸಕನೊಬ್ಬ ಪಕ್ಷದಿಂದ ಹೊರಬಂದಿರುವುದನ್ನು ಸ್ವಾಗತಿಸುವುದೂ ಅಷ್ಟೇ ಮೂರ್ಖತನ. ಇವರಾರೂ ಸೈದ್ಧಾಂತಿಕ ನಿಲುವುಗಳನ್ನು ಗಂಭೀರವಾಗಿ ವಿಶ್ಲೇಷಣೆ ಮಾಡಿಕೊಂಡು ಪ್ರಜ್ಞಾಪೂರ್ವಕವಾಗಿ ಬದಲಾವಣೆ ಹೊಂದುವ ಜನರಲ್ಲ. ಅವರು ಕಂಡಿರುವ ಅಧಿಕಾರದ ಅಥವಾ ಸ್ಥಾನದ ವ್ಯಾಮೋಹವಷ್ಟೇ ಅವರು ಕಾಲದಿಂದ ಕಾಲಕ್ಕೆ ತಾಳುವ ನಿಲುವುಗಳಿಗೆ ಸಮರ್ಥನೆ. ಆತ್ಮಾವಲೋಕನದಿಂದ ಮೂಡಿಬಂದ ಹೊಸ ಸೈದ್ಧಾಂತಿಕ ಪ್ರಜ್ಞೆಯ ಪ್ರಶ್ನೆಯೇ ಬೇರೆ. ಅಲ್ಲಿ ಸ್ವಂತದ ಏಳಿಗೆಯು ನಿರ್ಧಾರಕ ತತ್ತ್ವವಾಗಿರುವುದಿಲ್ಲ. ಸ್ವಾರ್ಥಸಾಧನೆಗಾಗಿ ಸೈದ್ಧಾಂತಿಕ ನಿಲುವುಗಳನ್ನು ಗಾಳಿಗೆ ತೂರುವುದು ಯಾವ ಸಂದರ್ಭದಲ್ಲೂ ಶೋಭಿಸುವುದಿಲ್ಲ. ಅಂತಹ ಪ್ರವೃತ್ತಿ ನಮ್ಮಲ್ಲಿ ಹೆಚ್ಚುತ್ತಿರುವುದು ಆತಂಕದ ವಿಷಯ. ಆ ಪ್ರವೃತ್ತಿಯವರು ರಾಜಕೀಯ ಪರಿಸರದಲ್ಲಿ ಮಿಡತೆಗಳಾಗಿ ಹಾವಳಿ ನಡೆಸಿ ಕ್ಷೋಭೆ ತರುತ್ತಾರೆ. ಕಲ್ಯಾಣ ಸಿಂಗ್‌ಗೆ ರಾಮಮಂದಿರದ ಬಗೆಗಿನ ಆಸ್ಥೆ ಸಹ ತನ್ನ ಕಲ್ಯಾಣಕ್ಕಾಗಿ ಮಾತ್ರ. ಆತ ಈಗ ಬಿಜೆಪಿ, ಸಂಘಪರಿವಾರಗಳನ್ನು ಯಾವುದಕ್ಕೆ ದೂಷಿಸುತ್ತಿದ್ದಾರೋ ಆ ಕಳಂಕವನ್ನು ಅವರೇ ಹೊತ್ತಿದ್ದಾರೆ. ಬೇರೆ ಪಕ್ಷಗಳಿಗಿಂತ ತಾನು ಭಿನ್ನವೆಂದು ಹೇಳಿಕೊಳ್ಳುವ ಪಕ್ಷದ ಕಥೆ-ವ್ಯಥೆ ಹೀಗಿದೆ.

ಇದು ಒಂದು ಭಾಗವಾದರೆ ಇನ್ನೊಂದು ಭಾಗ ಅಷ್ಟೇ ಕ್ಷುದ್ರವಾಗಿ ಕಾಣುತ್ತದೆ. ಅದು ಒಂದು ರಾಜಕೀಯ ಪಕ್ಷವು ಕಲ್ಯಾಣ ಸಿಂಗ್‌ನಂತಹ ವ್ಯಕ್ತಿಯನ್ನು ಪೋಷಿಸುವ ಹಾಗೂ ಬಳಸಿಕೊಳ್ಳುವ ವಿಧಾನಕ್ಕೆ ಸಂಬಂಧಿಸಿದ್ದು. ಆತನ ಮನೋಭಾವ ಭಾಜಪದ ನಾಯಕರಿಗೆ ಈವರೆಗೆ ತಿಳಿದಿರಲಿಲ್ಲವೆಂದೇನೂ ಅಲ್ಲ; ಆದರೆ ತಾನು ಮೇಲೇರಲು ಕಲ್ಯಾಣ ಸಿಂಗ್ ಒಂದು ಉಪಯುಕ್ತ ಏಣಿಯಾಗಿದ್ದುದರಿಂದ ಆತನನ್ನು ಸಹಿಸಿಕೊಂಡು ಮುಂದಾಳತ್ವ ನೀಡಿದ್ದು ಭಾಜಪದ ಕಾರ್ಯವಿಧಾನ. ಆತನು ಬೇಕಾಗಿದ್ದುದು ಆತ ಪ್ರತಿನಿಧಿಸುವ ಹಿಂದುಳಿದ ವರ್ಗಗಳನ್ನು ಒಲ್ಲೈಸಿಕೊಳ್ಳುವುದಕ್ಕಾಗಿ. ಆದರೆ ಆತನ ವರ್ಚಸ್ಸು ರಾಷ್ಟ್ರೀಯ ನಾಯಕರ ಸ್ಥಾನಗಳಿಗೆ ಹೊಡೆತ ಉಂಟುಮಾಡುವ ಸಾಧ್ಯತೆ ಕಂಡುಬಂದಾಗ ಕೂಡಲೇ ಆತ ಪ್ರಾಕೃತನಾಗಿಬಿಡುತ್ತಾನೆ. ಎಲ್ಲ ರೀತಿಯ ದೂಷಣೆಗಳಿಗೂ ಪಾತ್ರನಾಗುತ್ತಾನೆ. ಇದು ಕೇವಲ ಭಾಜಪ-ಕಲ್ಯಾಣ ಸಿಂಗ್ ಸಂಬಂಧಗಳಿಗೆ ಮಾತ್ರ ಸೀಮಿತವಲ್ಲ. ಒಂದರ್ಥದಲ್ಲಿ ಬಹುತೇಕ ಎಲ್ಲ ಪಕ್ಷಗಳಲ್ಲಿ, ಸಂಘ-ಸಂಸ್ಥೆಗಳಲ್ಲಿ ಈ ಅವಾಂತರ ಕಂಡುಬರುತ್ತದೆ.

ನಮ್ಮ ದೇಶದ ಪರಂಪರೆಯಲ್ಲಿ ಇದು ಅತಿನೂತನವಾದ ವಿದ್ಯಮಾನವೇನೂ ಅಲ್ಲ. ಆದರೆ ಈಗಲೂ ಅದು ಮುಂದುವರೆಯುವಂತಾಗಿದೆಯಲ್ಲ ಎಂಬುದೇ ಖೇದದ ಸಂಗತಿ. ಕಲ್ಯಾಣ ಸಿಂಗರ ಹಿಂದಿನ ಕಲ್ಯಾಣ ಗುಣಗಳನ್ನೆಲ್ಲಾ ಮರೆತು ಅವರನ್ನು ಆರಾಧಿಸುವುದು ಎಷ್ಟು ಮೂರ್ಖತನವೋ ಅಷ್ಟೇ ಮೂರ್ಖತನ ಅವರು ಯಾವಾಗಲೂ ಇಂಥವರೇ ಆಗಿದ್ದರೆಂದು ತೆಗಳುವುದರಲ್ಲೂ ಇದೆ. ಎರಡೂ ಅವಕಾಶವಾದಿತನದ ಸಾಕ್ಷಿಗಳೇ ಆಗುತ್ತವೆ. ಇವನ್ನು ಮೀರಿ ನಿಖರವಾದ ಸೈದ್ಧಾಂತಿಕ ನೆಲೆಯಲ್ಲಿ ನಿಲ್ಲುವಂತಹ ರಾಜಕಾರಣ ನಮಗೆ ಅಗತ್ಯವಾಗಿದೆ. ನಮ್ಮ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಅದರಿಂದ ಸಾಧ್ಯವೇ ವಿನಾ ರಾಜಕೀಯ ಮಂಗಗಳ ಸಾಂದರ್ಭಿಕ ಹಾರಾಟಗಳನ್ನು ಪುರಸ್ಕರಿಸುವುದರಿಂದ ಅಲ್ಲ. ಈ ಮಂಗಗಳನ್ನು ಕಂಡಾಗ ಶೇಕ್ಸ್‌ಪಿಯರನ ಒಂದು ಮಾತು ನೆನಪಾಗುತ್ತದೆ : 'ಕಣ್ಣೀರಿದ್ದರೆ ಅದನ್ನೀಗ ಸುರಿಸಲು ಸಿದ್ಧರಾಗಿ.' ಸಿದ್ಧಾಂತರಹಿತ ರಾಜಕೀಯ ಪುಂಡಾಟವನ್ನು ಕಂಡು ಮನಸ್ಸು ನೋಯಬೇಕಾದ್ದು ಸಹಜ.

## ಹಿಂಸೆ-ಪ್ರತಿಹಿಂಸೆ

ಕೇರಳದ ಕಣ್ಣೂರು ಜಿಲ್ಲೆಯ ವಿದ್ಯಮಾನಗಳು ಜನರ ಕಣ್ಣು ತೆರೆಸಲು ಇನ್ನೂ ಶಕ್ತವಾಗಿಲ್ಲದಿರುವುದು ಶೋಚನೀಯ. ಸಮಾಜ ಮತ್ತು ಸಂಸ್ಕೃತಿಗಳ ಬಗೆಗೆ ಎರಡು ಬೇರೆ ಬೇರೆ ಕಲ್ಪನೆಗಳನ್ನುಳ್ಳ ಬಣಗಳು ಅಲ್ಲಿ ಸೆಣಸಾಟ ನಡೆಸಿವೆ. ಬೇರೆಡೆಗಳಲ್ಲೂ ಅದು ನಡೆಯುತ್ತಿದೆಯಾದರೂ ಕಣ್ಣೂರಿನಲ್ಲಿ ಅದು ವಿಶಿಷ್ಟ ರೂಪವನ್ನು ಪಡೆದಿದೆ. ಒಂದು ಬಣವು ಇನ್ನೊಂದನ್ನು ಬೆಳೆಯದಂತೆ ಅಥವಾ ಉಳಿಯದಂತೆ ಮಾಡಲು ಯಾವ ಮಾರ್ಗ ಅನುಸರಿಸಬಹುದು ಮತ್ತು ಅನುಸರಿಸಬೇಕು ಎಂಬುದರ ಮೀಮಾಂಸೆಗೆ ಕಣ್ಣೂರೊಂದೇ ನಿದರ್ಶನವಲ್ಲ. ಚಂದ್ರಬಾಬು ನಾಯಿಡು ಅದನ್ನು ಕರೀಂನಗರದಲ್ಲೂ ತೋರಿಸುತ್ತಿದ್ದಾರೆಂಬುದು ಈಗ ಸರ್ವವಿದಿತ.

ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ನೇತೃತ್ವದಲ್ಲಿ ನಾಗರಿಕ ತಂಡವೊಂದು ಮಧ್ಯಪ್ರವೇಶ ಮಾಡಬೇಕಾಗಿಬಂದುದು, ಹಾಗೆ ಮಾಡಿದರೂ ಪ್ರಕ್ಷುಬ್ಧ ಪರಿಸ್ಥಿತಿ ಶಾಂತವಾಗದಿರುವುದು, ಈಗಲೂ ಸಂಶಯ ಮತ್ತು ಸ್ಫೋಟದ ಸನ್ನಿವೇಶ ಮುಂದುವರಿದಿರುವುದು, ಇವೆಲ್ಲಾ ನಮ್ಮನ್ನು ಯೋಚನೆಗೆ ಗುರಿಮಾಡಬೇಕು. ಮೂಲಭೂತವಾದ ಪ್ರಶ್ನೆ ಇದು : ಸ್ವಂತದ ರಾಜಕೀಯ ಏಳಿಗೆಗೆ ಪಕ್ಷಗಳು ಬೇರೆ ಪಕ್ಷಗಳ ಕಾರ್ಯಕರ್ತರ ಮೇಲೆ ಹಲ್ಲೆ ನಡೆಸುವುದರಿಂದ ದೊಡ್ಡದಾಗಿ ಬೆಳೆಯುತ್ತವೆಯೆ ? ಜನರ ಮನಸ್ಸನ್ನು ಗೆಲ್ಲಲು ಇದು ಸಾಧುವಾದ ಮಾರ್ಗವೆ ?

ಕೆಲವು ಪಕ್ಷಗಳಿವೆ. ಅವು ಮತೀಯ ಗಲಭೆಗಳನ್ನು ಬಂಡವಾಳವನ್ನಾಗಿ ಮಾಡಿಕೊಂಡು ವೃದ್ಧಿಹೊಂದಲು ಯತ್ನಿಸುತ್ತವೆ. ದುರದೃಷ್ಟವಶಾತ್ ಅದರಲ್ಲಿ ಕೆಲವೊಮ್ಮೆ ಸಫಲತೆಯನ್ನೂ ಪಡೆದಿವೆ. ಅದಕ್ಕೆ ಕಾರಣ ನಮ್ಮಲ್ಲಿ ಕೆಲವು ಜನರ ಸಾಂಸ್ಕೃತಿಕ ತಿಳುವಳಿಕೆಯ ಕೊರತೆ ಅಥವಾ ಪೂರ್ವಗ್ರಹ ದೃಷ್ಟಿ. ಇದಕ್ಕೂ ಕಾರ್ಯಕರ್ತರ ಮೇಲೆ ನಡೆಸುವ ಹಲ್ಲೆಗೂ ವ್ಯತ್ಯಾಸವಿದೆ. ಪಕ್ಷಗಳ ಪರಸ್ಪರ ಹಲ್ಲೆಗಳು ಜನಸಾಮಾನ್ಯರ ಮೇಲೆ ಪ್ರಭಾವ ಬೀರುವುದಿಲ್ಲವೆಂದು ತಿಳಿಯುವುದು ತಪ್ಪು. ಜನರ ಪ್ರಜ್ಞಾವಂತ ಭಾಗವಹಿಸುವಿಕೆಯನ್ನು ಅಣಿಗೊಳಿಸುವುದರಲ್ಲಿ ಸೋತು, ನಂಬಿಕೆ ಕಳೆದುಕೊಂಡ, ಹತಾಶ ಮನೋಭಾವವು ಈ ರೀತಿಯ ಹಲ್ಲೆಗಳ ಮೂಲದಲ್ಲಿದೆ. ಇದರಿಂದ ಏಳಿಗೆಗಿಂತಲೂ ಕಿಚ್ಚು ಹಬ್ಬಿಸುವುದೇ ಹೆಚ್ಚು . ಇದರಲ್ಲಿ ಯಾರು ಮೊದಲು ಹಿಂಸೆಗಿಳಿದಿದ್ದು, ಅದಕ್ಕೆ ಪ್ರತಿಹಿಂಸೆ ಹೇಗೆ ಆರಂಭವಾಯಿತು, ಎಂಬ ಪ್ರಶ್ನೆಗಳು ಕಾಲಾನುಕ್ರಮದಲ್ಲಿ ಅಪ್ರಸ್ತುತವಾಗಿಬಿಡುತ್ತವೆ.

ಒಂದಂಶವನ್ನಂತೂ ಯಾರೂ ನಿರಾಕರಿಸುವಂತಿಲ್ಲ, ನಮ್ಮ ಇಡೀ ವ್ಯವಸ್ಥೆಯಲ್ಲಿ ಹಿಂಸೆ ಬಲವಾಗಿ ಬೇರುಬಿಟ್ಟಿದೆ. ಜನಸಮುದಾಯದ ಒಂದು ದೊಡ್ಡ ವಿಭಾಗವು ತನ್ನ ಜೀವನವನ್ನು ಹಿಂಸೆಯ ಬೆಂಕಿಯಲ್ಲೇ ನೀಗುತ್ತಿದೆ. ಬಡತನ, ಅನಕ್ಷರತೆ, ಮುಂತಾದ ಕ್ರೌರ್ಯಗಳನ್ನು ತನ್ನ ಮೇಲೆ ಹೊರಿಸಿಕೊಂಡಿರುವ ಈ ವಿಭಾಗಕ್ಕೆ ಬೇರೆ ಹಿಂಸೆಗಳೂ ಉಂಟು. ಅದರಿಂದ ಹೊರಬರಲು ನಡೆಸುವ ಹೋರಾಟವನ್ನು ಹತ್ತಿಕ್ಕಲು ಪ್ರಭುತ್ವವು ಪೊಲೀಸರಿಂದ ಇನ್ನೂ ಹೆಚ್ಚಿನ ಹಿಂಸೆಯನ್ನು ಹರಿಬಿಡುತ್ತದೆ. ಸಾಮಾಜಿಕ- ಆರ್ಥಿಕ ಸಂದರ್ಭ ಏನೇ ಇರಲಿ, ಹೋರಾಟಗಾರರನ್ನೆಲ್ಲಾ ಕಾನೂನಿನ ಚೌಕಟ್ಟಿನಲ್ಲಿ ಹದ್ದುಬಸ್ತಿನಲ್ಲಿಡಲು ಪೊಲೀಸ್ ಕಾರ್ಯಾಚರಣೆ ಅನಿವಾರ್ಯವೆಂದು ಚಂದ್ರಬಾಬು ನಾಯಿಡು ಇತ್ತೀಚೆಗೆ ಮತ್ತೆ ಹೇಳಿದ್ದಾರೆ.

ಹಾಗಿದ್ದರೆ ಪ್ರಭುತ್ವದ ಹಿಂಸೆಗೆ ಉತ್ತರವಾಗಿ ಜನ ಏನು ಮಾಡಬೇಕು ? ಚಿತ್ರಹಿಂಸೆಯನ್ನು ಸಹಿಸಿಕೊಂಡಿರುವುದಷ್ಟೇ ಅವರ ಕರ್ತವ್ಯವೆ? ಜನರ ಪರವಾಗಿ ಕೆಲವರು ಮಾತ್ರವೇ ಬಿಡುಗಡೆಯ ಹರಿಕಾರರಾಗುವುದು ಆಗದ ಮಾತು; ಆಗಬೇಕಾದ ಕೆಲಸವೇನೆಂದರೆ ತಮ್ಮ ಪೂರಾ ವರ್ಗದ ಪರವಾಗಿ ಜನರೇ ಪ್ರತ್ಯಕ್ಷವಾಗಿ, ಪ್ರಜ್ಞಾಪೂರ್ವಕವಾಗಿ ಭಾಗವಹಿಸುವುದು. ಕಣ್ಣೂರು-ಕರೀಂನಗರದ ಪ್ರಕರಣಗಳು ಇದಕ್ಕೆ ಹೊರತಾಗಿವೆ. ಮತೀಯ ಶಕ್ತಿಗಳಾಗಲಿ ಚಂದ್ರಬಾಬು ಪ್ರತಿನಿಧಿಸುವ ಪ್ರಭುತ್ವವಾಗಲಿ ಇದನ್ನು ಯಾವ ಮಟ್ಟದಲ್ಲಿ ಗ್ರಹಿಸಬೇಕೋ ಅದೇ ರೀತಿಯಲ್ಲಿ ಕ್ರಾಂತಿಕಾರಿ ಹಿಂಸೆಯ ಪ್ರತಿಪಾದಕರೂ ಅರಿತುಕೊಳ್ಳಬೇಕಾಗಿದೆ. ಕ್ರಾಂತಿಕಾರಿ ಹಿಂಸೆಯೆಂದರೆ ಜನರ ಪರವಾಗಿ ಕೆಲವರು ವಿಮೋಚಕರಾಗುವುದಲ್ಲ. ವಿಮೋಚನೆಯ ಅಸ್ತ್ರ ಜನರ ಪ್ರಜ್ಞೆ ಅಲುಗಾಗಬೇಕಾಗಿದೆ. ಕಣ್ಣೂರು-ಕರೀಂನಗರ ಪ್ರಕರಣಗಳು ಕ್ರಮೇಣ ಆ ಹಾದಿಯನ್ನು ತುಳಿಯಬೇಕೆಂಬ ನಿರೀಕ್ಷೆ ಹುಸಿಯಾಗಬಾರದು.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

# ಒರಿಸ್ಸಾದ ಬವಣೆ

ಒರಿಸ್ಸಾ ಇಂದು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಕಗ್ಗತ್ತಲೆಯಲ್ಲಿ ಮುಳುಗಿಹೋಗಿದೆ. ಭೀಕರ ಚಂಡ ಮಾರುತಕ್ಕೆ ತುತ್ತಾಗಿ ಮನೆ, ಮಠ ನಾಶವಾಗಿದೆ. ಇಡೀ ರಾಜ್ಯದಲ್ಲಿ ಸ್ಮಶಾನ ಮೌನ ಆವರಿಸಿದೆ. ಮೈ ಕೊರೆಯುವ ಚಳಿಯಲ್ಲಿ ಬದುಕುಳಿದ ಮಕ್ಕಳು ವೃದ್ಧರು ಸೇರಿದಂತೆ ಅಸು ನೀಗಿದವರ ಸಂಖ್ಯೆ ಮುಗಿಲು ಮುಟ್ಟಿತು. ಕೊಳೆತು ನಾರುತ್ತಿದ್ದ ಶವಗಳಿಂದ ಮಲೇರಿಯಾದಂತಹ ಮಾರಕ ರೋಗಗಳು ಹರಡುವ ಭೀತಿ ಇತ್ತು. ಮಕ್ಕಳನ್ನು ಪತಿಪತ್ನಿಯರನ್ನು ಕಳೆದುಕೊಂಡ ಜನತೆಯ ರೋದನೆ ಇನ್ನೂ ಕರುಣಾಜನಕವಾಗಿಯೇ ಇದೆ.

೧೯೯೨ರಿಂದ ಈವರೆಗೆ ಕನಿಷ್ಠ ಐದು ಬಾರಿ ಚಂಡಮಾರುತಕ್ಕೆ ಬಲಿಯಾದ ಒರಿಸ್ಸಾ ರಾಜ್ಯ ನಿಸರ್ಗ ವಿಕೋಪಗಳಲ್ಲಿ ಸುಮಾರು ೫ ಲಕ್ಷ ಜನರನ್ನು ಕಳೆದುಕೊಂಡಿದೆ. ಈ ಬಾರಿ ಚಂಡಮಾರುತಕ್ಕೆ ಬಲಿಯಾದ ವರ ಸಂಖ್ಯೆ ಇನ್ನೂ ನಿಖರವಾಗಿ ತಿಳಿದಿಲ್ಲ. ನವೆಂಬರ್ ಹತ್ತರಂದು ಮುಖ್ಯಮಂತ್ರಿ ನೀಡಿದ್ದ ವರದಿಯ ಪ್ರಕಾರ ಕೇವಲ ೭೪೪೭, ಆದರೆ ಪರಿಹಾರ ಕಾರ್ಯದಲ್ಲಿ ತೊಡಗಿರುವ ಹಲವಾರು ಸಂಘಸಂಸ್ಥೆಗಳ ಅಂಕಿ ಅಂಶಗಳ ಪ್ರಕಾರ ಸತ್ತವರ ಸಂಖ್ಯೆ ಐವತ್ತು ಸಾವಿರಕ್ಕೂ ಹೆಚ್ಚು. ಸುಮಾರು ೫ ಲಕ್ಷ ಜಾನುವಾರುಗಳು ಸತ್ತಿರಬಹುದು. ಕಲ್ಲಿನಂತಹ ಹೃದಯಗಳನ್ನು ಕರಗಿಸಬಹುದಾದ ಈ ದುರಂತ ಕೇಂದ್ರ ಮತ್ತು ರಾಜ್ಯ ಸರಕಾರಗಳಿಗೆ ಪರಸ್ಪರ ದೂಷಣೆಗೆ ಅವಕಾಶವಾಯಿತಷ್ಟೆ. ಸಮರೋಪಾದಿಯಲ್ಲಿ ಪರಿಹಾರ ಕಾರ್ಯ ಕೈಗೊಳ್ಳಬೇಕಾಗಿದ್ದ ಕೇಂದ್ರ ಸರಕಾರ ಹೇಳಿಕೆಗಳನ್ನು ನೀಡಿ ಆಶ್ವಾಸನೆಗಳ ಮಹಾಪೂರವನ್ನು ಹರಿಸಿತು, 'ಟಾಸ್ಕ್ ಫೋರ್ಸ್' ರಚಿಸಿತು. ದೇಶ ವಿದೇಶಗಳ ಟಿ. ವಿ. ಚಾನಲ್‌ಗಳು ಸರಕಾರವನ್ನು ಹಿಂದೆ ಹಾಕಿ ಸಂತ್ರಸ್ತ ಪ್ರದೇಶಗಳಿಗೆ ಭೇಟಿ ನೀಡಿ ಸುದ್ದಿಗಳು ಬಿತ್ತರಗೊಂಡ ಮೇಲೂ ಈ ನಾಯಕರೆಲ್ಲಾ ಇನ್ನೂ ಹೆಲಿಕಾಪ್ಟರ್ ಹಾರಾಟಗಳಲ್ಲೇ ತೊಡಗಿದ್ದರು. ಸುತ್ತ ನೀರಿದ್ದರೂ ಕುಡಿಯಲು ತೊಟ್ಟು ನೀರು ಸಿಗದ ಅಸಹಾಯಕ ಜನರ ನೋವಿಗೆ ಕಿವಿಗೊಡದೆ ರಾಜಕೀಯ ಮಾಡುವ ಪರಿಪಾಟ ಕೇಂದ್ರ ಸರಕಾರದ ಕೆಲವು ಸಚಿವರದಾಯಿತು.

ಅನ್ನ ನೀರು ಇಲ್ಲದೆ ಹಸಿವಿನಿಂದ ಬಳಲುತ್ತಿರುವವರ ಕಥೆ ಒಂದು ಕಡೆಯಾದರೆ ಶಾಲಾ-ಕಾಲೇಜುಗಳನ್ನು ಕಳೆದು ಕೊಂಡ ಅಲ್ಲಿಯ ಮಕ್ಕಳ ಸ್ಥಿತಿ ಡೋಲಾಯಮಾನವಾಗಿದೆ. ಅತ್ಯಂತ ಹಿಂದುಳಿದ ಪ್ರದೇಶವಾದ ಒರಿಸ್ಸಾ ಕೇವಲ ಶೇ. ೪೦ರಷ್ಟು ಮಾತ್ರ ಸಾಕ್ಷರತೆ ಹೊಂದಿದೆ. ಶಾಲೆಯಿಂದ ವಂಚಿತರಾದ ಬಹುಪಾಲು ಮಕ್ಕಳು ಕರಾವಳಿ ಪ್ರದೇಶಕ್ಕೆ ಸೇರಿದವರಾಗಿದ್ದಾರೆ. ಸರಕಾರಿ ಹಿರಿಯ ಅಧಿಕಾರಿಗಳ ಅಂಕಿ ಅಂಶಗಳ ಪ್ರಕಾರ ಒರಿಸ್ಸಾದ ೧೪ ಕರಾವಳಿ ಜಿಲ್ಲೆಗಳಲ್ಲಿ ಸುಮಾರು ೩೧.೨ಲಕ್ಷ ವಿದ್ಯಾರ್ಥಿಗಳು ಈಗ ಶಾಲೆಗಳಿಲ್ಲದೆ ಚಡಪಡಿಸುತ್ತಿದ್ದಾರೆ. ಈ ೧೪ ಜಿಲ್ಲೆಗಳಲ್ಲಿ ಶಾಲಾ ಕಾಲೇಜು ಕಟ್ಟಡಗಳು ಕೊಚ್ಚಿಹೋಗಿವೆ. ಸಾವಿರಾರು ವಿದ್ಯಾರ್ಥಿಗಳು ಅಸುನೀಗಿದ ವರದಿಗಳು ಇನ್ನೂ ಬರುತ್ತಲೇ ಇವೆ. ರಾಜ್ಯದ ಹನ್ನೆರಡು ಜಿಲ್ಲೆಗಳಲ್ಲಿ ೩೪೫ ಪ್ರಾಥಮಿಕ ಶಾಲೆಗಳು, ಗಜಪತಿ ಮತ್ತು ಗಂಜಾಮ್ ಜಿಲ್ಲೆಗಳ ೩೮೧೫ ಶಾಲೆಗಳು ತೀವ್ರವಾಗಿ ಹಾನಿಗೊಂಡರೆ ಸುಮಾರು ೧೯೪೬ ಪ್ರಾಥಮಿಕ ಶಾಲೆಗಳು ಧೂಳಿಪಟ ವಾಗಿವೆ, ೩೦೦ ಖಾಸಗೀ ಕಾಲೇಜುಗಳು ಕಣ್ಮರೆಯಾಗಿವೆ.

ಈ ಮೇಲ್ಕಂಡ ಎಲ್ಲಾ ಮೂಲ ಸೌಕರ್ಯಗಳನ್ನೂ ಮತ್ತೆ ಕಲ್ಪಿಸಿಕೊಡಬೇಕಾದರೆ ಶಾಲಾ ಕಟ್ಟಡಗಳಿಗೆ ೫೬೮ ಕೋಟಿ ರೂ. ಪುಸ್ತಕ ಫಲಕ ಇನ್ನಿತರ ಸಾಧನಗಳು ಸೇರಿದಂತೆ ೨೧.೨ ಕೋಟಿ ರೂ., ಉತ್ಕಲ್ ವಿಶ್ವವಿದ್ಯಾಲಯದ ಪುನರ್ ನಿರ್ಮಾಣಕ್ಕೆ ೧೦ ಕೋಟಿ ರೂ., ಕಪೂರಿ ಸಂಸ್ಕೃತ ವಿಶ್ವ ವಿದ್ಯಾಲಯಕ್ಕೆ ೫೦ ಲಕ್ಷ ರೂ., ಹೀಗೆ ಸಾವಿರಾರು ಕೋಟಿ ರೂ. ಬೇಕಾಗಿದೆ. ಗ್ರಂಥಾಲಯ, ಪ್ರಯೋಗಾಲಯಗಳ ಅಂತಹ ಮೂಲಭೂತ ಸೌಲಭ್ಯ ಒದಗಿಸಲು ಕನಿಷ್ಠ ೧೫ ವರ್ಷಗಳಾದರೂ ಬೇಕೆಂದು ಹೇಳಲಾಗಿದೆ. ಈ ಮಧ್ಯೆ ರಾಜ್ಯ ಸರಕಾರ ಶಿಕ್ಷಕರಿಗೆ ಶಾಲಾ- ಕಾಲೇಜುಗಳಿಗೆ ಹಾಜರಾಗುವಂತೆ ಸೂಚಿಸಿದೆ ಮೂಲಭೂತ ಸೌಕರ್ಯಗಳೆ ಇಲ್ಲದ ನರಕಮಯವಾದ ಪ್ರದೇಶಗಳಲ್ಲಿ ಶಿಕ್ಷಕರು ಪಾಠ ಹೇಳಿಕೊಡುವುದಾದರೂ ಹೇಗೆ?



*ರೋಗಿಯನ್ನು ಚಿಕಿತ್ಸೆಗಾಗಿ ಒಯ್ಯುತ್ತಿರುವುದು* *(ಚಿತ್ರ ಕೃಪೆ: ದಿ ವೀಕ್)*

ತೀವ್ರ ವೇಗದಲ್ಲಿ ಸಾಗುತ್ತಿರುವ ತಂತ್ರಜ್ಞಾನ ಯುಗದಲ್ಲಿ ಚಂಡಮಾರುತದ ಮುನ್ಸೂಚನೆ ಸರಕಾರಕ್ಕೆ ಇರಲಿಲ್ಲವೆ? ಅಧಿಕಾರಿಗಳು ಮುನ್ಸೂಚನೆಯ ಕ್ರಮ ಕೈಗೊಳ್ಳಲಿಲ್ಲವೇಕೆ? ಚಂಡಮಾರುತದಲ್ಲಿ ಅಸು ನೀಗಿರುವವರು ಬಡವರು, ಬೀದಿಯಲ್ಲಿ ಬಾಳುತ್ತಿರುವವರು. ಬಂಗಲೆಯಲ್ಲಿ ಜನತೆಯ ಬೆವರಿನ ಪ್ರತಿಫಲ ತಿಂದು ತೇಗುತ್ತಿರುವವರಿಗೆ ಹರಕು ಗುಡಿಸಲುಗಳಲ್ಲಿ ವಾಸಿಸುವವರ ಸ್ಥಿತಿ ಗೊತ್ತಾಗುವುದಿಲ್ಲವೇನೋ! ಕೆಲವು ಮೂಲಗಳ ಪ್ರಕಾರ ಚಂಡಮಾರುತದ ಮುನ್ಸೂಚನೆಯನ್ನು ಉಪ ಗ್ರಹದ ಮೂಲಕ ಅಕ್ಟೋಬರ್ ೨೫ರಂದು ಗುರುತಿಸಲಾಗಿತ್ತು. ಸುಳಿವು ದೊರಕಿದೊಡನೆ ಕೇಂದ್ರ ಸರಕಾರದ ಸಂಪುಟ ಕಾರ್ಯದರ್ಶಿಗೆ ಹಾಗೂ ಪರಿಹಾರ ಕಮಿಷನರ್ ಅವರಿಗೆ ಸೂಚಿಸಲಾಗಿತ್ತು. ಕೇಂದ್ರ ಮತ್ತು ರಾಜ್ಯ ಸರಕಾರ ಕಾಳಜಿ ವಹಿಸಿ ಅಲ್ಲಿಯ ಜನತೆಯನ್ನು ಸ್ಥಳಾಂತರಿಸಬಹುದಿತ್ತು. ಲಂಗು ಲಗಾಮಿಲ್ಲದ ಅಧಿಕಾರ ಶಾಹಿ ೨೪ ಗಂಟೆಗಳ ಕಾಲ ಕೇವಲ ಸಚಿವರ, ಶಾಸಕರ, ಆರಾಧನೆಯಲ್ಲಿ ಕಾಲ ಕಳೆದು ಮುಗ್ಧ ಜನತೆಯನ್ನು ಬಲಿ ಕೊಟ್ಟಿತು. ಕೆಲವು ಹವಾಮಾನ ಅಧಿಕಾರಿಗಳು ರಜೆಯಲ್ಲಿದ್ದುದರಿಂದ ತುರ್ತುಕ್ರಮ ಕೈಗೊಳ್ಳಲು ಸಾಧ್ಯವಾಗಲಿಲ್ಲವೆಂದು ಭಾರತೀಯ ಹವಾಮಾನ ಇಲಾಖೆಯ ವರಿಷ್ಠ ಕೇಳ್ಕರ್ ಹೇಳಿಕೆ ನೀಡಿರುವುದು ಮೂರ್ಖತನದ ಪರಮಾವಧಿಯಾಗಿದೆ. ಚಂಡಮಾರುತದ ಮಾಹಿತಿಯನ್ನು ಅಕ್ಟೋಬರ್ ೨೭ರಂದು ಎಲ್ಲಾ ಜಿಲ್ಲಾ ಕೇಂದ್ರಗಳಿಗೆ ಫ್ಯಾಕ್ಸ್, ದೂರವಾಣಿ, ರೇಡಿಯೋ, ವೈಯರ್‌ಲೆಸ್, ದೂರದರ್ಶನದ ಮೂಲಕ ಬಿತ್ತರಿಸಲಾಗಿತ್ತು ಎಂದು ಸರಕಾರ ಹೇಳಿದೆ. ಇದಕ್ಕೆ ಪ್ರತಿಯಾಗಿ ಹೇಳಿಕೆ ನೀಡಿರುವ ಅಧಿಕಾರಿಗಳು ನಾಲ್ಕು ಗೋಡೆಯ ಮಧ್ಯೆ ನಾಲ್ಕು ಕೋಳಿ, ನಾಲ್ಕು ಕುರಿ, ಜಾನುವಾರ ಹೊಂದಿರುವ ಭಾರತೀಯ ತನ್ನ ಸ್ಥಳಬಿಟ್ಟು ಕದಲುವುದಿಲ್ಲವೆಂದು ಉಡಾಫೆಯ ಮಾತನ್ನಾಡಿದ್ದಾರೆ. ಈ ಹಿಂದೆ ಮಹಾರಾಷ್ಟ್ರದ ಲಾತೂರಿನಲ್ಲಿ ಸಂಭವಿಸಿದ ಭಾರಿ ಭೂಕಂಪದಿಂದ ಸಾವಿರಾರು ಜನ ಮೃತಪಟ್ಟರು. ಆ ಸಂದರ್ಭದಲ್ಲಿ ನೊಂದವರ ನೋವಿಗೆ ಸ್ಪಂದಿಸದ ಸರಕಾರ ಪುನರ್ ವ್ಯವಸ್ಥೆಯನ್ನು ಮಾಡಿದೆ ಯೆಂದು ಹೇಳಿಕೊಳ್ಳುತ್ತಿದ್ದರೂ ಇನ್ನೂ ಹಲವಾರು ಜನ ಭೂಕಂಪನದ ಕರಿನೆರಳಿನಲ್ಲಿ ಬದುಕುತ್ತಿದ್ದಾರೆ. ದೇಶ ವಿದೇಶಗಳಿಂದ ಹರಿದುಬಂದ ಸಾವಿರಾರು ಕೋಟಿ ರೂ. ಸಂತ್ರಸ್ತರಿಗೆ ತಲುಪದೆ ಮಧ್ಯವರ್ತಿಗಳ ಜೇಬನ್ನು ಸೇರಿದೆ.

ಇದೆಲ್ಲದರ ಪರಿಹಾರಕ್ಕಾಗಿ ಜನ ಸಾಮುದಾಯಿಕವಾಗಿ ಮಧ್ಯಪ್ರವೇಶ ಮಾಡುವ ಅವಶ್ಯಕತೆ ಇದೆ.

**ಶೌಕತ್ ಆಲಿ ಆಲೂರ**
ಗಾಯತ್ರಿದೇವಿ ಪಾರ್ಕ್ ಎಕ್ಸ್‌ಟೆಂಷನ್, ಘಾಟೆಭವನ,
ಬೆಂಗಳೂರು- ೩

# ಗುಂಡಿಗೆ ನಡುಗಿಸುವ ಚಂಡಮಾರುತ

ಡಾ|| ಕರವೀರಪ್ರಭು ಕ್ಯಾಲಕೊಂಡ

ಅಂದಿನ ಬೆಳಗು ಎಂದಿನಂತೆ ಇರಲಿಲ್ಲ. ಏಳುಗಂಟೆಯಾದರೂ ಬೆಳಕು ಹರಿಯಲಿಲ್ಲ. ಮುಸುಕಿದ ಮೋಡದಿಂದ ಮಬ್ಬು ವಾತಾವರಣವಿತ್ತು. ಮಂಜು ಕವಿದಿತ್ತು. ಗಾಳಿ ಬೀಸುತ್ತಿತ್ತು. ಮೈಮುರಿದು ಎದ್ದಾಗ ಮಂಕು ಕವಿದಿತ್ತು. ಬಿತ್ತರಗೊಂಡ ಚಂಡಮಾರುತದ ಸುದ್ದಿ ಬೆಚ್ಚಿ ಬೀಳಿಸಿತ್ತು. ಹಠಾತ್ತನೆ ಆದ ಬದಲಾವಣೆಗಳ ಉತ್ತರ ಸಿಕ್ಕಿತ್ತು.

ಚಂಡಮಾರುತ ಕರುಣಾರಹಿತ ಕಿರಾತಕ, ಕೊಲೆಪಾತಕ, ನಿಜಕ್ಕೂ ಪ್ರಳಯಾಂತಕ. ತೆಂಗಿನ, ಕಂಗಿನ ಸುಂದರ ಕಡಲತೀರ, ಮಸಣಮೌನ. ಚಂಡಮಾರುತದ ಹಾವಳಿಯ ನಂತರ, ಎಲ್ಲೆಡೆ ನೀರೇ ನೀರು. ಹಾರಿದ ಹಂಚಿನ, ಬಿದ್ದ ಮನೆಗಳು. ನಿರ್ಗತಿಕರಂತೆ ಬಿದ್ದು ನಾರುವ ಹೆಣಗಳು, ಹರಿದು ತಿನ್ನಲು ಹಾರಾಡುವ ಹದ್ದುಗಳು, ಕಾಗೆಗಳು, ಮನೆಮಾರು ಬಿಟ್ಟು ಓಡಿಬಂದವರು, ದಿಕ್ಕೇ ತೋಚದೆ ದಂಗಾದವರು, ಕಣ್ಣೀರಲ್ಲಿ ಕೈ ತೊಳೆದ ಕಂದಮ್ಮಗಳು, ಸತ್ತ ದನಗಳು, ಕುರಿಗಳು, ಬೊಬ್ಬಿಡುವ ಜನಗಳು, ಮುಳುಗಿದ ಮನೆಗಳು, ನೊಂದ ಮನಗಳು, ಬಿದ್ದ ಬೆಳೆಗಳು... ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ. ಪ್ರಕೃತಿ ಪ್ರಕೋಪ. ಆಗುವುದು ಅನಾಹುತಗಳ ವಿಕೋಪ. ಊರಿಗೆ ಊರೇ ಬಿಕೋ ಅನ್ನುವ, ಹೃದಯ ಹಿಂಡುವ, ಮಮ್ಮಲ ಮರುಗಿಸುವ ದೃಶ್ಯ; ಇದು ದುರಂತ ಕಾದಂಬರಿಯಲ್ಲಿಯ ವರ್ಣನೆ ಅಲ್ಲ, ಇತ್ತೀಚೆಗೆ ಚಂಡಮಾರುತದ ಚೆಲ್ಲಾಟದಿಂದ ಪಲ್ಲಟಗೊಂಡ ಜನರ ನೈಜ ಚಿತ್ರ.

ಕೆಲವೇ ಗಂಟೆಗಳಲ್ಲಿ ಲಕ್ಷಾಂತರ ಎಕರೆ ಭೂಪ್ರದೇಶವನ್ನೂ, ಕೋಟ್ಯಂತರ ಜನರ ಜೀವನವನ್ನೂ ಹದಗೆಡಿಸಿ, ಹೂಂಕರಿಸುತ್ತ ಹೋಳಿ ಆಡಿ, ಗೋಳಿನ ಬಾಳಿಗೆ ನಾಂದಿ ಹಾಡಿ, ನಸುನಗುವ ನಾಗರಿಕತೆಯ ಶತ್ರುವಾದ ಅಪಾರ ಶಕ್ತಿಶಾಲಿ ಚಂಡಮಾರುತ ಎಂಬ ರಾಕ್ಷಸನಿಗೆ ಶಕ್ತಿಯ ಸೆಲೆ, ನೆಲೆ ಎಲ್ಲಿ? ಉಗಮ ಹೇಗೆ? ಪ್ರಾಣಪಕ್ಷಿಗಳನ್ನು ಹೆಕ್ಕುವ ಹೆಮ್ಮಾರಿಯ ಸ್ವರೂಪ ಏನು?

**ನಾಮ ಹಲವು**

ಚಂಡಮಾರುತನ ಹಾವಳಿ ಪ್ರಚಂಡ. ಪ್ರಪಂಚದ ವಿವಿಧೆಡೆ ವಿವಿಧ ಹೆಸರುಗಳು. ದೇವನೊಬ್ಬ ನಾಮ ಹಲವು ಎನ್ನುವಂತೆ. ಚೀನಾದಲ್ಲಿ 'ಟೈಫೂನ್' ಎಂದು ಕರೆದರೆ, ಆಸ್ಟ್ರೇಲಿಯಾದಲ್ಲಿ 'ವಿಲ್ಲಿ-ವಿಲ್ಲೀಸ್' ಎನ್ನುತ್ತಾರೆ. ಫಿಲಿಪೈನ್ಸ್‌ದಲ್ಲಿ 'ಬಾಗ್ವಿಯೋಸ್' ಎಂದು ಗುರುತಿಸುತ್ತಾರೆ. ಜಪಾನಿನಲ್ಲಿ 'ಸುನಾಮಿ', ದಕ್ಷಿಣ ಅಮೇರಿಕಾದಲ್ಲಿ 'ಹರಿಕೇನ್' ಎಂದು ಪ್ರಚಲಿತ. ಚಂಡಮಾರುತ ಭಾರತೀಯರಿಗೆ 'ಸೈಕ್ಲೋನ್', 'ಬಿರುಗಾಳಿ', 'ಸುಳಿಗಾಳಿ', 'ತೂಫಾನು' ಎಂಬ ಹೆಸರುಗಳಿಂದ ಸುಪರಿಚಿತ. ಹಲವು ನಾಮಗಳಲ್ಲಿ ಬೀಸಿ ಬಂದರೂ ಚಂಡಮಾರುತದ ಪ್ರತಾಪದ ಪರಿಣಾಮ ಮಾತ್ರ ಒಂದೇ: ಭೀಕರ ವಿನಾಶ.

**ಹುಟ್ಟಿನ ಗುಟ್ಟು**

ಸಾಮಾನ್ಯವಾಗಿ ಸಾಗರದ ಮೇಲ್ಭಾಗದಲ್ಲಿ ಭೂಮಧ್ಯರೇಖೆಯ ಆಸುಪಾಸು ಚಂಡಮಾರುತಗಳು ಉಗಮವಾಗುತ್ತವೆ. ಸೂರ್ಯ ಸೂಸುವ ಪ್ರಖರ ಕಿರಣಗಳು ಸಾಗರದ ಮೇಲ್ಭಾಗದಲ್ಲಿಯ ಆರ್ದ್ರತೆಯ ವಾಯುವನ್ನು ಬಿಸಿ ಮಾಡುತ್ತವೆ. ಪರಿಣಾಮವಾಗಿ ಹಗುರಾದ ಹವೆ ಸುರುಳಿ ಸುರುಳಿಯಾಗಿ ಮೇಲೇರುತ್ತದೆ. ಹೀಗೆ ವಾಯುವಿನ ಸ್ಥಳಾಂತರದಿಂದಾಗಿ ಈ ಜಾಗೆಯಲ್ಲಿ ಗಾಳಿಯ ಒತ್ತಡ ಕುಸಿಯುತ್ತದೆ. ಜೊತೆಗೆ ಸುತ್ತಮುತ್ತಲಿನಿಂದ ತಂಪಾದ, ಹೆಚ್ಚು ಒತ್ತಡದ ಗಾಳಿ ಒಳನುಗ್ಗಲು ಪೈಪೋಟಿ ನಡೆಸುತ್ತದೆ. ಅಲ್ಲದೆ ಭೂಮಿ ತನ್ನ ಪರಿಧಿಯ ಸುತ್ತ ತಿರುಗುವ ಕ್ರಿಯೆಯೂ ಅಸ್ತಿತ್ವದಲ್ಲಿರುತ್ತದೆ. ಇವುಗಳಿಂದಾಗಿ ಹೆಚ್ಚು ಚಲನಶಕ್ತಿ ಗಿಟ್ಟಿಸುವ ಗಾಳಿ ಗಿರಿ ಗಿರಿ ತಿರುಗುತ್ತ ಮೇಲೇರುತ್ತದೆ. ಕ್ರಮೇಣ ತಿರುಗುವ ವೃತ್ತದ ಪರಿಧಿಯೂ ಹಿಗ್ಗಿ ಸುತ್ತುವಿಕೆಯ ವೇಗ ಅಧಿಕಗೊಳ್ಳುತ್ತದೆ. ವೇಗದ ಗತಿ ತಾಸಿಗೆ 320 ಕಿ.ಮೀ.ದಿಂದ 230 ಕಿ.ಮೀ.ವರೆಗೆ ಮುಟ್ಟಬಹುದು; ಚಂಡಮಾರುತದ ಕೇಂದ್ರ ಭಾಗ ಹೆಚ್ಚು ಕಡಿಮೆ ನಿರ್ವಾತವಾಗಿದ್ದು ಅಲ್ಲಿ ಬಿರುಸಿನ ಚಲನೆಯೂ ಒತ್ತಡವೂ ಹ್ರಾಸಗೊಂಡು ಶಾಂತ ಸ್ಥಿತಿ ಉಂಟಾಗುತ್ತದೆ. ಚಂಡಮಾರುತದ 'ಕಣ್ಣು' ಎಂದು ಕರೆಸಿಕೊಳ್ಳುವ ಈ ಭಾಗ ಅತ್ಯಂತ ಅಪಾಯಕಾರಿಯಾದುದು. ಪರಿಪೂರ್ಣಗೊಂಡ ಚಂಡಮಾರುತದ ಕಣ್ಣಿನ ವ್ಯಾಸ 50 ಕಿ. ಮೀ.ದಿಂದ 300 ಕಿ.ಮೀ.ಗಳಷ್ಟು ಇರುತ್ತದೆ.

ಆಕಾರವಿಲ್ಲದಿದ್ದರೂ ಆರ್ಭಟಿಸುತ್ತ ಹರಿದಾಡುವ ಈ ಮನುಕುಲದ ವೈರಿಗೆ ಜೀವ ಜಂತುಗಳನ್ನು ಹೆಕ್ಕುವ ಹವ್ಯಾಸ. ಶಾಂತ ಸಾಗರದ ಮಡಿಲಲ್ಲೊ ಮೌನವಾಗಿ ಹುದುಗಿದ ಮಾರುತ ಮೈ ಮುರಿದೇಳುವ ಮುನ್ನ ನಡೆಯುವ ಕ್ರಿಯೆ ಪೂರ್ಣ ಬಯಲಾಗಿಲ್ಲ. ಅನೇಕ ಸಿದ್ಧಾಂತಗಳು ಆ ದಿಕ್ಕಿನಲ್ಲಿ ಬೆಳಕು ಚೆಲ್ಲುತ್ತಿವೆಯಾದರೂ ಅದರ ಜನ್ಮ ರಹಸ್ಯವಿನ್ನೂ ಸ್ಪಷ್ಟ ವರ್ಣಗಳಲ್ಲಿ ರೂಪುದಳೆಯಬೇಕಿದೆ. ಈ ಕುರಿತು ವಿಜ್ಞಾನಿಗಳಲ್ಲಿ ಒಮ್ಮತದ ಖಚಿತ ಅಭಿಪ್ರಾಯವಂತೂ ಇದುವರೆಗೆ ಮೂಡಿಬಂದಿಲ್ಲ.

**ಚಂಡಮಾರುತದ ಸ್ವರೂಪ**

ಅತಿ ಒತ್ತಡದ ಗಾಳಿ ಹೊರಭಾಗದಲ್ಲಿ ಕೋಟೆ ಕಟ್ಟಿಕೊಂಡ ಕಾರಣ, ಒಳಗಿನ ನಿರ್ವಾತ ಪ್ರದೇಶದ ವ್ಯಾಪ್ತಿಯಲ್ಲಿಯ ಕಡಲ ಒಡಲಲ್ಲಿ ತಳಮಳ ಪ್ರಾರಂಭವಾಗುತ್ತದೆ. ನೀರು ಆವಿಯ ರೂಪ ತಾಳಿ ಮೇಲೇರುತ್ತದೆ. ಆವಿಯ ಕಣಗಳು ಒಂದಕ್ಕೊಂದು ಕೂಡಿಕೊಂಡು ನೀರಿನ ಹನಿಗಳಾಗುತ್ತವೆ. ಈ ಕ್ರಿಯೆಗೆ 'ಸಾಂದ್ರೀಕರಣ' ಎಂದು ಹೆಸರು. ಚಂಡಮಾರುತದ ಪರಿಧಿಯ ಪರಿಮಿತಿ ಪ್ರಾರಂಭದಲ್ಲಿ ಸಣ್ಣದಿರುತ್ತದೆ (ವ್ಯಾಸ ಸುಮಾರು 50 ಕಿ.ಮೀ.). ಪ್ರಾರಂಭವಾದ ಸಾಂದ್ರೀಕರಣ ತನ್ನ ವಿರಾಟರೂಪ ಪಡೆಯುವ ವೇಳೆಗೆ 160ರಿಂದ 1600 ಕಿ.ಮೀ. ವ್ಯಾಸವನ್ನು ಪಡೆಯುತ್ತದೆ. ನೂರಾರು ಅಡಿ ಎತ್ತರಕ್ಕೆ ಭೀಕರವಾಗಿ ಬೆಳೆದು ನಿಂತು, ದಾಳಿಗೆ ನಾಂದಿ ಹಾಡುತ್ತದೆ. ಹುಚ್ಚು ಹಿಡಿದ ರಕ್ಕಸನಂತೆ ಸಿಕ್ಕ ಸಿಕ್ಕ ಕಡೆಗೆ ಸಾಗರದ ಉದ್ದಗಲಕ್ಕೂ ಸುತ್ತಿ ಅಂತಿಮವಾಗಿ ಚಲನೆಯ ಗತಿಯ ದಿಕ್ಕನ್ನು ನಿರ್ಧರಿಸುತ್ತದೆ.

ಸ್ಪೀಡಾಗಿ 'ಸ್ಪಿನ್' ಆಗುವ ಚೆಂಡಿನಂತೆ ಸುತ್ತುವ

*ಇನ್ಸಾಟ್-1ಡಿ ತೆಗೆದ ಪ್ರಚಂಡ ಚಂಡಮಾರುತದ ಚಿತ್ರ,* (ಚಿತ್ರ ಕೃಪೆ: ಫ್ರಂಟ್‌ಲೈನ್)



ಚಂಡಮಾರುತದ ತುದಿಯಲ್ಲಿ ತಿರುಗುವ, ಹಗುರಾದ ನೀರಾವಿಗೆ ತಂಪಾಗಿ ಕಪ್ಪು ಕುಂತಲ ಮೋಡಗಳು ನಿರ್ಮಾಣಗೊಳ್ಳುತ್ತವೆ. ತಂಪು ನೀರಾವಿಯನ್ನು ಘನೀಕರಿಸುವ ಕ್ರಿಯೆ ಸುಪ್ತೋಷ್ಣ ಬಿಡುಗಡೆ ಮಾಡುವುದು. ಇದು ಚಂಡಮಾರುತದ ಶಕ್ತಿಗೆ ಮತ್ತಷ್ಟು ಚೇತನ ನೀಡುವುದು. ಗಂಟೆಗಳು ಉರುಳಿದಂತೆ ಪರಿಪರಿಯ ಬಿಡಿ ಬಿಡಿ ಮೋಡಗಳು ಕೂಡಿಕೊಳ್ಳುತ್ತವೆ. ಚಂಡಮಾರುತ ತನ್ನ ಸಂಗಾತಿಯಾಗಿ ಮಳೆಯನ್ನು ಕರೆದುಕೊಂಡೇ ಬರುತ್ತದೆ. ಪ್ರಚಂಡ ಗಾಳಿಯೊಂದಿಗೆ ಕುಂಭದ್ರೋಣ ಮಳೆ ಸೇರಿಕೊಂಡು ಚಂಡಮಾರುತ ನರ್ತಿಸತೊಡಗುತ್ತದೆ.

**ಚಂಡಮಾರುತದ ವ್ಯಾಪ್ತಿ**

ಭೂಮಿಯ ಮೇಲಿನ ಚಂದದ ಬದುಕನ್ನು ಅಂದಗೆಡಿಸುವ ದುಷ್ಟ ಉದ್ದೇಶದಿಂದಲೇ ಎದ್ದು ಬರುವ ಚಂಡಮಾರುತಕ್ಕೆ ಕಾಲ ದೇಶದ ಗೆರೆ ಅನ್ವಯಿಸದು. ದೇಶ ಯಾವುದಾದರೂ ಆದೀತು. ಆದರೆ ಸೀಮೆ ಮಾತ್ರ ಕರಾವಳಿಯನ್ನು ಬಳಸಿರಬೇಕು. ಭಾರತದಂತೆಯೇ ಅಮೆರಿಕ, ಕೆನಡಾ, ಮೆಕ್ಸಿಕೋ, ಫಿಲಿಪೈನ್ಸ್, ಇಂಗ್ಲೆಂಡ್, ಚೀನಾ, ಆಸ್ಟ್ರೇಲಿಯಾದ ಕರಾವಳಿಗಳಲ್ಲಿ ಸಹ ಚಂಡಮಾರುತ ತನ್ನ ಕರಾಳಹಸ್ತ ಚಾಚುತ್ತದೆ. ಅರಬ್ಬೀ ಸಮುದ್ರ, ಬಂಗಾಳಕೊಲ್ಲಿ, ಹಿಂದೂ ಮಹಾಸಾಗರ ಹೀಗೆ ಮೂರು ಮಗ್ಗಲಲ್ಲಿ ಜಲರಾಶಿಯನ್ನು ತಬ್ಬಿಕೊಂಡು ದ್ವೀಪಕಲ್ಪವಾಗಿರುವ ಭಾರತಕ್ಕೆ ಚಂಡಮಾರುತದ ಹಾವಳಿ ತುಸು ಜಾಸ್ತಿಯೇ.

ಚಂಡಮಾರುತ ಉತ್ತರಗೋಲಾರ್ಧದಲ್ಲಿ ಬೇಸಿಗೆಯಲ್ಲೂ, ದಕ್ಷಿಣ ಗೋಲಾರ್ಧದಲ್ಲಿ ಚಳಿಗಾಲ ಹಾಗೂ ವಸಂತ ಕಾಲಗಳಲ್ಲೂ ಹಾವಳಿ ಮಾಡುತ್ತದೆ. ಸುತ್ತುವಿಕೆಯಲ್ಲೂ ವ್ಯತ್ಯಾಸವಿರುತ್ತದೆ. ದಕ್ಷಿಣ ಗೋಲಾರ್ಧದಲ್ಲಿ ಪ್ರದಕ್ಷಿಣಾಕಾರದಲ್ಲೂ ಉತ್ತರ ಗೋಲಾರ್ಧದಲ್ಲಿ ಅಪ್ರದಕ್ಷಿಣಾಕಾರದಲ್ಲಿಯೂ ಸುತ್ತುತ್ತಿರುತ್ತದೆ. ಮಳೆಗಾಲದ ಪ್ರಾರಂಭದಲ್ಲಿ ಹಾಗೂ ಮುಕ್ತಾಯದಲ್ಲಿ ಚಂಡಮಾರುತಗಳ ಚೆಲ್ಲಾಟ ಹೆಚ್ಚು, ಮೇ, ಜೂನ್ ತಿಂಗಳಲ್ಲಿ ಬಂಗಾಲ ಉಪಸಾಗರದಲ್ಲಿ ಉಗಮವಾಗುವ ಚಂಡಮಾರುತಗಳ ಹಾವಳಿ ಕಂಡುಬಂದರೆ, ನವೆಂಬರ್, ಡಿಸೆಂಬರ್ ತಿಂಗಳಲ್ಲಿ ಅರಬ್ಬೀ ಸಮುದ್ರ, ಹಿಂದೂ ಮಹಾಸಾಗರದಲ್ಲಿ ಹುಟ್ಟುವ ಚಂಡಮಾರುತಗಳ ದಾಳಿ ಹೆಚ್ಚು.

ಉಷ್ಣವಲಯ ಹಾಗೂ ಸಮಶೀತೋಷ್ಣವಲಯಗಳಲ್ಲಿ ಈ ಚಂಡಮಾರುತದ ಹಾವಳಿ ಅತಿ ಹೆಚ್ಚಾಗಿದ್ದು, ಅತ್ಯಂತ ವಿನಾಶಕಾರಿಯಾಗಿರುತ್ತದೆ. ಉಷ್ಣವಲಯದ ವಿಶಾಲ ಸಾಗರದ ಮೇಲಿನ ವಾಯುಗುಣದಲ್ಲಿ ಉಂಟಾಗುತ್ತಿರುವ ಉಷ್ಣದ ವೈಪರೀತ್ಯಗಳೇ ಇದಕ್ಕೆ ಕಾರಣ ಎನ್ನುತ್ತಾರೆ ಹವಾಮಾನ ತಜ್ಞರು.

'ಜಾತಸ್ಯ ಮರಣಂ ಧ್ರುವಂ' ಎಂಬ ನಿಯಮ ಚಂಡಮಾರುತಕ್ಕೂ ಬಿಟ್ಟಿಲ್ಲ. ಅಪ್ರಬುದ್ಧ ಚಂಡಮಾರುತಗಳು ಹುಟ್ಟಿದ ಕೆಲವೇ ಗಂಟೆಗಳಲ್ಲಿ ಅಸು ನೀಗುತ್ತವೆ. ಹೆಚ್ಚಿನವುಗಳು ಸರಾಸರಿ ಆರು ದಿನಗಳ ಕಾಲ ಹೂಂಕರಿಸುತ್ತ ಹಾವಳಿ ಮಾಡುತ್ತವೆ. ಆಯುಷ್ಯ ಎಷ್ಟೇ ಇರಲಿ, ಅನಾಹುತಗಳು, ಅಹಿತಕರ ಘಟನೆಗಳು ಜನರಲ್ಲಿ ನಡುಕ ಹುಟ್ಟಿಸುವುದನ್ನು ಬಿಡುವುದಿಲ್ಲ. ಇಷ್ಟೊಂದು ದೈತ್ಯಾಕಾರವಾಗಿ ಬೆಳೆದ ಚಂಡಮಾರುತ ಭೂಭಾಗವನ್ನು ಸ್ಪರ್ಶಿಸುವುದರೊಂದಿಗೆ ಸಾವಿಗೆ ಸ್ವಾಗತ ನೀಡುವುದು. ಸಾಗರದಲ್ಲಿ ಶಕ್ತಿಶಾಲಿಯಾಗಿದ್ದರೂ, ಭೂಮಿಗೆ ಅಪ್ಪಳಿಸಿದಾಗ ತೇವಾಂಶ ಕಳೆದುಕೊಳ್ಳುವುದರಿಂದಲೂ, ಭೂಭಾಗದೊಡನೆ ಉಂಟಾಗುವ ಘರ್ಷಣೆಯಿಂದಲೂ ವೇಗವನ್ನೂ ಶಕ್ತಿಯನ್ನೂ ಕಳೆದುಕೊಂಡು ಸಾಯುತ್ತದೆ. ಭೂಸ್ಪರ್ಶವಾದೊಡನೆ ಯುದ್ಧಕ್ಕೆ ಇಳಿದವರಂತೆ ಆರ್ಭಟಿಸಿ ಪ್ರಚಂಡ ಗಾಳಿ, ಮಳೆಗಳಿಂದ ಹಾನಿಯ ಹಾವಳಿ ಹರಿಸುತ್ತದೆ.

**ಮಾರಣ ಹೋಮ**

ಚಂಡಮಾರುತ ತನ್ನ ದಾಳಿಗೆ ಬಳಸುವ ಅಸ್ತ್ರಗಳೆಂದರೆ ಭೀಕರವಾಗಿ ಬೀಸುವ ಬಿರುಗಾಳಿ, ಧಾರಾಕಾರವಾಗಿ ಸುರಿಯುವ ಮಳೆ. ಚಂಡಮಾರುತ ಅಪ್ಪಳಿಸುವ ಮೊದಲು ತೀರ ಪ್ರದೇಶಗಳಲ್ಲಿ ಶಾಂತ ಪರಿಸ್ಥಿತಿ ಇರುತ್ತದೆ. ಮುಂದೊದಗಬಹುದಾದ ಆಘಾತದ ಮಾರಕತೆಯನ್ನು ಅರಿತ ಭೂದೇವಿ ಚಿಂತಾಕ್ರಾಂತಳಾದಂತೆ ಎಲ್ಲೆಲ್ಲೂ ನೀರವತೆ ನೆಲೆಸಿರುತ್ತದೆ. ಮುಂದೆ ಕೆಲವೇ ಸಮಯದ ಅಂತರದಲ್ಲೆ ನೂರಾರು ಕಿ.ಮೀ. ವೇಗದ 50-60 ಅಡಿ ಎತ್ತರದ ಮಾರುತ ತೀರಕ್ಕೆ ಅಪ್ಪಳಿಸತೊಡಗುತ್ತದೆ. ಆ ಗಾಳಿಯ ಭೀಕರ ಶಕ್ತಿಗೆ ಹೆಮ್ಮರಗಳೂ, ಭವ್ಯ ಕಟ್ಟಡಗಳೂ ನೆಲಕಚ್ಚುತ್ತವೆ. ಕುಂಭದ್ರೋಣ ಮಳೆ ಪ್ರಾರಂಭವಾಗುತ್ತದೆ. ಮಳೆಗೆ ಸಿಕ್ಕ ಪೈರು ನಾಶವಾಗುತ್ತದೆ. ಧಾರಾಕಾರವಾಗಿ ಸುರಿಯುವ ಮಳೆಗೆ ಮಹಾಪೂರ ಬಂದು ತೀರ ಪ್ರದೇಶದ ಜನರ ಬದುಕೇ ಅಸ್ತವ್ಯಸ್ತಗೊಳ್ಳುತ್ತದೆ. ಎಷ್ಟೋ ಜೀವರಾಶಿ ಮಹಾಪೂರದಲ್ಲಿ ಮಾಯವಾಗುತ್ತವೆ. ಸಾಮಾನ್ಯವಾಗಿ 6ರಿಂದ 10 ಇಂಚುಗಳಷ್ಟು ಮಳೆಯಾಗುವುದಾದರೂ ಫಿಲಿಪೈನ್ಸ್‌ನಲ್ಲೊಮ್ಮೆ ಕೇವಲ 24 ಗಂಟೆಗಳಲ್ಲಿ 46 ಇಂಚಿನಷ್ಟು ಮಳೆ ಬಿದ್ದ ದಾಖಲೆಯಿದೆ.

ಪ್ರಕೃತಿಯ ವಿರಾಟ ವಿನಾಶದ ದಾಖಲೆಗಳು ಗಂಡೆದೆಯ ಗುಂಡಿಗೆಯನ್ನು ನಡುಗಿಸದೆ ಬಿಡುವುದಿಲ್ಲ. 1832ರಲ್ಲಿ ಕಾಕಿನಾಡ ಜಿಲ್ಲೆಯ ಪಟ್ಟಣವೊಂದು ಸಂಪೂರ್ಣ ನಿರ್ನಾಮವಾಗಿ 20,000 ಜನರು ಅಸು ನೀಗಿದರು. ಕಡಲ ಒಡಲ ಉದ್ವೇಗದಿಂದ ಉದ್ಭವಿಸಿದ ಬೆಟ್ಟದಂಥ ಚಂಡಮಾರುತ ತೆರೆಗಳು ರಾಮೇಶ್ವರದ ನಡುಗಡ್ಡೆ ಜೋಡಿಸಲು ಕಟ್ಟಿದ ಭವ್ಯ ಸೇತುವೆಯನ್ನು ಬುಡಮೇಲು ಮಾಡಿ ಸಾವಿರಾರು ಜನರ ಜೀವಕ್ಕೆ ಸಂಚಕಾರ ಕೊಟ್ಟಿದ್ದು ಮರೆಯದ ದುರಂತ ವಾಗಿಯೇ ಇದೆ. 1900ರಲ್ಲಿ ಟೆಕ್ಸಾಸ್‌ನಲ್ಲಿ 6100 ಜನರೂ, 1928ರಲ್ಲಿ ಫ್ಲೋರಿಡಾದಲ್ಲಿ 2100 ಜನರ ಮಾರಣ ಹೋಮವೂ ನಡೆಯಿತು. 1932ರಲ್ಲಿ ಕೆನಡಾದಲ್ಲಿ 2500 ಜನರು ಸತ್ತರು. 7ನೇ ಅಕ್ಟೋಬರ್ 1937ರಲ್ಲಿ ಮಿಡ್ನಾಪೂರ ಸುತ್ತಮುತ್ತ ಚಂಡಮಾರುತದ ಹಾವಳಿಯಿಂದ ಇಪ್ಪತ್ತು ಸಾವಿರ ಮನೆಗಳು ಸರ್ವನಾಶವಾದವು. ಮೂರು ಲಕ್ಷ ಜನರು ಪ್ರಾಣಪಕ್ಷಿ ಕಳೆದುಕೊಂಡರು. ಪೂರ್ವ ಪಾಕಿಸ್ತಾನದಲ್ಲಿ ಬೀಸಿದ ಚಂಡಮಾರುತದಲ್ಲಿ 12 ಸಾವಿರ ಜೀವಿಗಳು ಕೊಚ್ಚಿಕೊಂಡು ಹೋದವು. 1977ರಲ್ಲಿ ಬೀಸಿದ ಚಂಡಮಾರುತ ಆಂಧ್ರದ ಕರಾವಳಿಯಲ್ಲಿ 9000 ಜನರನ್ನು ಬಲಿತೆಗೆದುಕೊಂಡಿತು. 1988, 90, 91ರಲ್ಲಿ ಚಂಡಮಾರುತ ತನ್ನ ತಾಂಡವ ನೃತ್ಯ ನಡೆಸಿತ್ತು, ಅಲ್ಲಿಂದಾಚೆಗೆ ಆಗಾಗ ಚಂಡಮಾರುತದ ಈ ತಾಂಡವ ನರ್ತನದಡಿಗೆ ಸಿಕ್ಕು ಸಾವಿರಾರು ಜನ ಸಾವನ್ನಪ್ಪಿದರು. ಲಕ್ಷಾಂತರ ಜನ ನಿರ್ಗತಿಕರಾದರು. ಅಪಾರ ಸಂಪತ್ತು ನಾಶವಾಯಿತು. ಭಾರತದ ಮದ್ರಾಸ್, ವಿಶಾಖಪಟ್ಟಣ, ಕಲ್ಕತ್ತಾ, ಗಂಗಾ ಮುಖಜ ಭೂಮಿಗಳಿಗಂತೂ ಇದು ವಾರ್ಷಿಕ ಮಾರಿಯಾಗಿ ಪರಿಣಮಿಸಿದೆ. ಆರ್ಭಟಿಸುತ್ತ ಆಕ್ರಮಣಕ್ಕೆ ಇಳಿದ ಈ ಶತ್ರು ಸಾವು-ನೋವುಗಳಿಗೆ ಸುದ್ದಿಯಾಗಿದ್ದಾನೆ. ಗುಂಡಿಗೆಗಳಲ್ಲಿ ನಡುಕ ಹುಟ್ಟಿಸಿದ್ದಾನೆ. ಚಂಡ ಮಾರುತದಿಂದ ಸಾಯುವವರ ಸಂಖ್ಯೆ ಬೇರೆ ಯಾವುದೇ ಪ್ರಾಕೃತಿಕ ವಿಕೋಪಗಳಿಂದ ಸಾಯುವವರ ಸಂಖ್ಯೆಗಿಂತ ಕಡಿಮೆಯಿಲ್ಲ ಎಂಬುದು ಮೇಲಿನ ಉದಾಹರಣೆಗಳಿಂದ ಸ್ಫಟಿಕದಷ್ಟೇ ಸ್ಪಷ್ಟ.

**ಮುನ್ಸೂಚನೆ**

ಚಂಡಮಾರುತದ ಚಲನೆಯ ವೇಗ ತಾಸಿಗೆ 800 ಕಿ.ಮೀ.ಗಿಂತಲೂ ಹೆಚ್ಚು ಇರುತ್ತದೆ. ಅಪ್ಪಿ ತಪ್ಪಿ ಇದರ ಸುಳಿಯ ಸೆಳವಿಗೆ ಸಿಕ್ಕ ದೈತ್ಯಾಕಾರದ ಹಡಗುಗಳು ಸುಂಟರಗಾಳಿಗೆ ಸಿಕ್ಕ ಕೌದಿಯಂತೆ ಹಾರಿಹೋಗಿ, ಅವಶೇಷಗಳು ಹುಡುಕಿದರೂ ಸಿಗದಷ್ಟು ಛಿದ್ರ ಛಿದ್ರವಾಗುತ್ತವೆ. ಇದು ಆಕಸ್ಮಿಕವಾಗಿ ಕಾಣಿಸಿಕೊಳ್ಳಬಹುದಾದರೂ ಅಪರೂಪವೇನಲ್ಲ.

ವೈಜ್ಞಾನಿಕ ಸಂಶೋಧನೆಗಳಿಂದಾಗಿ ಚಂಡಮಾರುತಗಳ ಆಗಮನವನ್ನು ಮುಂಚಿತವಾಗಿ ತಿಳಿಯಲು ಸಾಧ್ಯ. ಈ ದಿಶೆಯಲ್ಲಿ ಉಪಯುಕ್ತ ಸೂಚಕಗಳೆಂದರೆ: ಬ್ಯಾರೋಮೀಟರ್‌ದಲ್ಲಿಯ ಒತ್ತಡ ಕಡಿಮೆಯಾಗುವುದು. ಸಾವಕಾಶವಾಗಿ ವಾತಾವರಣದ ಉಷ್ಣತೆ ಹೆಚ್ಚುವುದು, ಸೂರ್ಯ ಅಥವಾ ಚಂದ್ರನ ಸುತ್ತ ಕೆರೆ ಕಟ್ಟಿದಂತೆ ಕಾಣುವುದು. ಹವಾಮಾನ ತಜ್ಞರು ಈ ವ್ಯತ್ಯಾಸಗಳನ್ನು ವೀಕ್ಷಿಸಿ, ವಿಶ್ಲೇಷಿಸಿ ಚಂಡಮಾರುತಗಳ ಆಗಮನದ ಮುನ್ಸೂಚನೆಯ ಸುಳಿವನ್ನು ನೀಡುತ್ತಾರೆ. ರೇಡಾರ್‌ಗಳು, ವೈಮಾನಿಕ ಸಮೀಕ್ಷೆ ಮೊದಲಾದ ವಿಧಾನಗಳಿಂದ ಚಂಡಮಾರುತದ ಕೃತಕ ಉಪಗ್ರಹಗಳಿಂದ ನಿಖರ ವರ್ತಮಾನ ಗ್ರಹಿಸುವುದು ಇತ್ತೀಚೆಗೆ ಸಾಧ್ಯವಾಗಿದೆ. ವಿಜ್ಞಾನದಿಂದ ಪ್ರಳಯಾಂತಕ ಶಕ್ತಿಯ ಮುನ್ಸೂಚನೆ ಪಡೆಯಬಹುದಷ್ಟೇ ವಿನಾ ಅದನ್ನು ತಡೆಯುವುದು ಸಾಧ್ಯವಿಲ್ಲ. ಮುನ್ಸೂಚನೆಗಳನ್ನು ಬಳಸಿಕೊಂಡು ಅಪಾಯಕಾರಿ ಪ್ರದೇಶದಲ್ಲಿಯ ಜನರನ್ನು ಜಾನುವಾರುಗಳನ್ನು ಸುರಕ್ಷಿತ ಸ್ಥಳಕ್ಕೆ ಸಾಗಿಸಿ ಆಗಬಹುದಾದ ಸಾವು-ನೋವುಗಳನ್ನು ತಪ್ಪಿಸಬಹುದಾಗಿದೆ. ಮಂಗಳನ ಅಂಗಳದಲ್ಲಿ ಮನೆ ಕಟ್ಟುವಷ್ಟು ವೈಜ್ಞಾನಿಕವಾಗಿ ಮುಂದುವರೆದಿದ್ದರೂ, ಬರಬಹುದಾದ ಚಂಡಮಾರುತದ ಮುನ್ಸೂಚನೆ ತಿಳಿದು, ತಪ್ಪಿಸಲಿಕ್ಕೆ ಆಗದೇ ಇರುವುದು ಒಂದು ಅಪ್ರಿಯ ಸತ್ಯವೇ ಸರಿ.

ಡಾ॥ ಕರವೀರಪ್ರಭು ಕ್ಯಾಲಕೊಂಡ
ಆರೋಗ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ,
ಬಾದಾಮಿ-೫೮೭ ೨೦೧, ಜಿ : ಬಾಗಲಕೋಟೆ

# ನಿವೃತ್ತಿಪೂರ್ವ ದಿನಗಳು

''ನಿವೃತ್ತಿ : ಇನ್ನೆಷ್ಟು ದಿನ ಬಾಕಿ....'' ಎಂದು ಬಿಳಿ ಅಕ್ಷರಗಳಲ್ಲಿ ಬರೆಯಲಾದ ಕಪ್ಪು ಬಣ್ಣದ ಚಿಕ್ಕ ಫಲಕವನ್ನು ತನ್ನ ಕೊಠಡಿಯಲ್ಲಿರುವ 'ಉದಯವಾಣಿ' ಕ್ಯಾಲೆಂಡರ್ ಮೊಳೆಗೆ ನೇಣುಹಾಕಿದ ನಾಣಿ, 'ಚುಕ್ಕಿಗೆರೆ ಎಳೆದಿರುವ ಸ್ಥಳದಲ್ಲಿ ನೀನಿನ್ನು ಸರ್ವಿಸಿನಲ್ಲಿರುವ ದಿನಗಳ ಸಂಖ್ಯೆಯನ್ನು ಚಾಕ್‌ಪೀಸಿನಲ್ಲಿ ಪ್ರತಿದಿನವೂ ಬರೆಯತಕ್ಕದ್ದು' ಎಂಬ ಸುಗ್ರೀವಾರ್ಡರ್ ಮಾಡಿ, ಮತ್ತೊಂದೂ ಮಾತನ್ನಾಡದೆ ಹೊರಟೇಬಿಟ್ಟ. ಅವನ ಕೈಯಲ್ಲಿ ಅಂತಹವೇ ಇನ್ನೂ ಕೆಲವು ಫಲಕಗಳಿದ್ದವು.

ಆಮೇಲೆ ತಿಳಿಯಿತು: ಇನ್ನೊಂದು ವರ್ಷದೊಳಗೆ ಸೇವೆಯಿಂದ ನಿವೃತ್ತರಾಗಲಿರುವ ಎಲ್ಲ ಉದ್ಯೋಗಿಗಳ ಕೊಠಡಿಗಳಲ್ಲಿಯೂ ಇಂಥ ಬೋರ್ಡುಗಳನ್ನು ಅವನು ತೂಗುಹಾಕಿದ್ದಾನೆ ಎಂದು. ಇರುವ ಸ್ವಲ್ಪವೇ ಅವಧಿಯಲ್ಲಾದರೂ ಅವರು ಸರ್ಕಾರಿ (ಎಂಬ ದೇವರ) ಕೆಲಸವನ್ನು ಆಲಸ್ಯವಿಲ್ಲದೆ, ಆಸಕ್ತಿಯಿಂದ ಮಾಡಲಿ ಎಂಬುದೇ ಅವನ ಉದ್ದೇಶವಂತೆ; ಅಲ್ಲದೆ, ಇನ್ನೇನು 'ವಿಶ್ರಾಂತ' ರಾಗಲಿರುವವರು ಪ್ರಶಾಂತ ಮನಸ್ಸಿನಿಂದ ಆತ್ಮಾವಲೋಕನ ಮಾಡಿಕೊಳ್ಳುವಂತಾಗಲಿ ಎಂಬುದು ಅವನ ಅಭಿಪ್ರಾಯವಂತೆ.




ಶಂಸ ಐತಾಳ

ಅಂತೂ ನಾನು ದಿನಗಳನ್ನು ಎಣಿಸುವಂತೆ ಮಾಡಿಬಿಟ್ಟನಲ್ಲ ಈ ಮಹಾರಾಯ ! ಅಂದಹಾಗೆ ನನಗೆ ಎಷ್ಟು ಸರ್ವಿಸ್ ಉಳಿದಿದೆ ? ನಾನು ಹುಟ್ಟಿದ್ದು ಯಾವಾಗ ? ಪಂಚಾಂಗದ ಪ್ರಕಾರ, ನನಗಿನ್ನೂ ಐವತ್ತಾರು ವರ್ಷ ತುಂಬಿಲ್ಲ. ಆದರೆ ಸರ್ವಿಸ್ ರಿಜಿಸ್ಟರಿನ ಪ್ರಕಾರ, ಇನ್ನೊಂದು ವರ್ಷದೊಳಗೆ, ದಿನಗಳನ್ನೆಣಿಸಿ ಹೇಳುವುದಾದರೆ, ನಾಲ್ಕೇ ತಿಂಗಳುಗಳ ಒಳಗೆ, ನನಗೆ ಐವತ್ತೆಂಟು ಕಳೆದುಹೋಗುತ್ತದೆ. ಈ ಎರಡೆರಡು ಜನನ ದಿನಾಂಕಗಳಿಗೂ ದಾಖಲೆಗಳಿವೆ: ಒಂದು ಜಾತಕ, ಇನ್ನೊಂದು ಎಸ್‌ಎಸ್‌ಎಲ್‌ಸಿ ಸರ್ಟಿಫಿಕೇಟ್. ಹೌದು, ನಾನು ನಿಜವಾಗಿಯೂ 'ದ್ವಿಜ'.

ನೆನಪು ಮರುಕಳಿಸುತ್ತಿದೆ. ಸುಮಾರು ಮೂವತ್ತು ವರ್ಷಗಳ ಹಿಂದೆ. ಕನ್ನಡದ ಬಗ್ಗೆ, ಕರ್ನಾಟಕದ ಬಗ್ಗೆ, ಕನ್ನಡಿಗರಲ್ಲಿ ಅಭಿಮಾನ ಬೆಳೆಸಲು ವಿವಿಧ ಚಟುವಟಿಕೆಗಳು ರಭಸದಿಂದ ನಡೆಯುತ್ತಿದ್ದ ಕಾಲ (ಈಗಲೂ ಅಂಥ ಚಟುವಟಿಕೆಗಳು ನಡೆಯುತ್ತಿವೆ. ಆದರೂ ಜನರು ಅಭಿಮಾನಶೂನ್ಯರಾಗಿ ಉಳಿದಿದ್ದಾರೆ. ಅದು ಬೇರೆ ವಿಚಾರ). ಕನ್ನಡ ನಾಡು-ನುಡಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನೆಲ್ಲ ಒಂದೇ ಸೂರಿನಡಿ ನಡೆಸಬೇಕೆಂಬ ಸದುದ್ದೇಶದಿಂದ ಸ್ಥಾಪಿಸಲಾಗಿತ್ತು. ಸಮೂಹ ಸಂಸ್ಕೃತಿ ನಿರ್ದೇಶನಾಲಯವನ್ನು (ಗುಟ್ಟು ರಟ್ಟಾಗಬಾರದೆಂದು ಸಂಸ್ಥೆಯ ಹೆಸರನ್ನು ಬದಲಾಯಿಸಲಾಗಿದೆ). ಆಗ ಕನ್ನಡದ ಬಗ್ಗೆ ಕಾಳಜಿಯಿರುವ ತರುಣ ವಿದ್ವಾಂಸರೆಲ್ಲ ಇರುವೆಗಳಂತೆ ಸಾಲುಸಾಲಾಗಿ ಬಂದು ಸಮೂಹ ಸಂ.ನಿ.ಯನ್ನು ಸೇರಿಕೊಂಡರು. ಕೆಲವರು ತಾವು ಹಿಂದೆ ಇದ್ದ ಅಧ್ಯಾಪಕೇತ್ಯಾದಿ ನೌಕರಿಗಳಿಗೆ ರಾಜೀನಾಮೆ ಕೊಟ್ಟುಬರಲು ಕೂಡ ಹಿಂಜರಿಯಲಿಲ್ಲ. ಈ ಸಂಸ್ಥೆಯಲ್ಲೋ ಎರಡೇ ವರ್ಗಗಳು : ಏಕಮಾತ್ರ ನಿರ್ದೇಶಕರ 'ಎ' ವರ್ಗ, ಹಾಗೂ ಅಸಂಖ್ಯಾತ ಸಂಶೋಧಕರಿಂದ ಕೂಡಿದ 'ಬಿ' ವರ್ಗ. ಎರಡನೆಯ ವರ್ಗಕ್ಕೆ ಸೇರಿದ ನನ್ನಂಥವರೆಲ್ಲ ಸಮಾನ ವೇತನಶ್ರೇಣಿ ಪಡೆಯುವ, ಸಮತೂಕದ ಜವಾಬ್ದಾರಿ ಹೊತ್ತ, ಸಮಾನಮನಸ್ಕ ಸಹೋದ್ಯೋಗಿಗಳು; ಹೆಚ್ಚು ಕಡಿಮೆ ಸಮವಯಸ್ಕರು ಕೂಡ. (ಆದ್ದರಿಂದಲೇ 'ಇನ್ನೊಂದು ವರ್ಷದೊಳಗೆ ವಿಜಯನಗರ ಸಾಮ್ರಾಜ್ಯ ಅಳಿದುಹೋದಂತಹ ಅನುಭವವಾಗಲಿದೆ' ಎನ್ನುತ್ತಾನೆ ನಾಣಿ. ಅವನು ನಡೆಸಿದ ಸರ್ವೇಕ್ಷಣೆಯ ಪ್ರಕಾರ, ಸಂಸ್ಥೆಯ ಶೇ. 75ರಷ್ಟು ಸುಪ್ರಸಿದ್ಧ ಸಂಶೋಧಕರೆಲ್ಲ ಸದ್ಯವೇ ಸೇವೆಯಿಂದ ನಿವೃತ್ತರಾಗುತ್ತಾರೆ. ನಿವೃತ್ತರಾದವರ ಸ್ಥಾನಕ್ಕೆ ಹೊಸಬರ ನೇಮಕಾತಿ ಮಾಡಿಕೊಳ್ಳುವ ಜರೂರು ಇಲ್ಲದಿರುವುದರಿಂದ, ಅನೇಕ ಕೊಠಡಿಗಳು ಖಾಲಿಯಾಗುತ್ತವೆ; ಸಂಸ್ಥೆ ಬಿಕೋ ಎನ್ನುತ್ತದೆ).

ನಾನೋ ಮದುವೆಯಾಗುವ ಮೊದಲೇ ಈ ಸಂಸ್ಥೆಗೆ ಸೇರಿದವನು. ಹೀಗಾಗಿ ಮನೆಯ ಹಾಗೂ ಮಡದಿಮಕ್ಕಳ ಜೊತೆಗಿನ ಸಂಬಂಧಕ್ಕಿಂತ, ಕಛೇರಿಯ ಹಾಗೂ ಸಹೋದ್ಯೋಗಿಗಳ ಜೊತೆಗೆಯೇ ನನಗೆ ಸಂಬಂಧ ಹೆಚ್ಚು. ನೌಕರಿಗೆ ಸೇರಿದ ಹೊಸತರಲ್ಲಿ (ಸ್ವಂತದ್ದೆಂಬುದೊಂದು ಮನೆ ಇಲ್ಲದುದರಿಂದ) ಬೆಳಗ್ಗೆ ಎಂಟು ಎಂಟೂವರೆ ಗಂಟೆಯಿಂದ ರಾತ್ರಿ ಒಂಬತ್ತು ಒಂಬತ್ತೂವರೆ ಗಂಟೆಯವರೆಗೂ ನಾನು ಸಂಸ್ಥೆಯಲ್ಲಿಯೇ ದುಡಿದದ್ದುಂಟು. ಈಚೆಗೂ ನಾನು ಸಂಸ್ಥೆಯಲ್ಲಿಯೇ ಹೆಚ್ಚು ಸಮಯವಿರುತ್ತೇನೆ. ಕಾರಣ ಮಾತ್ರ ಬೇರೆ. ಮನೆಯಲ್ಲಿದ್ದರೆ ಎಲ್ಲಿಯ ಶಾಂತಿ ? ಎಲ್ಲಿಯ ನೆಮ್ಮದಿ ? ಎಲ್ಲಿ ವಿಶ್ರಾಂತಿ ? ಆದರೆ ಇನ್ನು ಮುಂದೆ ಎಷ್ಟು ದಿನ ಈ ಕಚೇರಿ ವಾಸದ ಸುಖ-ಸೌಲಭ್ಯಗಳು ? ಸರ್ವಿಸಿನ ಉಳಿಕೆ ದಿನಗಳ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿದೆ. ಕಚೇರಿ-ಮುಕ್ತವಾಗುವ ದಿನ ಹತ್ತಿರ ಹತ್ತಿರ ಬರುತ್ತಿದೆ. 'ಜಾತಸ್ಯ ಮರಣಂ ಧ್ರುವಂ' ಎಂಬಂತೆ ಸರ್ಕಾರಿ ಉದ್ಯೋಗಿಗೆ ನಿವೃತ್ತಿ ತಪ್ಪದು– ನಿವೃತ್ತನಾಗುವವರೆಗೂ ಸಾವು ಬಂದು ತಬ್ಬದೆ ಇದ್ದರೆ; ಖಾಸಗಿ ಸಂಸ್ಥೆಗಳಾದರೆ ನಿವೃತ್ತಿಗೆ ವರ್ಷಗಳ ನಿರ್ಬಂಧವಿಲ್ಲ, ಕೈಕಾಲು ಗಟ್ಟಿಯಾಗಿರುವವರೆಗೆ, ದುಡಿಯುವ ಉತ್ಸಾಹವಿರುವವರೆಗೆ, ಕೆಲಸ ಮಾಡಬಹುದು. (ಆದರೆ ಆ ಗೋಳನ್ನು ಏಕೆ ಅಂಟಿಸಿಕೊಳ್ಳಬೇಕು?) ಸರ್ಕಾರಿ ಉದ್ಯೋಗ ಹಾಗಲ್ಲ. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ. ನಿವೃತ್ತಿ ದಿನಾಂಕಕ್ಕಿಂತ ಬಹು ಮೊದಲೇ 'ಮನೆಗೆ ಹೋಗಲು ಸಿದ್ಧನಾಗು' ಎಂಬ ಸೂಚನೆ ಸಿಗುತ್ತದೆ.

ಆದರೆ ಸುಮಾರು ಮೂವತ್ತು ವರ್ಷಗಳಷ್ಟು ದೀರ್ಘಕಾಲ ಕೆಲಸ ಮಾಡಿದ್ದ ಸಂಸ್ಥೆಯನ್ನು ಬಿಟ್ಟು ಹೊರಡುವುದು, ಅಥವಾ ಬಿಟ್ಟುಹೊರಡಬೇಕೆಂದು ಯೋಚಿಸುವುದು ಕೂಡ, ಅತ್ಯಂತ ಆತಂಕವನ್ನುಂಟು ಮಾಡುವ, ಮಾನಸಿಕ ಹಿಂಸೆಗೆ ಕಾರಣವಾಗುವ ವಿಷಯ. ಸಂಸ್ಥೆಯನ್ನು ಶಾಶ್ವತವಾಗಿ ತೊರೆದು ಮನೆಗೆ ಹೊರಡುವುದು, ಬಾಡಿಗೆ ಮನೆ ಬದಲಾಯಿಸುವಷ್ಟು ಸುಲಭವೇನೂ ಅಲ್ಲ. ಈವರೆಗೆ 'ನನ್ನದು' ಎಂದುಕೊಂಡ ಈ ಕುರ್ಚಿ, ಈ ಮೇಜು, ಈ ಕಪಾಟು, ಈ ಸ್ಟೂಲು, ಈ ಫ್ಯಾನು, ಈ ಬುಕ್‌ರ್ಯಾಕು, ಈ ಕಸದ ಬುಟ್ಟಿ– ಇವಾವುವೂ ವಾಸ್ತವವಾಗಿ ನನ್ನವಲ್ಲ. ಇವುಗಳ ಮೇಲೆ ಇನ್ನು ಮುಂದೆ ನನಗೆ ಯಾವ ಹಕ್ಕೂ ಇಲ್ಲ. ಈ ಕೊಠಡಿಯಲ್ಲಿ ಇರಬಹುದಾದ ನನ್ನ ಸ್ವಯಾರ್ಜಿತ ಆಸ್ತಿಪಾಸ್ತಿಗಳನ್ನು ಗುರುತಿಸಿ, ಪ್ರತ್ಯೇಕಿಸಿ ಮನೆಗೆ ಕೊಂಡೊಯ್ಯಬೇಕು. ಕಪಾಟಿನ ಬಾಗಿಲು ತೆರೆದು, ಅದರಲ್ಲಿದ್ದ ಸಾಮಾನು ಸರಂಜಾಮುಗಳನ್ನು ಮೇಜಿನ ಮೇಲೆ ಹರಡಿದರೆ ಏನುಂಟು? ಏನಿಲ್ಲ? ಪ್ರಾಚೀನವೆನ್ನಬಹುದಾದ ಕಾಲಕ್ಕೆ ಸೇರಿದ ಕೆಇಬಿ, ಟೆಲಿಫೋನ್ ಇತ್ಯಾದಿ ಬಿಲ್‌ಗಳು,

ರಶೀದಿಗಳಿಂದ ಹಿಡಿದು ನನ್ನ ವಿಳಾಸಕ್ಕೆ ಬಂದ ಅವೆಷ್ಟೋ ಸರ್ಕಾರಿ, ಅರೆಸರ್ಕಾರಿ, ಖಾಸಗಿ ಪತ್ರಗಳವರೆಗಿನ ಈ ಅಸ್ತವ್ಯಸ್ತ ಕಾಗದಪತ್ರಗಳಲ್ಲಿ ಯಾವುದನ್ನು ಮನೆಗೆ ಒಯ್ಯಬೇಕು, ಯಾವುದನ್ನು ಮನೆಗೆ ಒಯ್ಯಲೇಕೂಡದು, ಯಾವುದನ್ನು ಅಗ್ನಿಸ್ಪರ್ಶದಿಂದ ನಾಶಗೊಳಿಸಬೇಕು? ಇಂಥ ಕಡತ ಯಜ್ಞಕ್ಕೆ ಎಷ್ಟು ದಿನ ತಗುಲಬಹುದು? ಈ ಯಜ್ಞಕಾಲದಲ್ಲಿ ನನಗೇ ಮರೆತುಹೋದ ಅದೆಷ್ಟು ರಹಸ್ಯಗಳು ಬೆಳಕಿಗೆ, ನೆನಪಿಗೆ ಬರಬಹುದು? ಬೇಸರಗೊಂಡಿರುವ ಮನಸ್ಸಿಗೆ ಮುದವನ್ನು ಸಂತಸವನ್ನು ತರಬಹುದು?

ನಿವೃತ್ತರಾಗಲಿರುವ ನಾಲ್ಕೈದು ಮಂದಿ ಒಟ್ಟಿಗೆ ಸೇರಿದಾಗಲೆಲ್ಲ ಮಾತುಕತೆಗೆ ಒಂದೇ ವಿಷಯ. ನಿವೃತ್ತಿ ಹೊಂದುವಾಗ ಕೈಗೆ ಒಟ್ಟು ಎಷ್ಟು ಹಣ ಬರುತ್ತದೆ ? ಅದನ್ನು ಸಾರಾಸಗಟು ಖರ್ಚು ಮಾಡದೆ, ಪೂರಾ ಮೊಬಲಗನ್ನು ಬ್ಯಾಂಕಿನಲ್ಲಿ ಠೇವಣಿಯಿಟ್ಟರೆ ಪ್ರತಿ ತಿಂಗಳೂ ಬಡ್ಡಿ ಎಷ್ಟು ಬರುತ್ತದೆ ? ತಿಂಗಳಿಗೆ ಎಷ್ಟು ನಿವೃತ್ತಿವೇತನ ಸಿಗಬಹುದು? ಬೆಳಗ್ಗೆ ಸಂಜೆ ಖಾಲಿ ಟೀ, ಮಧ್ಯಾಹ್ನ ಊಟ, ರಾತ್ರಿ ಎರಡು ಬನ್ ತಿಂದು ಬದುಕಲು ಆ ಹಣವೇ ಸಾಕಾದೀತೇ?

ಇವೆಲ್ಲಕ್ಕಿಂತ ಹೆಚ್ಚು ಗಂಭೀರವಾದ ಸಮಸ್ಯೆಯೆಂದರೆ, ಮುಂದೆ ಕಾಲ ಕಳೆಯುವುದು ಹೇಗೆ? ದಿನವಿಡೀ ಸಂಶೋಧನೆಯಲ್ಲಿಯೇ ತಲ್ಲೀನರಾಗಿ ಸೇವೆ ಸಲ್ಲಿಸಿದ ನಮಗೆ ನಿವೃತ್ತಿಯ ಅನಂತರ, ಯಾವುದಾದರೂ ಅರೆಕಾಲೀನ ಹುದ್ದೆಗೆ ಸೇರಲಾದರೂ ಯಾವ ಅರ್ಹತೆ-ಯೋಗ್ಯತೆಗಳಿವೆ? ಅಥವಾ ಪೆಟ್ರೋಲ್ ಬಂಕ್, ಪ್ರಾವಿಷನ್ ಸ್ಟೋರ್ಸ್‌ಗಳಲ್ಲಿ ಚಿಕ್ಕಪುಟ್ಟ ನೌಕರಿ ಸಿಕ್ಕಿದರೂ, ಅವಕ್ಕೆ ಸೇರಿಬಿಟ್ಟರೆ ನಮ್ಮ ವಿದ್ವತ್ತು ನಗೆಗೀಡಾಗದೆ? ನಮ್ಮ ಪಾಂಡಿತ್ಯದ ತೂಕ ಕಡಮೆಯಾಗದೇ? ಆದ್ದರಿಂದ ಬೆಳಗ್ಗಿನ ದಿನಪತ್ರಿಕೆಗಳಲ್ಲಿ ಪ್ರಕಟವಾಗುವ 'ನಗರದಲ್ಲಿ ಇಂದು' ಕಾರ್ಯಕ್ರಮಗಳ ವಿವರಗಳನ್ನು ಕಟ್ಟೆಚ್ಚರದಿಂದ ಅಧ್ಯಯನ ಮಾಡಿ, ನಮಗೆ ಆಸಕ್ತಿ ಮೂಡುವ ಸಭೆ-ಸಮಾರಂಭಗಳಲ್ಲಿ, ಆಹ್ವಾನ ಇರಲಿ, ಇಲ್ಲದಿರಲಿ, ಭಾಗವಹಿಸಿ, ಅವರಿವರ ಹೊಸ ಪರಿಚಯ ಮಾಡಿಕೊಳ್ಳುವುದೊಂದೇ ನಮ್ಮ ಮುಂದಿರುವ ದಾರಿ. ಇದೂ ಬೇಜಾರಾದರೆ ಇದ್ದೇ ಇದೆ ಗಾಳಿಸಂಚಾರ ಅಥವಾ ಉದ್ಯಾನವನ ವಿಹಾರ.

ಆದರೂ ಆಗಲೇ ಒಂದು ಬಗೆಯ ಕೀಳರಿಮೆ ಕಾಡತೊಡಗಿದೆ. 'ಸ್ಥಾನ' ಬಲದಿಂದಲೇ ಮಾನ ಮರ್ಯಾದೆಗಳಿಗೆ ಪಾತ್ರರಾದ ನಾವು 'ವಿಶ್ರಾಂತ ಸಂಶೋಧಕ' ಎಂಬ ಬೋರ್ಡನ್ನು ಮನೆಯ ಮುಂದೆ ತೂಗುಹಾಕಿಕೊಳ್ಳುವಷ್ಟರಿಂದಲೇ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳೆಂಬ ಮಾನಸಿಕ ಭ್ರಮೆಯನ್ನು ಹೊಂದಬೇಕಾದೀತೇನೋ !

ಏಕೆಂದರೆ, ಮೂರು ದಶಕಗಳ ಕಾಲ ಸೇವೆ ಸಲ್ಲಿಸಿದ ಸಂಸ್ಥೆಗೇ ಮುಂದೆ ಬಂದರೂ ಅರ್ಧಗಂಟೆ ಕಾಲ ಕುಳಿತುಕೊಳ್ಳಲು ಅಲ್ಲಿ ನಮಗೆ ಜಾಗವಿರುವುದಿಲ್ಲ ಎಂಬುದು ಒಪ್ಪಿಕೊಳ್ಳಲೇಬೇಕಾದ ಅಪ್ರಿಯ ಸಂಗತಿ. ಆದ್ದರಿಂದಲೇ ಇರಬೇಕು– ನಿವೃತ್ತಿಯ ಅನಂತರವೂ ತಮ್ಮ ಮಾತೃಸಂಸ್ಥೆಯೊಂದಿಗೆ ಸಂಬಂಧ-ಸಂಪರ್ಕಗಳನ್ನು ಉಳಿಸಿಕೊಳ್ಳುವ ಪ್ರವೃತ್ತಿ ಮುಂದುವರೆಸುವವರ ಸಂಖ್ಯೆ ಅತ್ಯಂತ ವಿರಳ. ದೀರ್ಘಕಾಲದ ಸಮೀಪ ಸಂಬಂಧವನ್ನು ಕ್ಷಣಕಾಲದಲ್ಲಿ ಕಳೆದುಕೊಂಡು ದೂರ ಸರಿಯುವ ನಿವೃತ್ತಿಯೆಂಬ ಈ ವಿದ್ಯಮಾನದ ಸ್ವರೂಪ ನಿಜವಾಗಿಯೂ ಬೆರಗುಗೊಳಿಸುವಂತಹದ್ದು; ಮರೆಯಲಾರದಂತಹದ್ದು.

ಆಗಲೇ ಮತ್ತೆ ನಾಣಿ ಅವತರಿಸಿದ್ದಾನೆ - ತನ್ನ ಹೊಸ ಯೋಜನೆಯೊಂದಿಗೆ. ಇಪ್ಪತ್ತನೆಯ ಶತಮಾನದಲ್ಲಿ ನೌಕರಿಗೆ ಸೇರಿ ಇಪ್ಪತ್ತೊಂದನೆಯ ಶತಮಾನದಲ್ಲಿ ನಿವೃತ್ತಿ ಹೊಂದುವ ಎಲ್ಲ ಸಂಶೋಧಕರನ್ನೂ ಒಂದೇ ವೇದಿಕೆಯಲ್ಲಿ ಬೀಳ್ಕೊಳ್ಳುವ ಅಭೂತಪೂರ್ವ 'ಮಿಲನಿಯಮ್' ವಿದಾಯ ಸಮಾರಂಭವೊಂದರ ರೂಪರೇಷೆಗಳನ್ನು ಅವನು ಸಿದ್ಧಪಡಿಸಿದ್ದಾನಂತೆ; ಒಂದೇ ವೇದಿಕೆಯಲ್ಲಿ ಅನೇಕರನ್ನು ಸನ್ಮಾನಿಸುವ, ಹಾಡಿ ಹೊಗಳುವ, ಈ ಕಾರ್ಯಕ್ರಮಕ್ಕೆ ನಿರ್ದೇಶಕರು ಅನುಮತಿಯನ್ನು ನೀಡಿದ್ದಾರಂತೆ. 'ಉಳಿದಿರುವುದು ಇಷ್ಟು ಮಾತ್ರ' ಎನ್ನುತ್ತ ಅವನು ಮುಂದುವರೆಸುತ್ತಾನೆ : 'ಭಾರೀ ವೆಚ್ಚ ತಗಲುವ ಈ ಮಿಲನಿಯಮ್ ಯೋಜನೆಗೆ ನಿವೃತ್ತರಾಗಲಿರುವ ನಿಮ್ಮೆಲ್ಲರಿಂದಲೂ ಹಣಕಾಸಿನ ನೆರವು ಅತ್ಯಗತ್ಯ. ಆದ್ದರಿಂದ ನಿವೃತ್ತರಾಗಲಿರುವವರೆಲ್ಲರಿಂದ ತಲಾ ಒಂದು ತಿಂಗಳ ಸಂಬಳವನ್ನು ಕಡ್ಡಾಯವಾಗಿ ವಸೂಲಿ ಮಾಡಲು ನಿರ್ಧರಿಸಿದ್ದೇವೆ. ನಿಮ್ಮ ಒಪ್ಪಿಗೆ ಇದೆ ತಾನೆ ?

ಏನೂ ಹೇಳಲು ತೋಚಲಿಲ್ಲ.
ಕುಸಿದು ಬಿದ್ದುಬಿಟ್ಟೆ.
ಅಷ್ಟೆ !

ಶಂಸ ಐತಾಳ
೬೧೧, ಚಂದನ (ಮಹಡಿ), ಏಳನೆಯ ಕ್ರಾಸ್, ಅನಿಕೇತನ ರಸ್ತೆ,
ಕುವೆಂಪುನಗರ, ಮೈಸೂರು - ೫೭೦ ೦೨೩

# ನಾನೊಬ್ಬ ಸಮಾಜವಾದಿ

## – ಸ್ವಾಮಿ ವಿವೇಕಾನಂದ



ಸಮಾಜವಾದಿ ವಿಚಾರಧಾರೆಯ ಅಲೆ ಭಾರತದ ತೀರ ತಲುಪುವುದಕ್ಕೆ ಎಷ್ಟೋ ಕಾಲ ಮುನ್ನವೇ ತಾವೊಬ್ಬ ಸಮಾಜವಾದಿ ಎಂದು ಘೋಷಿಸಿದ ಧೀಮಂತ ವ್ಯಕ್ತಿ ಸ್ವಾಮಿ ವಿವೇಕಾನಂದರು. ನೇತಾಜಿ ಸುಭಾಷ್ ಚಂದ್ರ ಬೋಸರ ಪ್ರಕಾರ, ''ವಿವೇಕಾನಂದರೇ ಭಾರತದಲ್ಲಿ ಸಮಾಜವಾದೀ ಭಾವನೆಯ ಆರಂಭಕಾರರು. ಅನಂತರ ವಷ್ಟೆ ಅದು ಕಾರ್ಲ್ ಮಾರ್ಕ್ಸ್‌ರವರ ವಿಚಾರಗಳ ಪ್ರಭಾವ ದಿಂದ ಹೆಮ್ಮರವಾಗಿ ಬೆಳೆಯಿತು.''

ನಿಜ, ವಿವೇಕಾನಂದರ ಸಮಾಜವಾದಕ್ಕೂ ಕಾರ್ಲ್ ಮಾರ್ಕ್ಸ್‌ರವರ ಸಮಾಜವಾದಕ್ಕೂ ನಡುವೆ ಅಜಗಜಾಂತರ ವಿದೆ. ಕಾರ್ಲ್ ಮಾರ್ಕ್ಸ್‌ರವರದು ವೈಜ್ಞಾನಿಕ ಸಮಾಜ ವಾದವಾದರೆ ವಿವೇಕಾನಂದರದು ಭಾವನಾವಾದಿ ಸಮಾಜವಾದ. 'ಬಹುಜನ ಹಿತಾಯ, ಬಹುಜನ ಸುಖಾಯ' ಎಂಬುದು ವಿವೇಕಾನಂದರ ಸಮಾಜವಾದದ ಮೂಲಮಂತ್ರ.

ಆದರೂ ಹಿಂದೂ ವೈದಿಕ ಚೌಕಟ್ಟಿನಲ್ಲೇ ಬೆಳೆದು ಬಂದ ವಿವೇಕಾನಂದರು ಆ ಚೌಕಟ್ಟನ್ನೂ ಮೀರಿ ಬೆಳೆದು ಕ್ರಾಂತಿಕಾರಿ ಎನ್ನುವಂತಹ ವಿಚಾರಗಳನ್ನು ಪ್ರತಿಪಾದಿ ಸಿದುದು ಅವರ ಹೆಗ್ಗಳಿಕೆಯೇ ಸರಿ. ವಿವೇಕಾನಂದರು ವಿದ್ಯಾರ್ಥಿಯಾಗಿದ್ದಾಗ ಪಾಶ್ಚಿಮಾತ್ಯ ವೈಜ್ಞಾನಿಕ ಹಾಗೂ ತಾತ್ವಿಕ ಗ್ರಂಥಗಳ ಅಧ್ಯಯನ ನಡೆಸಿದ್ದರು. ಆ ದೇಶಗಳಿಗೆ ಭೇಟಿ ಕೊಟ್ಟಾಗ ಅಲ್ಲಿನ ವಿಜ್ಞಾನಿಗಳೊಂದಿಗೆ ವಿಚಾರ ವಿನಿಮಯ ನಡೆಸಿದ್ದರು ಕೂಡ. ಡಾರ್ವಿನ್ನನ ವಿಕಾಸವಾದ ದಲ್ಲೂ ಅವರಿಗೆ ಆಸಕ್ತಿ ಇದ್ದಿತು. ಆದರೆ ಅದು ಪ್ರಾಣಿ ಹಾಗೂ ಸಸ್ಯ ಪ್ರಪಂಚಗಳಿಗಷ್ಟೆ ಅನ್ವಯ, ಮಾನವ ಪ್ರಪಂಚಕ್ಕಲ್ಲ, ಏಕೆಂದರೆ ಮಾನವನು ಬುದ್ಧಿಶಕ್ತಿ ಎಂಬ ವಿಶಿಷ್ಟ ಲಕ್ಷಣದಿಂದ ಕೂಡಿದವ, ಎಂದವರು ಭಾವಿಸಿದ್ದರು.

ಅವರ ನಿಶಿತಮತಿ ಸಮಾಜ ಕ್ಷೇತ್ರದಲ್ಲಷ್ಟೆ ಅಲ್ಲ, ಜನಜೀವನದ ಎಲ್ಲ ವಲಯಗಳಲ್ಲೂ ಎಲ್ಲ ಎಲ್ಲೆಕಟ್ಟು ಗಳನ್ನೂ ಕುಟ್ಟಿ ಕೆಡವಿ ಹೊಸ ರೀತಿಯಲ್ಲಿ ಯೋಚಿಸುತ್ತಿದ್ದಿತು. ಹಾಗೆ ಮಾಡುವಂತೆ ಜನರನ್ನೂ ಹುರಿದುಂಬಿಸುತ್ತಿದ್ದಿತು.

ಆಗಿನ ರಾಜನೀತಿಜ್ಞರ ಮೇಲೆ ವಿವೇಕಾನಂದರ ಪ್ರಭಾವ ಅಪರಿಮಿತವಾಗಿದ್ದಿತು. ಬಾಲ ಗಂಗಾಧರ ತಿಲಕರು ಅವರನ್ನು ಹಲವಾರು ಬಾರಿ ಸಂಧಿಸಿ ವಿಚಾರ ವಿನಿಮಯ ನಡೆಸಿದ್ದರು. ರವೀಂದ್ರನಾಥ ಟಾಗೋರರೂ ವಿವೇಕಾನಂದರ ವಿಚಾರಗಳಿಂದ ಪ್ರಭಾವಿತರಾಗಿದ್ದರು. ಮಹಾತ್ಮ ಗಾಂಧಿಯವರೂ, ''ಸ್ವಾಮಿ ವಿವೇಕಾನಂದರ ಕೃತಿಗಳನ್ನು ನಾನು ಆಮೂಲಾಗ್ರವಾಗಿ ಅಭ್ಯಸಿಸಿದ್ದೇನೆ. ಅವುಗಳನ್ನು ಓದಿದ ಮೇಲೆ ದೇಶದ ಮೇಲಿನ ನನ್ನ ಪ್ರೀತಿ ಸಾವಿರ ಪಟ್ಟು ಹೆಚ್ಚಾಗಿದೆ'' ಎಂದು ಹೇಳಿದ್ದಾರೆ. ಅವರು ಅನಂತರ ಬೃಹತ್ ಪ್ರಮಾಣದಲ್ಲಿ ನಡೆಸಿದ ಅಸ್ಪೃಶ್ಯತಾ ಚಳವಳಿಗೆ ವಿವೇಕಾನಂದರೇ ಸ್ಫೂರ್ತಿಯ ಸೆಲೆಯಾಗಿದ್ದರು.

ಬಂಗಾಳದ ಕ್ರಾಂತಿಕಾರಿಗಳಾದ, ಅರವಿಂದ ಘೋಷ್, ಹೇಮಚಂದ್ರ ಘೋಷ್ ಹಾಗೂ ಜೋಗೇಂದ್ರ ದತ್ತರೂ ವಿವೇಕಾನಂದರ ವಿಚಾರಗಳಿಂದ ಪ್ರಭಾವಿತರಾಗಿದ್ದರು. ವಿವೇಕಾನಂದರ ಸೋದರ ಡಾ॥ ಭೂಪೇಂದ್ರನಾಥ ದತ್ತರೇ ಒಬ್ಬ ಕ್ರಾಂತಿಕಾರಿಯಾಗಿದ್ದರು. *Swamy Vivekananda - patriot, prophet* ಎಂಬ ತಮ್ಮ ಗ್ರಂಥದಲ್ಲವರು ''ಬಂಗಾಳದ ಕ್ರಾಂತಿಕಾರಿ ಚಳವಳಿಯ ಆಧಾರ ಪುರುಷ ವಿವೇಕಾನಂದರೇ'' ಎಂದು ತಿಳಿಸಿದ್ದಾರೆ.

''ಸಂಕೋಲೆಗಳನ್ನು ಬಿಟ್ಟು ನೀವು ಕಳೆದುಕೊಳ್ಳುವುದು ಬೇರೇನೂ ಇಲ್ಲ, ಆದರೆ ಗಳಿಸಲು ಇಡೀ ಜಗತ್ತೇ ಇದೆ'' ಎಂದು ಕಾರ್ಲ್ ಮಾರ್ಕ್ಸ್‌ರವರು ಹೇಳಿದಂತೆ ವಿವೇಕಾನಂದರೂ ಹೆಚ್ಚುಕಡಿಮೆ ಅದೇ ರೀತಿಯಲ್ಲೇ, ದೀನದಲಿತರನ್ನುದ್ದೇಶಿಸಿ ಹೇಳಿದ್ದರು: 'ನೀವು ರಾಷ್ಟ್ರದ ಜೀವಾಳ... ನಿಮ್ಮಲ್ಲಿ ಅನಂತ ಶಕ್ತಿ ಇದೆ. ಪ್ರಪಂಚವನ್ನೇ ಬದಲಿಸಬಲ್ಲಿರಿ. ಎದ್ದು ನಿಲ್ಲಿ, ಬಂಧನಗಳನ್ನು ಕಿತ್ತೊಗೆಯಿರಿ. ಇಡೀ ಜಗತ್ತೇ ನಿಮ್ಮನ್ನು ಕಂಡು ವಿಸ್ಮಯಗೊಳ್ಳುವುದು.''

ಕೆ. ಎಲ್. ಗೋಪಾಲಕೃಷ್ಣ ರಾವ್

> **ಕಣ್ತೆರೆದು ಸುತ್ತಲೂ ನೋಡು!**
>
> *ಒಮ್ಮೆ ಯುವಕನೊಬ್ಬ ವಿವೇಕಾನಂದರಲ್ಲಿಗೆ ಬಂದು ತಾನು ತುಂಬ ಭಕ್ತಿಯಿಂದ ಪೂಜೆ ಜಪಗಳನ್ನು ಮಾಡುತ್ತಿದ್ದನೆಂದೂ, ಎಷ್ಟೆಷ್ಟು ಕಷ್ಟಪಟ್ಟರೂ ಮನಶ್ಶಾಂತಿ ದೊರಕುತ್ತಿಲ್ಲವೆಂದೂ ಹೇಳಿಕೊಂಡ.*
>
> *''ವಿದ್ವಾಂಸರೊಬ್ಬರ ಸಲಹೆಯಂತೆ ನಾನು ಪ್ರತಿದಿನ ಕೋಣೆಯ ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿ ಧ್ಯಾನಮಾಡುತ್ತಿದ್ದೇನೆ. ಆದರೆ ಮನಸ್ಸಿಗೆ ಸ್ವಲ್ಪವೂ ಶಾಂತಿ ನೆಮ್ಮದಿ ದೊರಕುತ್ತಿಲ್ಲ'' ಎಂದು ತನ್ನ ದುಃಖ ತೋಡಿಕೊಂಡ.*
>
> *ವಿವೇಕಾನಂದ ಹೇಳಿದರು:*
>
> *''ಮಗು, ನೀನು ಮೊದಲು ನಿನ್ನ ಕೋಣೆಯ ಕಿಟಕಿ ಬಾಗಿಲುಗಳನ್ನು ತೆರೆಯಬೇಕು. ಕಣ್ಣು ಮುಚ್ಚಿರುವುದರ ಬದಲು ತೆರೆದು ಸುತ್ತಲೂ ನೋಡಬೇಕು. ಆಗ ನೂರಾರು ಸಾವಿರಾರು ಬಡವರು ಅಸಹಾಯಕರು ಕಾಣುತ್ತಾರೆ. ಅವರ ಸೇವೆ ಮಾಡು. ನೀನು ವಿದ್ಯಾವಂತ. ಅವರಿಗೆ ವಿದ್ಯೆ ಕೊಡು. ಆದರಿಂದ ನಿನಗೆ ಮನಶ್ಶಾಂತಿ ಸಿಗುತ್ತದೆ.''*

1893ರಷ್ಟು ಹಿಂದೆಯೇ ವಿವೇಕಾನಂದರು, ''ಹೊಸ ಯುಗವನ್ನು ಪ್ರಾರಂಭಿಸಲಿರುವ ಮಹೋತ್ಥಾನವು ರಷ್ಯ ಹಾಗೂ ಚೀನಗಳಲ್ಲಿ ಉಂಟಾಗುವುದು. ಅದು ಇಡೀ ಜಗತ್ತನ್ನೇ ಆವರಿಸಲಿರುವುದು'' ಎಂದು ಮುನ್ನುಡಿದಿದ್ದರು.

### ಚಾತುರ್ವರ್ಣ್ಯದ ಚೌಕಟ್ಟಿನಲ್ಲಿ ಸಮಾಜವಾದ

ವಿವೇಕಾನಂದರು ವಿದ್ಯಾರ್ಥಿ ದಿಸೆಯಲ್ಲಿದ್ದಾಗಲೇ ಮುಕ್ತ ಚಿಂತನೆಯ ಗೀಳು ಬೆಳೆಸಿಕೊಂಡಿದ್ದರು. ವಕೀಲ ತಂದೆಯವರ ಶ್ರೀಮಂತ ಸಂತೃಪ್ತ ಕುಟುಂಬದಲ್ಲಿ ನಿರಾತಂಕ ವೈಭೋಗದ ನಿಶ್ಚಿಂತ ಜೀವನ ನಡೆಸಬಹುದಾಗಿದ್ದರೂ, ವಿಲಾಸಪೂರ್ಣ ಪ್ರಾಪಂಚಿಕ ಜೀವನವನ್ನು ತಿರಸ್ಕಾರದಿಂದ ಕಾಣುತ್ತಿದ್ದರು. ವೈದಿಕ ಸಮಾಜದ ಕಂದಾಚಾರ ಕಟ್ಟಳೆಗಳನ್ನು ವಿರೋಧಿಸುತ್ತಿದ್ದ ಬ್ರಾಹ್ಮ ಸಮಾಜದ ಅನುಯಾಯಿಯಾಗಿದ್ದರು. ಒಂದು ರೀತಿಯ ನಾಸ್ತಿಕ ಭಾವನೆಯನ್ನೂ ಬೆಳೆಸಿಕೊಂಡಿದ್ದರು. ಹಿಂದೂ ಸಾಮಾಜಿಕ ವ್ಯವಸ್ಥೆಯ ಕಡು ವಿರೋಧಿ ಯಾಗಿದ್ದರು. ದೇವರು ಎನ್ನುವುದೇ ಇಲ್ಲ, ದೇವರು ದಿಂಡರು ಎಲ್ಲ ಬರೀ ಸುಳ್ಳು, ಕಂತೆ ಪುರಾಣ, ಎಂದು ಘೋಷಿಸಿದ್ದರು.

ಇಂಥ ಕ್ರಾಂತಿಕಾರಿ ಮನೋಭಾವ ತಳೆದಿದ್ದರೂ ಅವರ ಸಮಾಜವಾದದ ಭಾವನೆ ಪೂರ್ಣವಾಗಿ ಹಿಂದೂ ಚಾತುರ್ವರ್ಣ್ಯ ಪದ್ಧತಿಯನ್ನೇ ಆಧರಿಸಿದ್ದಿತು. ಅವರ ಪ್ರಕಾರ ಮಾನವ ಸಮಾಜವು ವಿಕಾಸಗೊಳ್ಳುತ್ತಾ ಹೋದಂತೆ ಒಂದಾದನಂತರ ಒಂದರಂತೆ ನಾಲ್ಕು ಜಾತಿಗಳ– ಪುರೋಹಿತ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ– ಅಧಿಕಾರ ಪ್ರಭಾವಕ್ಕೆ ಒಳಪಟ್ಟಿರುತ್ತದೆ. ಒಂದೊಂದು ಸಮಾಜ ವ್ಯವಸ್ಥೆಯಲ್ಲೂ ಅದರದೇ ಸದ್ಗುಣಗಳೂ ಅವಗುಣಗಳೂ ಇರುತ್ತವೆ.

ಮೊದಲ ಸಮಾಜ ವ್ಯವಸ್ಥೆ ಪುರೋಹಿತಶಾಹಿ (ಬ್ರಾಹ್ಮಣ) ಸಮಾಜ. ಇದರಲ್ಲಿ ವಂಶಪಾರಂಪರ್ಯ ತೆಯದೇ ಮೇಲುಗೈ. ಅದರ ಆಧಾರದ ಮೇಲೆ ಸಂಪತ್ತು ಜ್ಞಾನ ಮತ್ತಿತರ ಸವಲತ್ತುಗಳೆಲ್ಲ ಒಂದೇ ಜಾತಿಯ-ಬ್ರಾಹ್ಮಣ ಜಾತಿಯ - ಗುತ್ತಿಗೆ. ಪುರೋಹಿತರು ಇತರರ ಮನಸ್ಸುಗಳ ಮೇಲೆ ಹಿಡಿತ ಇರಿಸಿಕೊಂಡು ಅಧಿಕಾರ ನಡೆಸುತ್ತಾರೆ. ಇವರನ್ನು ಬಿಟ್ಟು ಬೇರೆ ಯಾರಿಗೂ ಜ್ಞಾನಾರ್ಜನೆಯ ಹಕ್ಕಿಲ್ಲ. ಆದರೆ ಈ ಪದ್ಧತಿಯ ಒಂದು ಸದ್ಗುಣವೆಂದರೆ - ಅದು ವಿಜ್ಞಾನಗಳ ಬೆಳವಣಿಗೆಗೆ ಅಡಿಪಾಯ ಹಾಕಿಕೊಟ್ಟದ್ದು.

ಅನಂತರ ಬಂದ ಎರಡನೆಯ ಸಮಾಜ ವ್ಯವಸ್ಥೆ ಕ್ಷತ್ರಿಯ ಸಮಾಜ. ಇದೊಂದು ಕ್ರೌರ್ಯ, ದಬ್ಬಾಳಿಕೆಗಳ ಆಡಳಿತ ವ್ಯವಸ್ಥೆ. ಇದರಲ್ಲಿ, ಇದರ ಹಿಂದಿನ ವ್ಯವಸ್ಥೆಯಲ್ಲಿದ್ದಂಥ ಜ್ಞಾನ-ಸಂಪತ್ತುಗಳ ಮೇಲಿನ ಪ್ರತ್ಯೇಕತಾ ಗುತ್ತೇದಾರಿ ಲಕ್ಷಣ ಇರುವುದಿಲ್ಲ. ಆದರೆ ಈ ವ್ಯವಸ್ಥೆಯಲ್ಲಿ ಕಲೆ, ಸಾಮಾಜಿಕ ಸಂಸ್ಕೃತಿಗಳ ಏಳಿಗೆಗೆ ಅಪರಿಮಿತ ಅವಕಾಶಗಳಿರುತ್ತವೆ.

ಮೂರನೆಯದು ವೈಶ್ಯ ಸಮಾಜ ವ್ಯವಸ್ಥೆ. ಇದು ಒಂದು ರೀತಿಯಲ್ಲಿ ಇಂದಿನ ಬಂಡವಾಳಶಾಹಿ ಸಮಾಜ ವ್ಯವಸ್ಥೆ ಎನ್ನಬಹುದು. ಇದರಲ್ಲಿ, ಮೌನದಿಂದಲೇ ಎಲ್ಲರನ್ನೂ ಸದೆಬಡಿಯುವ, ರಕ್ತ ಹೀರುವ ಆಡಳಿತ ವಿರುತ್ತದೆ. ಇದರಲ್ಲಿನ ಉತ್ತಮಾಂಶವೆಂದರೆ - ಹಿಂದಿನ ಎರಡು ಸಮಾಜ ವ್ಯವಸ್ಥೆಗಳಲ್ಲೂ ಸಂಚಯಗೊಂಡಿದ್ದ ವಿಚಾರ ಭಾವನೆಗಳು ವ್ಯಾಪಕವಾಗಿ ಹರಡುತ್ತವೆ. ವೈಶ್ಯನು ವ್ಯಾಪಾರಕ್ಕಾಗಿ ಸ್ಥಳದಿಂದ ಸ್ಥಳಕ್ಕೆ ಸಂಚಾರ ಹೋಗುವುದೇ ಇದಕ್ಕೆ ಕಾರಣ. ಆದರೆ ಈ ವ್ಯವಸ್ಥೆಯಲ್ಲಿ ಹಣದ ಪ್ರಭಾವ ಹೆಚ್ಚಿ ಸಂಸ್ಕೃತಿ ಅವನತಿಗೊಳ್ಳುತ್ತದೆ.

ನಾಲ್ಕನೆಯದು ಶೂದ್ರ ಸಮಾಜ ವ್ಯವಸ್ಥೆ. ಇದನ್ನೇ ವಿವೇಕಾನಂದರು ಸಮಾಜವಾದಿ ವ್ಯವಸ್ಥೆ ಎಂದು ಕರೆದುದು. ಪಾಶ್ಚಿಮಾತ್ಯ ಜಗತ್ತಿನಲ್ಲಾಗಲೇ ಕೆಲವೆಡೆ ಈ ಸಮಾಜದ ಉದಯವಾಗಿದೆ, ಅದು ಜಗತ್ತಿನಾದ್ಯಂತ ವ್ಯಾಪಕವಾಗಿ ಹರಡುವುದು ಖಂಡಿತ ಎಂದು ವಿವೇಕಾನಂದರು ಭಾವಿಸಿದ್ದರು. ಈ ವ್ಯವಸ್ಥೆಯಲ್ಲಿ ಭೌತಿಕ ಸುಖ ಸೌಕರ್ಯಗಳು ಎಲ್ಲರಿಗೂ ದೊರೆಯುವಂತಾಗುತ್ತದೆ. ಆದರೆ, ಅವರ ಪ್ರಕಾರ, ಸಂಸ್ಕೃತಿಯ ಮಟ್ಟ (ಬಹುಶಃ) ಕುಸಿಯುತ್ತದೆ. ಅಂತೆಯೇ ಸಾಮಾನ್ಯ ಶಿಕ್ಷಣ ಸಕಲರಿಗೂ ಲಭ್ಯವಾಗುತ್ತದೆ, ಆದರೆ ಪ್ರತಿಭಾನಿತ್ವರ ಸಂಖ್ಯೆಯಲ್ಲಿ ಇಳಿತವಾಗುತ್ತದೆ.

### ಮೊದಲು ಅನ್ನ, ಆಮೇಲೆ ಆಧ್ಯಾತ್ಮ

ಮೇಲು ನೋಟಕ್ಕೇ ಕಾಣುವಂತೆ, ಮೇಲಿನ ಸಮಾಜ ವಿಕಾಸ ಕಲ್ಪನೆಗೆ ಹೇಳಿಕೊಳ್ಳುವಂತಹ ವೈಜ್ಞಾನಿಕ, ವೈಚಾರಿಕ ಅಥವಾ ಆರ್ಥಿಕ ಅಡಿಪಾಯವೇನೂ ಇಲ್ಲ. ವಿವೇಕಾನಂದರೇ ಹೇಳಿರುವಂತೆ, ''ನಾನೊಬ್ಬ ಸಮಾಜವಾದಿ, ಏಕೆಂದರೆ, ಅರ್ಧ ರೊಟ್ಟಿ ತುಣುಕು ಏನೇನೂ ಇಲ್ಲದಿರುವುದಕ್ಕಿಂತ ಮೇಲು.'' ಜನರ ನಡುವೆ ಇದ್ದ ಕಡು ಬಡತನ, ದಾರಿದ್ರ್ಯ, ಹಸಿವು, ಅಜ್ಞಾನಗಳನ್ನು ಕಂಡು ರೋಸಿಹೋದ ಈ ಮಹಾ ಮಾನವತಾವಾದಿ ತಮ್ಮ ಸಮಾಜವಾದೀ ಕಲ್ಪನೆಯಲ್ಲಿ ಬಡತನ ನಿರ್ಮೂಲನಕ್ಕೇ ಹೆಚ್ಚು ಒತ್ತುಕೊಟ್ಟರು. ದಲಿತರ ಉದ್ಧಾರವೇ ರಾಷ್ಟ್ರೋದ್ಧಾರ ಎಂದು ಘೋಷಿಸಿದರು.

ವಿವೇಕಾನಂದರು ಬಡತನದ ಬವಣೆಯನ್ನು ಸ್ವತಃ ಅನುಭವಿಸಿ ಕಂಡಿದ್ದರು. 1884ರಲ್ಲಿ ಅವರಿಗೆ ಕೇವಲ 21 ವಯಸ್ಸಾಗಿದ್ದಾಗಲೇ ಅವರ ತಂದೆ ತೀರಿಹೋದರು. ಏಳೆಂಟು ಜನರ ಸಂಸಾರ ನಡೆಸುವ ಜವಾಬ್ದಾರಿ ಹಿರಿಯ ಮಗನಾದ ಇವರ ಹೆಗಲ ಮೇಲೆ ಬಿದ್ದಿತು. ಸಾಲಗಾರರ ಕಾಟವೂ ಹೆಚ್ಚಿತು. ಆಗಷ್ಟೇ ಅವರಿನ್ನೂ ಬಿ. ಎಲ್. ಪರೀಕ್ಷೆಗೆ ಓದುತ್ತಿದ್ದರು. ಮನೆಯಲ್ಲಿ ಬಹುವೇಳೆ ಊಟಕ್ಕೆ ಸಾಕಷ್ಟು ಅಕ್ಕಿ ಬೇಳೆ ಇರುತ್ತಿರಲಿಲ್ಲ. ಅಂಥ ಸಂದರ್ಭಗಳಲ್ಲಿ ವಿವೇಕಾನಂದರು (ಆಗ ಇವರ ಹೆಸರು ನರೇಂದ್ರ ಎಂದಿತ್ತು) ''ನನ್ನ ಸ್ನೇಹಿತರು ಊಟಕ್ಕೆ ಕರೆದಿದ್ದಾರೆ, ನಾನು ಅಲ್ಲಿಗೆ ಹೋಗುತ್ತೇನೆ'' ಎಂದು ತಮ್ಮ ತಾಯಿಯ ಬಳಿ ಸುಳ್ಳು ಹೇಳಿ ಇಡೀ ದಿನ ಉಪವಾಸ ಇದ್ದುಬಿಡುತ್ತಿದ್ದರಂತೆ. ಆದ್ದರಿಂದಲೇ ಅವರು ಜನಸಾಮಾನ್ಯರ ದಾರಿದ್ರ್ಯ ಕಂಡಾಗ 'ಮೊದಲು ಅನ್ನ, ಆಮೇಲೆ ಆಧ್ಯಾತ್ಮ' ಎಂದು ಘೋಷಿಸಿದುದು. ಇದೇ ಅವರ ಸಮಾಜವಾದದ ತಿರುಳಾಗಿದ್ದಿತು.

ವಿವೇಕಾನಂದರು ಎಲ್ಲರಿಗೂ ಸಮಬಾಳು, ಎಲ್ಲರಿಗೂ ಸಮಪಾಲು ಇರುವ ಸಮಾಜದ ಕಲ್ಪನೆಯನ್ನೇನೋ ಜನರ ಮುಂದಿಟ್ಟರು. ಆದರೆ ಅಂತಹ ಸಮಾಜದ ನಿರ್ಮಾಣಕ್ಕಾಗಿ ಅವರು, ಮಾರ್ಕ್ಸ್-ಎಂಗೆಲ್ಸ್-ಲೆನಿನರು ಮಾಡಿದಂತೆ, ಯಾವುದೇ ವೈಜ್ಞಾನಿಕ ಕಾರ್ಯಕ್ರಮವನ್ನೇನೂ ಹಾಕಿಕೊಡಲಿಲ್ಲ. ಅಂತಹ ಸಮಾಜ ಬರುವುದು ಖಂಡಿತವೆಂದು ಅವರು ಮನಗಂಡಿದ್ದರು. ಆದರೆ ಅದನ್ನು ಆಗುಮಾಡಲು ಶ್ರಮಜೀವಿಗಳಿಗೆ ಪ್ರಾಯೋಗಿಕ ಕಾರ್ಯಕ್ರಮ ಹಾಕಿಕೊಡುವಂಥ ರಾಜಕಾರಣಿ ಅಥವಾ ಸಮಾಜ ಶಾಸ್ತ್ರಜ್ಞರೇನೂ ಅವರಾಗಿರಲಿಲ್ಲ. ದೇಶದ ಯುವಜನರೇ ಈ ಕಾರ್ಯವೆಸಗಬೇಕೆಂದು ಅವರು ನಂಬಿದ್ದರು. ಇದಕ್ಕಾಗಿ ಒಂದು ಲಕ್ಷ ಸುಶಿಕ್ಷಿತ ಯುವಜನರನ್ನು ಸಂಘಟಿಸುವ ಕನಸು ಕಂಡಿದ್ದರವರು:

''ನಮ್ಮ ಯುವಜನರಲ್ಲಿ ನನಗೆ ಅಪಾರ ವಿಶ್ವಾಸವಿದೆ. ಶೂದ್ರಾದಿಗಳು ಮೇಲೆದ್ದು ನಿಂತು ತಮ್ಮ ಹಕ್ಕು ಚಲಾಯಿಸುವ ಕಾಲ ಸನ್ನಿಹಿತವಾಗುತ್ತಿದೆ... ದಲಿತ ವರ್ಗದವರಿಗೆ ಶಿಕ್ಷಣ ನೀಡಿ ಅವರಲ್ಲಿ ಸಮಾನತೆಯ ಭಾವನೆ ಉಂಟುಮಾಡಿ. ಪುರೋಹಿತಶಾಹಿ ದಬ್ಬಾಳಿಕೆಯನ್ನೂ ಜಾತಿ ಪದ್ಧತಿಯನ್ನೂ ನಿರ್ಮೂಲ ಮಾಡುವುದು ಪ್ರತಿಯೊಬ್ಬ ವಿದ್ಯಾವಂತ ಭಾರತೀಯನ ಹೊಣೆ... ಮಾನವ ಇತಿಹಾಸದಲ್ಲೆಲ್ಲ ಮಹಾಶಕ್ತಿ ಕಂಡುಬಂದದ್ದು ಜನಸಾಮಾನ್ಯರಲ್ಲೇ. ಜಗತ್ತಿನ ಮಹಾ ವಿಭೂತಿಗಳೆಲ್ಲ ಜನಿಸಿದುದು ಅಂಥವರ ನಡುವೆಯೇ. ಈಗಲೂ ಅಂತಹ ಮಹಾಪುರುಷರು ನಿಮ್ಮ ಮಧ್ಯೆ ಉದಯಿಸಬೇಕಾಗಿದೆ... ಯಾವುದಕ್ಕೂ ಅಂಜಬೇಡಿ. ಅಂಜಿಕೆ ಎಲ್ಲಕ್ಕಿಂತ ದೊಡ್ಡ ಮೂಢನಂಬಿಕೆ.. ಏಳಿ, ಎಚ್ಚರಗೊಳ್ಳಿ. ಗುರಿ ಮುಟ್ಟುವವರೆಗೂ ನಿಲ್ಲದಿರಿ !''

### ಉಜ್ವಲ ರಾಷ್ಟ್ರಪ್ರೇಮಿ

19ನೇ ಶತಮಾನದ ಕೊನೆ ಹಾಗೂ 20ನೇ ಶತಮಾನದ ಆದಿ ಭಾಗದಲ್ಲಿ ಭಾರತದ ಬಾನಂಗಳದಲ್ಲಿ ಮೆರೆದ ಮಹೋಜ್ವಲ ಧ್ರುವತಾರೆ ಎಂದು ವಿವೇಕಾನಂದರ ಉಗಮವನ್ನು ವರ್ಣಿಸಲಾಗಿದೆ. ಆಗ ಭಾರತವು ವಿದೇಶೀ ಆಳ್ವಿಕೆಯ ಬಿಗಿಮುಷ್ಟಿಯಲ್ಲಿ ಸಿಕ್ಕಿ ತತ್ತರಿಸುತ್ತಿದ್ದಿತು. ಆಗ ಸ್ವಲ್ಪ ಕಾಲದ ಮುನ್ನವಷ್ಟೆ ಜರುಗಿದ್ದ 'ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮ'ವನ್ನು ಬ್ರಿಟಿಷರು ಮೃಗೀಯ ದಬ್ಬಾಳಿಕೆಯಿಂದ ಹತ್ತಿಕ್ಕಿದ್ದರು. ಜನರಲ್ಲಿ ಒಂದು ರೀತಿಯ ಹತಾಶೆಯ, ನಿರಾಶೆಯ ಭಾವನೆ ಮೂಡಿದ್ದಿತು.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಆಗಷ್ಟೆ ಜನ್ಮ ತಾಳಿ ಯಾವ ಧೀಮಂತ ನಿಲುವೂ ಇಲ್ಲದ ಎಳಸಾದ ಸಂಘಟನೆಯಾಗಿದ್ದಿತು. ಬ್ರಿಟಿಷ್ ಅಧಿಕಾರಿಗಳನ್ನು ಅಂಗಲಾಚಿ ಬೇಡಿ ದೊರೆತ ಅಲ್ಪಾನುಕೂಲ, ಸ್ಥಾನಮಾನ, ಅಧಿಕಾರ ಹಾಗೂ ಸಂಪತ್ತುಗಳೇ ತಮ್ಮ ಮಹಾಗಳಿಕೆಗಳೆಂದು ಆಗಿನ ಹೆಚ್ಚಿನ ಮಂದಿ ಕಾಂಗ್ರೆಸ್ ನಾಯಕರು ಭಾವಿಸಿದ್ದರು.

ಅದು ಒಂದು ರೀತಿಯ ಸಂಕ್ರಮಣ ಕಾಲವಾಗಿದ್ದಿತು. ಜನರಲ್ಲಿದ್ದ ಅನೈಕ್ಯತೆಯ ಕಾರಣದಿಂದಾಗಿ ಭಾರತ ಸಂಕಷ್ಟದ ಸುಳಿಯಲ್ಲಿ ಸಿಕ್ಕಿಬಿದ್ದಿದ್ದಿತು. ನೂರಾರು ಸಣ್ಣಪುಟ್ಟ

### ದನರಕ್ಷಣೆ - ಜನರಕ್ಷಣೆ

ಸ್ವಾಮಿ ವಿವೇಕಾನಂದರು ಅಮೆರಿಕದಿಂದ ಹಿಂದಿರುಗಿ ಬಂದ ಮೇಲೆ ಬಿಹಾರದಲ್ಲಿ ಭಯಂಕರ ಬರ ಬಂದಿತ್ತು. ಜನ ಹೊಟ್ಟೆಗಿಲ್ಲದೆ ಸಾಯುತ್ತಿದ್ದರು. ಆಗ ಕಲಕತ್ತದ ಒಬ್ಬ ಮಾರ್ವಾಡಿ ಸ್ವಾಮಿಜಿಯನ್ನು ಭೇಟಿ ಮಾಡಿ ಕೇಳಿಕೊಂಡ:

''ಸ್ವಾಮಿಜಿ, ಗೋ ರಕ್ಷಣಾ ಕಾರ್ಯ ಕೈಗೊಳ್ಳಬೇಕು. ನಿಧಿ ಕೂಡಿಸಬೇಕು.''

ಸ್ವಾಮಿಜಿ ಕೇಳಿದರು:

''ಬಿಹಾರಿನಲ್ಲಿ ಸಾವಿರಾರು ಜನ ಸಾಯುತ್ತಿದ್ದಾರೆ. ಅವರ ರಕ್ಷಣೆಗೆ ಏನು ಮಾಡುತ್ತೀರಿ?''

''ಜನ ಸಾಯುವುದು ಅವರ ಕರ್ಮ! ನಾವೇನು ಮಾಡುವುದಕ್ಕೆ ಆಗುತ್ತದೆ?''

''ಹಾಗಾದರೆ ಗೋಹತ್ಯೆ ನಡೆದರೆ ಅವುಗಳ ಕರ್ಮ ಅಂತ ಯಾಕೆ ಸುಮ್ಮನಿರಬಾರದು?''

ಮಾರ್ವಾಡಿ ಉತ್ತರಿಸಿದ:

''ಗೋ ನಮ್ಮ ತಾಯಿ. ಅದನ್ನು ರಕ್ಷಿಸುವುದು ಮಕ್ಕಳ ಧರ್ಮ.'' ಸ್ವಾಮೀಜಿ ನಗುತ್ತ ಹೇಳಿದರು:

''ಇರಬೇಕು. ನಿಮ್ಮಂಥವರ ತಾಯಿ ಆ ದನಗಳೇ ಇರಬೇಕು! ನಿಮ್ಮಂತಹ ಪುತ್ರರತ್ನಗಳಿಗೆ ಮತ್ತಾರು ಜನ್ಮವಿತ್ತಾರು!''

ರಾಜಮಹಾರಾಜರುಗಳು ಪರಸ್ಪರ ಸೆಣಸುತ್ತ ಬ್ರಿಟಿಷರ 'ಒಡೆದು ಆಳು'ವ ನೀತಿಗೆ ಬಲಿಪಶುಗಳಾಗಿದ್ದರು. ಬುದ್ಧಿವಂತರೆನಿಸಿಕೊಂಡಿದ್ದ ಜನರಲ್ಲೂ ಬಹುಮಂದಿ ಪಾಶ್ಚಾತ್ಯರ ಥಳುಕಿನ ಸಂಸ್ಕೃತಿಗೆ ಮಾರುಹೋಗಿ, ಸ್ವಾಭಿಮಾನ, ದೇಶಪ್ರೇಮಗಳನ್ನು ಮೂಲೆ ಗುಂಪಾಗಿಸಿದ್ದರು.

ಇಂಥ ಸಮಯದಲ್ಲಿ ವಿವೇಕಾನಂದರು ರಾಷ್ಟ್ರೀಯ ರಂಗ ಪ್ರವೇಶಿಸಿದರು. ಭಾರತದ ಉದ್ದಗಲ ಹಲವಾರು ಬಾರಿ, ಹೆಚ್ಚಾಗಿ ಕಾಲ್ನಡಿಗೆಯಲ್ಲೇ, ಸುತ್ತಾಡಿ ಜನರಲ್ಲಿ ದೇಶಪ್ರೇಮದ ಭಾವನೆಯನ್ನು ಕಿಡಿಗೂಡಿಸಿದರು. ಅವರೊಬ್ಬ ಉಜ್ವಲ ವಾಗ್ಮಿಯಾಗಿದ್ದರು. ಸಂನ್ಯಾಸಿಯ ಉಡುಪು ತೊಟ್ಟ ಧೃಢಕಾಯರಾಗಿದ್ದ ಅವರು ತಮ್ಮ ಆತ್ಮಾಕರ್ಷಕ ವ್ಯಕ್ತಿತ್ವದಿಂದ, ಮೊಳಗುವ ಕಂಠದಿಂದ ಸಹಸ್ರಾರು ಶ್ರೋತೃಗಳನ್ನು ಸಂಮೋಹಗೊಳಿಸಿ ತಮ್ಮ ವಿಚಾರ ಅವರ ಹೃದಯ ತಲುಪುವಂತೆ ಮಾಡುತ್ತಿದ್ದರು.

'ಸಿಪಾಯಿ ದಂಗೆ' ಎಂದು ಕರೆದ 'ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮ'ದ ಬಗೆಗೆ ಮಾತನಾಡುವಾಗ ಅವರು ಝಾನ್ಸಿ ರಾಣಿ ಲಕ್ಷ್ಮೀಬಾಯಿಯನ್ನು ಸಂಸ್ಮರಿಸಿ, ಕಣ್ಣೀರು ಸುರಿಸುತ್ತ ''ಆಕೆ ಒಬ್ಬ ದೇವತೆ, ಒಬ್ಬ ದೇವಿ, ಸ್ವಾತಂತ್ರ್ಯಕ್ಕಾಗಿ ಶೌರ್ಯದಿಂದ ಹೋರಾಡಿ ವೀರಪುರುಷನಂತೆ ಸಾವನ್ನಪ್ಪಿದಳು'' ಎಂದು ಹೇಳಿ ಸಭಿಕರಲ್ಲಿ ದೇಶಾಭಿಮಾನದ ಪ್ರಜ್ಞೆ ಮೂಡಿಸುತ್ತಿದ್ದರು.

ತಮ್ಮ ಭಾಷಣಗಳಲ್ಲೆಲ್ಲ ಅವರು ಸಮಸ್ತ ಭಾರತವನ್ನು ಒಗ್ಗೂಡಿಸುವ ಅಂಶಗಳನ್ನು ಒತ್ತಿ ತಿಳಿಸುತ್ತಿದ್ದರು. ಶಕ್ತಿ ಮತ್ತು ನಿರ್ಭಯತೆಯಿಂದಷ್ಟೆ ದೇಶವನ್ನು ಸ್ವತಂತ್ರಗೊಳಿಸಿ ಸುಭಿಕ್ಷವನ್ನಾಗಿಸುವುದು ಸಾಧ್ಯವೆಂದು ಹೋದೆಡೆಯಲ್ಲೆಲ್ಲ ಬೋಧಿಸುತ್ತಿದ್ದರು. ರಾಷ್ಟ್ರದ ಶ್ರೇಯೋಭಿವೃದ್ಧಿಗಾಗಿ ದುಡಿಯುವಲ್ಲಿ ನರಕಕ್ಕೆ ಹೋಗಬೇಕಾಗಿ ಬಂದರೂ ಅದು ತಮ್ಮ ಪಾಲಿನ ಪರಮಭಾಗ್ಯವೆಂದು ತಾವು ಭಾವಿಸುವುದಾಗಿ ಹೇಳುತ್ತಿದ್ದರು.

ಕನ್ಯಾಕುಮಾರಿಯಲ್ಲಿ ಸಮುದ್ರದ ಮಧ್ಯೆ ಇದ್ದ 'ಶ್ರೀಪಾದ ಶಿಲೆ' (ಇಂದು ಇದು 'ವಿವೇಕಾನಂದ ಶಿಲೆ'ಯಾಗಿ ಇತಿಹಾಸ ಪ್ರಸಿದ್ಧವಾಗಿದೆ) ಎಂಬ ಬಂಡೆಯ ಮೇಲೆ ಕುಳಿತು ಧ್ಯಾನ ನಿರತರಾಗಿ, ''ಭಾರತವನ್ನು ಹೀನ ಸ್ಥಿತಿಯಿಂದ ಮೇಲೆತ್ತುವ ಬಯಕೆ ನನ್ನನ್ನು ದಹಿಸುತ್ತಿದೆ. ಭಾರತೀಯರ ಸರ್ವತೋಮುಖ ಏಳಿಗೆಗಾಗಿ ನನ್ನ ಸರ್ವಸ್ವವನ್ನೂ ಸಮರ್ಪಿಸುತ್ತಿದ್ದೇನೆ'' ಎಂದು ಘೋಷಿಸಿದರು.

ದೇಶದಾದ್ಯಂತ ಅಷ್ಟೇ ಅಲ್ಲ, ಯೂರೋಪು ಅಮೆರಿಕಾಗಳಲ್ಲೂ ಎರಡು ಬಾರಿ ಪ್ರಯಾಣ ಕೈಗೊಂಡು ತಮ್ಮ ಭಾಷಣಗಳ ಮೂಲಕ ಭಾರತದ ಹಿರಿಮೆಗರಿಮೆಗಳನ್ನು ಜನರಿಗೆ ಪರಿಚಯ ಮಾಡಿಕೊಟ್ಟರು. ಮೊದಲ ಬಾರಿ ಅಮೆರಿಕಕ್ಕೆ ಭೇಟಿ ನೀಡಿದಾಗ 'ವಿಶ್ವಧರ್ಮ ಸಮ್ಮೇಳನ'ದಲ್ಲಿ (ಶಿಕಾಗೋ ಪಾರ್ಲಿಮೆಂಟ್) ವಿವೇಕಾನಂದರು ಅಮೋಘ ಭಾಷಣ ಮಾಡಿ ಭಾರತದ ಸರ್ವಧರ್ಮಸಮನ್ವಯ ಹಾಗೂ



ಪರಮತಸಹಿಷ್ಣುತಾ ಗುಣಗಳನ್ನು ಒತ್ತಿ ಹೇಳಿದರು. ತಮ್ಮ ವಾಗ್ಝರಿಯಿಂದ ಸಭಿಕರನ್ನು ಭಾವಾವೇಶಗೊಳಿಸಿ ಅವರ ಪ್ರಚಂಡ ಕರತಾಡನ-ಹರ್ಷೋದ್ಗಾರಗಳಿಗೆ ಪಾತ್ರರಾದರು. ಇದನ್ನು ಕಣ್ಣಾರೆ ಕಂಡ ಶ್ರೀಮತಿ ಆ್ಯನಿ ಬೆಸೆಂಟರು ಹೇಳುವಂತೆ, ''ಭಾರತಾಂಬೆಯ ಸುಪುತ್ರನೂ ದೂತನೂ ಆದ ಆತನ ಸಮ್ಮುಖದಲ್ಲಿ ಸೊಕ್ಕಿದ ಪಾಶ್ಚಾತ್ಯ ರಾಷ್ಟ್ರಗಳ ಮುಂದೆ ಭಾರತವು ಅಪಮಾನಕ್ಕೀಡಾಗಲು ಸಾಧ್ಯವಿರಲಿಲ್ಲ. ಆತನು ಭಾರತ ಮಾತೆಯ ಸಂದೇಶ ತಂದಿದ್ದನು, ಆಕೆಯ ಹೆಸರಿನಲ್ಲಿ ಮಾತನಾಡಿದನು. ಜನರು ಆಕೆಯ ಹಿರಿಮೆಯನ್ನು ಸ್ಮರಿಸುವಂತೆ ಮಾಡಿದನು.''

### ರಾಷ್ಟ್ರದ ಪುನರುಜ್ಜೀವನ

ತಮ್ಮ ದೃಢ ನಿರ್ಧಾರಕ್ಕನುಗುಣವಾಗಿ ವಿವೇಕಾನಂದರು ದೀನದಲಿತರ ಕಲ್ಯಾಣಕ್ಕಾಗಿ, ರಾಷ್ಟ್ರದ ಪುನರುಜ್ಜೀವನಕ್ಕಾಗಿ 'ರಾಮಕೃಷ್ಣ ಮಿಶನ್' ಎಂಬ ಲೋಕೋಪಕಾರಿ ಸಂಸ್ಥೆಯನ್ನು ಸ್ಥಾಪಿಸಿದರು. ಪರಿವ್ರಾಜಕರಾಗಿ ದೇಶದಾದ್ಯಂತವೂ ವಿದೇಶಗಳಲ್ಲೂ ಸುತ್ತಾಡುವಾಗ ಈ ಸಂಸ್ಥೆಗಾಗಿ ನಿಧಿ ಸಂಗ್ರಹಿಸಿದರು. ದೇಶದ ಎಲ್ಲ ಭಾಗಗಳಲ್ಲೂ, ವಿದೇಶಗಳಲ್ಲೂ ಸಹ, 'ರಾಮಕೃಷ್ಣ ಆಶ್ರಮ'ಗಳನ್ನು ಸಂಸ್ಥಾಪಿಸಿ, ಜನರಿಗೆ ಉತ್ತಮ ಶಿಕ್ಷಣ ನೀಡುವಂತೆ, ನೈತಿಕ ಜೀವನಕ್ಕೆ ನೆರವಾಗುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸುವಂತೆ ವ್ಯವಸ್ಥೆ ಮಾಡಿದರು. (ಅವು ಈಗೇನು ಮಾಡುತ್ತಿವೆಯೆಂಬುದನ್ನು ಪರಾಮರ್ಶೆ ಮಾಡಿಕೊಳ್ಳುವ ಅವಶ್ಯಕತೆ ಇದೆಯೆನ್ನಿ).

ಧಾರ್ಮಿಕ ಕಾರ್ಯಗಳಲ್ಲಷ್ಟೆ ಅಲ್ಲ, ವೈಜ್ಞಾನಿಕ ಶಿಕ್ಷಣದಲ್ಲೂ ಅವರಿಗೆ ಅಪಾರ ಆಸಕ್ತಿ ಇದ್ದಿತು. ಪುರಾತನ ಕಾಲದಲ್ಲೇ ಗಣಿತ, ಖಗೋಳ ವಿಜ್ಞಾನ ಕ್ಷೇತ್ರಗಳಲ್ಲಿ ಅತ್ಯಮೋಘ ಸಾಧನೆಗಳನ್ನು ಸಾಧಿಸಿದ್ದ ಭಾರತ ಆಧುನಿಕ ವೈಜ್ಞಾನಿಕ ಸಂಶೋಧನಾ ಕ್ಷೇತ್ರದಲ್ಲೂ ಹಿಂದೆ ಬೀಳಬಾರದೆಂಬುದು ಅವರ ಹಂಬಲವಾಗಿತ್ತು. ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ 'ಭಾರತೀಯ ವಿಜ್ಞಾನ ಸಂಸ್ಥೆ' ಇದಕ್ಕೊಂದು ಜ್ವಲಂತ ನಿದರ್ಶನ. ಸ್ವಾಮಿ ವಿವೇಕಾನಂದರ ಸಲಹೆಯಂತೆಯೇ ಜೇಮ್‌ಶೇಟ್‌ಜಿ ಟಾಟಾರವರು ಈ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರೆಂದು ಅವರಿಬ್ಬರ ನಡುವಿನ ಪತ್ರವ್ಯವಹಾರದಿಂದ ತಿಳಿದುಬರುತ್ತದೆ.

### ಶ್ರೇಷ್ಠ ವಾಗ್ಮಿಯ ಹಾಸ್ಯ ಪ್ರಜ್ಞೆ

ಭಾರತದ ಬಗೆಗೆ ಯಾರಾದರೂ ಕ್ಷುಲ್ಲಕವಾಗಿ ಮಾತನಾಡಿದರೆ ಅವರಿಗೆ ಭಾರಿ ಕೋಪ ಬರುತ್ತಿತ್ತು. ಅಮೆರಿಕ ಯೂರೋಪು ಪ್ರವಾಸಗಳಲ್ಲಿ ಅವರು ಇಂಥ ಪರಿಸ್ಥಿತಿಗಳನ್ನು ಅನೇಕ ಬಾರಿ ಎದುರಿಸಬೇಕಾಯಿತು. ಆ ಕಾಲದಲ್ಲಿ ಪಾಶ್ಚಾತ್ಯ ಜನರಲ್ಲಿ ಭಾರತದ ಬಗೆಗೆ ಅದೊಂದು ಮಾಂತ್ರಿಕರ, ಹಾವಾಡಿಗರ ದೇಶ, ಮೂಢನಂಬಿಕೆಗಳಲ್ಲಿ ಮುಳುಗಿದ ದೇಶ ಎಂದೆಲ್ಲ ಚಿತ್ರವಿಚಿತ್ರ ಕಲ್ಪನೆಗಳಿರುತ್ತಿದ್ದವು.

ವಿವೇಕಾನಂದರು ಇಂತಹ ಪೂರ್ವಗ್ರಹಪೀಡಿತ ಪ್ರಶ್ನೆಗಳಿಗೆ ಕೆಲವೊಮ್ಮೆ ಗಹನವಾಗಿ, ಕೆಲವೊಮ್ಮೆ ಹಾಸ್ಯವಾಗಿ, ಮತ್ತೆ ಕೆಲವೊಮ್ಮೆ ಕೋಪದಿಂದ ಉತ್ತರಿಸುತ್ತಿದ್ದರು. ಉಪನ್ಯಾಸಗಳ ನಂತರ ಅವರು ಯಾವತ್ತೂ ಸಭಿಕರಿಂದ ಪ್ರಶ್ನೆಗಳನ್ನು ಆಹ್ವಾನಿಸುತ್ತಿದ್ದರು. ಒಮ್ಮೆ ಒಬ್ಬ ಸಭಾಸದರು ಕೇಳಿದರು : ''ನೀವು ದೇವರನ್ನು ನೋಡಿದ್ದೀರಾ?'' ಅವರ ಉತ್ತರ : ''ನನ್ನನ್ನು ನೋಡಿದರೆ ನಿಮಗೆ ಹಾಗೆನ್ನಿಸುತ್ತದೆಯೆ?''

ಭಾರತದಲ್ಲಿ ಫಲಜ್ಯೋತಿಷ್ಯ, ಭವಿಷ್ಯ ನುಡಿಯುವುದು, ಇವುಗಳದೇ ಅತಿರೇಕವೆಂದು ಪಾಶ್ಚಿಮಾತ್ಯರಲ್ಲಿ ಸಾಮಾನ್ಯ ಭಾವನೆ ಇದ್ದಿತು. ''ಭವಿಷ್ಯ ನುಡಿಯುವುದರಲ್ಲಿ ನಿಮಗೆ ನಂಬಿಕೆ ಇದೆಯೆ?'' ಎಂದು ಒಬ್ಬರು ಕೇಳಿದರು. ಅದಕ್ಕೆ ವಿವೇಕಾನಂದರ ಉತ್ತರ: ''ನಾನು ಚಿಕ್ಕವನಾಗಿದ್ದಾಗ ಒಬ್ಬ ಸಾಧು ನನಗೆ 'ಮಗು, ನೀನು ಮುಂದೆ ಮಹಾಪುರುಷನಾಗುವೆ' ಎಂದು ಭವಿಷ್ಯ ನುಡಿದಿದ್ದರು. ನೋಡಿ, ನಾನು ಏನಾಗಿದ್ದೇನೆ!'' ಇನ್ನೊಬ್ಬರು ಕೇಳಿದರು: ''ನಿಮಗೆ ಪೂರ್ವಜನ್ಮದ ನೆನಪಿದೆಯೆ?'' ಅದಕ್ಕೆ ಉತ್ತರ: ''ಹೌದು, ನಾನು ಚಿಕ್ಕ ಹುಡುಗನಾಗಿದ್ದಾಗಿನಿಂದಲೂ!''

ಅವರು ಪ್ಯಾರಿಸ್ಸಿಗೆ ಹೋಗಿದ್ದಾಗ ಅವರನ್ನು ಕಾಣಬಂದವರೊಬ್ಬರು ಕೇಳಿದರಂತೆ: ''ಭಾರತದಲ್ಲಿ ಮಕ್ಕಳನ್ನು ಮೊಸಳೆಯ ಬಾಯಿಗೆ ಎಸೆಯುತ್ತಾರಂತೆ, ನಿಜವೇ?'' ವಿವೇಕಾನಂದರ ಉತ್ತರ: ''ಹೌದು, ನನ್ನನ್ನೂ ಎಸೆದಿದ್ದರು. ನನ್ನ ದಪ್ಪ ದೇಹವನ್ನು ನುಂಗಲು ಮೊಸಳೆಗೆ ಆಗಲಿಲ್ಲ!'' ಇನ್ನೊಂದು ಕಡೆ ಅವರಿಗೆ ಹೀಗೆಯೇ ಕೇಳಲಾಯಿತು: ''ಭಾರತದಲ್ಲಿ ಹೆಣ್ಣು ಮಕ್ಕಳನ್ನೆಲ್ಲ ಮೊಸಳೆಯ ಬಾಯಿಗೆ ಎಸೆಯುತ್ತಾರಂತೆ?'' ವಿವೇಕಾನಂದರ ಉತ್ತರ: ''ಹೌದು, ಅದಕ್ಕೇ ಭಾರತದಲ್ಲಿ ಗಂಡಸರೇ ಮಕ್ಕಳಿಗೆ ಜನ್ಮ ನೀಡುವುದು!'' ಹೀಗೆ ವಿವೇಕಾನಂದರು ನವಿರು ಹಾಸ್ಯದಿಂದ, ಕಟು ವ್ಯಂಗ್ಯದಿಂದ ಕ್ಷುಲ್ಲಕ ಪ್ರಶ್ನೆಗಳನ್ನು ಕೇಳುತ್ತಿದ್ದವರ ಮುಖಭಂಗ ಮಾಡುತ್ತಿದ್ದರು, ಬಾಯಿ ಮುಚ್ಚಿಸುತ್ತಿದ್ದರು.

### ಮನುಷ್ಯನಲ್ಲಿ ಭಗವದ್ದರ್ಶನ

ತರುಣರಾಗಿದ್ದಾಗ ವಿವೇಕಾನಂದರು ನಾಸ್ತಿಕತೆ, ಅಜ್ಞೇಯತಾವಾದಗಳ ಪ್ರಭಾವಕ್ಕೊಳಗಾಗಿದ್ದರೂ ಅನಂತರ, ಅದರಲ್ಲೂ ವಿಶೇಷವಾಗಿ ಶ್ರೀ ರಾಮಕೃಷ್ಣ ಪರಮಹಂಸರನ್ನು ಕಂಡನಂತರ, ಅವರಲ್ಲಿ ದೇವರ ಬಗೆಗೆ ನಂಬಿಕೆ ಮೂಡಿದ್ದಿತು. ಆದರೆ ಅವರು ತಮ್ಮ ಗುರು ಶ್ರೀ ರಾಮಕೃಷ್ಣ ಪರಮಹಂಸರಂತೆಯೇ ಮನುಷ್ಯನಲ್ಲಿ ದೇವರನ್ನು ಕಂಡರು. ಮಾನವರಲ್ಲಿ ದೇವರನ್ನು ಕಾಣುವುದೇ ಭಗವದ್ದರ್ಶನ ಎಂದವರು ಹೇಳುತ್ತಿದ್ದರು. ''ಪ್ರತಿಯೊಬ್ಬನಲ್ಲೂ ದೇವರಿದ್ದಾನೆ. ಅದನ್ನು ಬಿಟ್ಟರೆ ಬೇರೆ ದೇವರಿಲ್ಲ. ಇದೇ ನನ್ನ ತಪಸ್ಸಿನ ನಂತರ ನಾನರಿತ ಅತ್ಯುನ್ನತ ಸತ್ಯ'' ಎಂದವರು ಘೋಷಿಸಿದರು. ದುಷ್ಟರು ನನ್ನ ದೇವರು, ದರಿದ್ರರು ನನ್ನ ದೇವರು, ಎಲ್ಲ ಜನಾಂಗ ವರ್ಗಗಳ ಕಡುಬಡವರು ನನ್ನ ದೇವರು. ಅವರೇ ನನ್ನ ಆರಾಧನೆಯ ವಸ್ತು ಎಂದು ಯಾವತ್ತೂ ಹೇಳುತ್ತಿದ್ದರು.

1899ರಲ್ಲಿ ಮಿಸ್ ಮೇರಿ ಹೇಲ್‌ರಿಗೆ ಬರೆದ ಪತ್ರವೊಂದರಲ್ಲಿ ವಿವೇಕಾನಂದರು ಭಾರತದಲ್ಲಿ ಆಗ ಬ್ರಿಟಿಷರು ನಡೆಸುತ್ತಿದ್ದ ದೌರ್ಜನ್ಯ ದಬ್ಬಾಳಿಕೆಗಳನ್ನು ಖಂಡಿಸಿ ಕೊನೆಯಲ್ಲಿ ಬರೆದರು: ''....ಮೇರಿ, ನಮ್ಮಲ್ಲಿ ಪರಿಸ್ಥಿತಿ ತುಂಬ ನಿರಾಶಾದಾಯಕವಾಗಿದೆ. ಇದನ್ನೆಲ್ಲ ನೋಡಿದರೆ, ನಮಗೆಲ್ಲ ತಂದೆಯೆನಿಸುವ ಒಬ್ಬ ದೇವರು, ದುಷ್ಟರನ್ನು ಶಿಕ್ಷಿಸಲು, ದುರ್ಬಲರನ್ನು ರಕ್ಷಿಸಲು ಅಳುಕದಂತಹ ಒಬ್ಬ ದೇವರು, ಹಣ ಸಂಪತ್ತುಗಳ ಆಮಿಷಕ್ಕೆ, ಲಂಚಕ್ಕೆ, ಒಳಗಾಗದಂತಹ ಒಬ್ಬ ದೇವರು ಇದ್ದಾನೆಯೇ ಎಂದು ಸಂಶಯ ಬರುತ್ತದೆ. ಅಂತಹ ದೇವರು ಇದ್ದಾನೆಯೆ? ಕಾಲವೇ ತಿಳಿಸಬೇಕು.''

ವಿವೇಕಾನಂದರು ತಮ್ಮ ದೈವಕಲ್ಪನೆಯನ್ನು ಮಾನವ ಹಿತದೊಂದಿಗೆ, ದೇಶದ ಜನರ ಅಭ್ಯುದಯ ದೊಂದಿಗೆ ನಿಕಟವಾಗಿ ಸಂಬಂಧಿಸಿದ್ದರು ಎಂಬುದು ಮೇಲಿನ ಪತ್ರದಿಂದ ತಿಳಿದುಬರುತ್ತದೆ. 'ಇಲ್ಲಿ ನನಗೆ ರೊಟ್ಟಿ ಕೊಡದೆ ಸ್ವರ್ಗದಲ್ಲಿ ಸುಖ ಕೊಡುವಂಥ ದೇವರಲ್ಲಿ ನನಗೆ ನಂಬಿಕೆ ಇಲ್ಲ' ಎಂದವರು ಎಷ್ಟೋ ಬಾರಿ ಹೇಳಿರುವುದುಂಟು.

### ಹುಟ್ಟಿನಿಂದಲ್ಲ ಜಾತಿ

ಎಲ್ಲರಲ್ಲೂ ದೇವರನ್ನು ಕಂಡದ್ದರಿಂದಲೇ ಅವರು ಮನುಷ್ಯ ಮನುಷ್ಯರ ನಡುವೆ ಜಾತಿ, ದೇಶ, ಧರ್ಮ, ಸಂಪತ್ತುಗಳ ಆಧಾರದ ಮೇಲೆ ಭೇದ ಕಲ್ಪಿಸುವುದನ್ನು ವಿರೋಧಿಸಿದರು. ಯೋಗ್ಯತೆ, ವೃತ್ತಿ ಗುಣ, ಮನೋಭಾವಗಳೇ ಜಾತಿ ನಿರ್ಧಾರಕವೆಂದು ಘೋಷಿಸಿದರು.

ಅವರು ಚಾತುರ್ವರ್ಣ್ಯದ ಸಮಸ್ಯೆಯನ್ನು ಹೊಸಹೊಸ ದೃಷ್ಟಿಕೋನಗಳಿಂದ ಪರಿಶೀಲಿಸಿದರು. ಧರ್ಮ ಸಾಕ್ಷಾತ್ಕಾರದಲ್ಲಿ ತೊಡಗಿದವನು ಹುಟ್ಟಿನಲ್ಲಿ ಮ್ಲೇಚ್ಛನೇ ಆಗಿದ್ದರೂ ಅವನು ಋಷಿಯೇ ಸರಿ ಎಂದವರು ಭಾವಿಸಿದ್ದರು. ಇದಕ್ಕೆ ಸಮರ್ಥನೆಯಾಗಿ, ಅನೈತಿಕ ಸಂಬಂಧದಿಂದ ಹುಟ್ಟಿದ ವಸಿಷ್ಠರೂ, ಬೆಸ್ತರ ಮಗ ವ್ಯಾಸರೂ, ದಾಸೀಪುತ್ರ ಮತ್ತು ತಂದೆ ಯಾರೆಂದು ತಿಳಿಯದ ನಾರದರೂ ಋಷಿ ಪದವಿಗೇರಿದ ನೀಚಕುಲದವರಲ್ಲವೇ, ಎಂದು ಉದಾಹರಿಸುತ್ತಿದ್ದರು.

ಅಸ್ಪೃಶ್ಯತೆ ಒಂದು ಘೋರ ಪಾಪ. ಅದು ಮೊದಲು ತೊಲಗಬೇಕು. ಎಲ್ಲ ಬಗೆಯ ಹಿಂದುಳಿದ ಬುದ್ಧಿ ಕೊನೆಗೊಳ್ಳಬೇಕು. ಸ್ತ್ರೀಯರೂ ಶೂದ್ರರೂ ವೇದಗಳನ್ನು ಓದಲು ಬಹಿಷ್ಕೃತರಲ್ಲ. ಅವರಿಗೂ ಜ್ಞಾನ ಭಂಡಾರದ ಬಾಗಿಲನ್ನು ತೆರೆಯಬೇಕು. ಅರ್ಥವಿಲ್ಲದ ಕಂದಾ ಚಾರಗಳಿಗೆ ಕಟ್ಟುಬೀಳುವುದು, ಬಾಹ್ಯಾಚರಣೆಯನ್ನೇ ಧರ್ಮವೆಂದು ನಂಬುವುದು ಮೂರ್ಖತನ, ಎಂದವರು ಬೋಧಿಸಿದರು.

### ವಿವೇಕಾನಂದ ವೇದಾಂತ

ಹೀಗವರು ಹಿಂದೂ ಧರ್ಮದ ಮೂಲ ವೇದೋಪನಿಷತ್ತುಗಳಲ್ಲಿಲ್ಲದ, ಆದರೆ ಪಟ್ಟಭದ್ರ ಹಿತಾಸಕ್ತಿಗಳು ಆಚರಣೆಯಲ್ಲಿ ತಂದ, ಅನ್ಯಾಯ ಪಕ್ಷಪಾತಗಳನ್ನು ತೀವ್ರವಾಗಿ ಟೀಕಿಸಿದರು. ಮಡಿವಂತ ಹಿಂದೂ ಸಂಪ್ರದಾಯ ಹಾಗೂ ಮತಕ್ರಿಯಾ ವಿಧಿಗಳನ್ನೂ ವಿರೋಧಿಸಿದರು. ಅದೇ ಹೊತ್ತಿನಲ್ಲಿ ಹಿಂದೂ ಧರ್ಮದ ಶ್ರೇಷ್ಠ ಆಧ್ಯಾತ್ಮಿಕ ಭಾವನೆಗಳನ್ನು ಆಧುನಿಕ ಆವಶ್ಯಕತೆಗಳಿಗೆ ಅನುಗುಣವಾಗಿ ಪುನರ್‌ಮೌಲ್ಯೀಕರಿಸಿ ಆಚರಣೆಗೆ ತರುವ ಅಗತ್ಯವನ್ನು ಒತ್ತಿ ತಿಳಿಸಿದರು. ಇಂಗ್ಲಿಷ್, ಸಂಸ್ಕೃತ ಹಾಗೂ ಯೋಗಗಳಲ್ಲಿ ಅಸಾಮಾನ್ಯ ಪಾಂಡಿತ್ಯ ಗಳಿಸಿ ಅಪಾರ ಜ್ಞಾನಸಂಪನ್ನರಾಗಿದ್ದ ಅವರು ಜನಮನದಲ್ಲಿ ವಿವೇಕ ಪ್ರಜ್ಞೆಯನ್ನು ಪ್ರೇರಿಸಿ ಸಮಾಜ ಜೀವನದಲ್ಲಿ ನವಚೇತನ ತುಂಬುವುದರಲ್ಲಿ ಯಶಸ್ವಿಯಾದರು.

ಬದುಕಿದ್ದ ಕೇವಲ 39 ವರ್ಷಗಳಲ್ಲೇ (ಜನನ 12.1.1863, ಮರಣ 4.7.1902) ದೇಶವಿದೇಶಗಳಲ್ಲಿ ಅವಿಶ್ರಾಂತವಾಗಿ ಸಂಚರಿಸಿ ಜ್ಞಾನಜ್ಯೋತಿ ಬೆಳಗಿದ ಈ ಮಹಾಪುರುಷನಲ್ಲಿ ಅಸಾಧಾರಣ ಬುದ್ಧಿಶಕ್ತಿ, ಪ್ರಕಾಂಡ ಪಾಂಡಿತ್ಯ, ಪ್ರಾಮಾಣಿಕ ದೇಶಪ್ರೇಮ, ತೀಕ್ಷ್ಣ ಹಾಸ್ಯಪ್ರಜ್ಞೆ, ಇವೆಲ್ಲ ಮೇಳೈಸಿದ್ದವು. ಅವರ ಮಾತಿನಲ್ಲಿ ವಿನಯವಿತ್ತು. ಯಾವುದೇ ವಿಚಾರವನ್ನೂ ಅಧಿಕಾರ ವಾಣಿಯಿಂದ ಹೇಳಬಲ್ಲವರಾಗಿದ್ದರು. ಜನರನ್ನು ಕಂಡರಿಯದ ಹೊಸ ಲೋಕಕ್ಕೆ ಕರೆದೊಯ್ಯುತ್ತಿದ್ದರು. ಅವರಿಗೆ ನೈತಿಕ ಆದರ್ಶಗಳನ್ನು ಹಾಕಿಕೊಡುತ್ತಿದ್ದರು.

ಇಂಥಾ ಮಹಾನುಭಾವ ತೀರಿಹೋಗಿ ಹತ್ತಿರಹತ್ತಿರ ಒಂದು ಶತಮಾನವಾಗುತ್ತಿದೆ. ಅವರ ಮತ್ತು ಅವರ ನಂತರ ಬಂದ ಮಹಾನ್ ಚಿಂತಕರ ಅವಿರತ ಯತ್ನಗಳ ಫಲವಾಗಿ ದೇಶ ಮತ್ತು ಸಮಾಜ ಜೀವನದಲ್ಲಿ ಅನೇಕ ಮಹತ್ತರ ಬದಲಾವಣೆಗಳಾಗಿವೆ. ಅವರು ಬಹುವಾಗಿ ಬಯಸಿದ್ದ, ಹಂಬಲಿಸಿದ್ದ ದೇಶಸ್ವಾತಂತ್ರ್ಯ ಲಭಿಸಿ 50ಕ್ಕೂ ಹೆಚ್ಚು ವರ್ಷಗಳಾಗಿವೆ. ಅನೇಕ ಕ್ಷೇತ್ರಗಳಲ್ಲಿ ಜನರ ನಡುವಣ ಅಡ್ಡಗೋಡೆಗಳು ಕುಸಿದುಬಿದ್ದಿವೆ.

ಆದರೂ, ಕಂದಾಚಾರದ ಸಂಪ್ರದಾಯಗಳಿಗೇ ಅಪ್ಪಿಕೊಂಡು ಕುರುಡರಾಗಿ ಹೊಸ ರೀತಿನೀತಿಗಳನ್ನು ವಿರೋಧಿಸುತ್ತಿರುವ ಶಕ್ತಿಗಳು, ಜಾತಿಮತ ಹಾಗೂ ಧರ್ಮದ ಹೆಸರಿನಲ್ಲಿ ಜನರ ನಡುವೆ ವೈಷಮ್ಯದ ಬೀಜ ಬಿತ್ತಿ ತಮ್ಮ ಸ್ವಾರ್ಥಸಾಧನೆ ಮಾಡಿಕೊಳ್ಳುತ್ತಿರುವ ಶಕ್ತಿಗಳು, ನಮ್ಮ ಆರ್ಷೇಯ ಸಂಪತ್ತಾದ ವೇದ ಉಪನಿಷತ್ತುಗಳ ಉದಾತ್ತ ಧ್ಯೇಯಗಳನ್ನೆಲ್ಲ ಗಾಳಿಗೆ ತೂರಿ, ಅವುಗಳಿಗೆ ತಪ್ಪು ವ್ಯಾಖ್ಯಾನ ನೀಡಿ, ಅವುಗಳಲ್ಲಿಲ್ಲದ ಅಂಶಗಳನ್ನು ಸೇರಿಸಿ, ಜನರನ್ನು ಮರುಳುಗೊಳಿಸುತ್ತಿರುವ ಶಕ್ತಿಗಳು ವಿವೇಕಾನಂದರಂಥ ಮಹಾಮಾನವತಾವಾದಿಗಳ ಹೆಸರುಗಳನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತ ದೇಶದ ಹಾಗೂ ಸಮಾಜದ ಪ್ರಗತಿಪಥದಲ್ಲಿ ಅಡ್ಡಗಾಲು ಹಾಕುತ್ತಿರುವ ಶಕ್ತಿಗಳು ಇನ್ನೂ ಇವೆ, ಬಲಗೊಳ್ಳುತ್ತಿವೆ.

ಇಂಥ ಪರಿಸ್ಥಿತಿಯಲ್ಲಿ ವಿವೇಕಾನಂದ ವಾಣಿ, ವಿವೇಕಾನಂದ ವೇದಾಂತ ಹಿಂದೆಂದಿಗಿಂತ ಹೆಚ್ಚು ಪ್ರಸ್ತುತವಾಗಿದೆ.

**ಕೆ. ಎಲ್. ಗೋಪಾಲಕೃಷ್ಣ ರಾವ್**
೨೬೧, ೨ನೇ ಕ್ರಾಸ್, ಸಿ.ಟಿ. ಬೆಡ್, ತ್ಯಾಗರಾಜನಗರ,
ಬೆಂಗಳೂರು - ೫೬೦ ೦೨೮.

**ಗ್ರಂಥ ಋಣ:**

1. ವಿವೇಕಾನಂದರ ಸಮಗ್ರ ಜೀವನ ಚರಿತ್ರೆ (ಮೂರು ಸಂಪುಟಗಳಲ್ಲಿ). ಶ್ರೀರಾಮಕೃಷ್ಣ ಆಶ್ರಮ, ಮೈಸೂರು, ಬೆಂಗಳೂರು.
2. *Proletariat win equal rights* - Vivekananda, Advaith Ashrama, Mayavati.
3. *Caste, Culture and Socialism* - Vivekananda. Ref: Advaita Ashrama, Mayavati.
4. *Socio-political views of Vivekananda*, - Binoy K. Roy.PPH, New Delhi.

## ವೈಫಲ್ಯ



*ಕಣ್ಣಿಗೆ ಕಾಣದು*
*ಅದರ ಹಿಂದೆ ಇರುವ*
*ತನ್ನದೆ ಬೆನ್ನು*
*ಹೇಗೆ ತಾನೆ ಕಾಣುವುದು*
*ಬೇರೆಯವರ ನೊಂದ*
*ಹೃದಯದ ಹುಣ್ಣು*

ಜರಗನಹಳ್ಳಿ ಶಿವಶಂಕರ್

# ಪಯಣಿಗ

ಮೂಲ : ಲೂ ಶೂನ್ ಅನುವಾದ : ಆರ್. ವಿ. ಭಂಡಾರಿ

ಸಮಯ : ಸಾಯಂಕಾಲ ಸ್ಥಳ : ಎಲ್ಲೋ ಒಂದು

ಪಾತ್ರಗಳು : ಮುದುಕ : ಸುಮಾರು 70 ವರ್ಷ. ಹಣ್ಣು ಗಡ್ಡ, ತಲೆಗೂದಲು, ಕಪ್ಪು ದೊಗಳೆ ಅಂಗಿ

ಹುಡುಗಿ : ಸುಮಾರು 10 ವರ್ಷ, ಕೆಂಪುಗೂದಲು. ಕಪ್ಪುಕಣ್ಣು, ಕಪ್ಪು ಚೌಕುಳಿಗಳಿರುವ ಬಿಳಿ ದೊಗಳೆ ಲಂಗ.

ಪಯಣಿಗ : ಸುಮಾರು 30-40ರ ಮಧ್ಯ. ದಣದಿದ್ದಾನೆ. ಸಿಡುಕಿನ ಸ್ವಭಾವ. ಕನಲಿದ ನೋಟ. ಕಪ್ಪು ಮೀಸೆ. ಒರಟಾದ ತಲೆಗೂದಲು. ಹರಿದ ಕಪ್ಪು ಜಾಕೆಟ್ ಮತ್ತು ಚಡ್ಡಿ, ಹರಕು ಚಪ್ಪಲಿ, ಬಗಲಲ್ಲೊಂದು ಗೋಣಚೀಲ. ಅವನಷ್ಟೇ ಎತ್ತರದ ಬಿದಿರುಕೋಲಿನ ಮೇಲೆ ವಾಲಿದ್ದಾನೆ.

ಪೂರ್ವಕ್ಕೆ ಕೆಲವು ಮರಗಳು ಮತ್ತು ಹಾಳುಬಿದ್ದ ಕಟ್ಟಡಗಳು. ಪಶ್ಚಿಮಕ್ಕೆ ಹಾಳು ಮಸಣ. ಮಧ್ಯೆ ಒಂದು ಕಚ್ಚಾ ಹಾದಿ. ಎದುರು ಚಿಕ್ಕ ಗುಡಿಸಲು. ಗುಡಿಸಲ ಬಾಗಿಲ ಬದಿಯಲ್ಲಿ ಒಂದು ಮರದ ದಿಮ್ಮಿ. ಆ ದಿಮ್ಮಿಯ ಮೇಲೆ ಮುದುಕ ಕುಳಿತಿದ್ದಾನೆ. ಅವನಿಗೆ ಏಳಲು ಹುಡುಗಿ ಸಹಾಯ ಮಾಡುತ್ತಾಳೆ.

**ಮುದುಕ** : ಏನು ಮಗು, ಹಾಂಗೆ ನಿಂತುಬಿಟ್ಟೆ ?

**ಹುಡುಗಿ** : (ಪೂರ್ವದಿಕ್ಕಿಗೆ ನೋಡುತ್ತ) ಯಾರೋ ಬರುತ್ತಿರು ಹಾಂಗಿದೆ ನೋಡು !

**ಮುದುಕ** : ಆದಿರಲಿ ಬಿಡು. ನನ್ನ ಕೈ ಹಿಡಿದು ಎಬ್ಬಿಸು. ಹೊತ್ತು ಕಂತಂತಿದೆ.

**ಹುಡುಗಿ** : ನಾ..... ನಾ..... ಒಂದ್ಸಲ ನೋಡ್ತೇನೆ.

**ಮುದುಕ** : ಎಂಥ ಮಗುವಪ್ಪ ನೀನು ! ಈ ಆಕಾಶ, ಭೂಮಿ, ಗುಡ್ಡ , ಬೆಟ್ಟ ಎಲ್ಲಾ ದಿನಾ ಕಾಣೋದೇ. ಮತ್ತೆ ನೋಡುವಂಥಾದ್ದೇನಿದೆ ಅಲ್ಲಿ ? ಆದರೂ ಯಾರು ಬರ್ತಾರೆ ಅಂತ ನೋಡಬೇಕಪ್ಪ ನಿಂಗೆ. ಹೊತ್ತು ಕಂತಿದ್ಮೇಲೆ ಯಾರೂ ಬರೂದಿಲ್ಲ. ಬೇರೆ ಕೆಲ್ಸಾ ಇಲ್ವಾ ನಿಂಗೆ ? ಇನ್ನು ನಾವು ಒಳಗೆ ಹೋಗೂದ ಒಳ್ಳೇದು.

**ಹುಡುಗಿ** : ಅರೆ ! ಇಲ್ಲೇ ಬಂದ. ಹಾ ! ನೋಡಿದ್ಯಾ ? ಬೇಡ್ವಂವ.

**ಮುದುಕ** : ಬೇಡವನ್ವ ? ಇರಲಿಕ್ಕಿಲ್ಲ ಬಿಡು.

(ಪೂರ್ವದಿಕ್ಕಿನ ಪೊದೆಗಳ ಈಚೆ ಕುಂಟುತ್ತ ಬರುತ್ತಿರುವ ಪಯಣಿಗ. ಪಯಣಿಗ ಒಂದು ಚಣ ಹಿಂದೆ ಮುಂದೆ ನೋಡಿದರೂ ಸಾವಕಾಶ ಮುದುಕನ ಬಳಿ ಬರುತ್ತಾನೆ.)

**ಪಯಣಿಗ** : ನಮಸ್ಕಾರ ಅಜ್ಜ.

**ಮುದುಕ** : ಒಳ್ಳೆಯದಾಗಲಿ, ಒಳ್ಳೆಯದಾಗಲಿ.

**ಪಯಣಿಗ** : ಕುಡಿಯಲು ಹನಿ ನೀರು ಕೊಡವಿರಾ ? ನಡೆದೂ ನಡೆದೂ ಬಾಯೆಲ್ಲ ಒಣಗಿಹೋಗಿದೆ. ಎಲ್ಲೆಲ್ಲೂ ಒಂದು ನೀರಿನ ಝರಿ, ಒಂದು ಬಾವಿ ಕಾಣಲಿಲ್ಲ.

**ಮುದುಕ** : ಓಹೋ ! ಬನ್ನಿ. ಕುಂತಕಳಿ, (ಹುಡುಗಿಗೆ) ಮಗೂ ಒಂದ ಚಂಬು ನೀರ ತಕಂಡ್ಬಾ. ಚಂಬು ಚೊಕ್ಕ ಇರಲಿ ಹಾಂ ?

(ಹುಡುಗಿ ಒಳಗೆ ಹೋಗುವಳು)

**ಮುದುಕ** : ಬನ್ನಿ, ಕುಂತಕಳಿ. ನಿಂತೆ ಇದ್ದೀರಿ. ಏನು ನಿಮ್ಮ ಹೆಸ್ರು ?

**ಪಯಣಿಗ** : ನನ್ನ ಹೆಸರಾ ? ಅದು ನನಗೆ ಗೊತ್ತಿಲ್ಲ. ನನಗೆ ನೆನಪಿದ್ದ ಹಾಗೆ, ನಾನು ತಿಳುವಳಿಕೆಗೆ ಬಂದ್ಮೇಲೆ, ನನ್ನ ನಿಜವಾದ ಹೆಸರು ಏನೆಂದೇ ಗೊತ್ತಿಲ್ಲ. ನಾನು ದಾರಿ ನಡೆಯುತ್ತಿದ್ದಂತೆ ಜನ ಅವರವರಿಗೆ ಖುಶಿ ಕಂಡ ಹಾಗೆ ಒಂದಲ್ಲ ಒಂದು ಹೆಸರಿನಿಂದ ಕರೆಯುತ್ತಾರೆ. ಆದರೆ ನಾನು ಅದನ್ನೆಲ್ಲಾ ನೆನಪಿಡಲಾರೆ. ಮತ್ತೇನು ಹೇಳಲಿ, ನನ್ನನ್ನು ಯಾರೂ ಒಂದು ಸಲ ಕರೆದ ಹೆಸರಿನಿಂದ ಇನ್ನೊಂದು ಸಲ ಕರೆದಿಲ್ಲ.

**ಮುದುಕ** : ಓಹೊ, ಹಾಂಗೇನು ? ಇರಲಿ, ಎಲ್ಲಿಂದ ಬರೋಣವಾಯ್ತೊ?

**ಪಯಣಿಗ**: (ಹಿಂದೆ ಮುಂದೆ ನೋಡುತ್ತ) ಗೊತ್ತಿಲ್ಲ. ನನಗೆ ಬುದ್ಧಿ ಬಂದಾಗಿನಿಂದ ಹೀಗೇ ನಡೆಯುತ್ತಾನೇ ಇದ್ದೇನೆ.

**ಮುದುಕ** : ಓ ಹೊ ಹೊ ಹೊ ಹಾಂಗಾ ? ಹೊಂಟಿದ್ದು ಎಲ್ಲಿಗೆಂದು ಕೇಳಬ್ದೌದೆ ?

**ಪಯಣಿಗ** : ಕೇಳಿದರೇನೂ ತಪ್ಪಿಲ್ಲ. ಆದರೆ, ಖರೆ ಸಂಗತಿ ಅಂದರೆ ನನಗೆ ಗೊತ್ತಿಲ್ಲ. ನನ್ನ ನೆನಪಿನಲ್ಲಿರುವಂತೆ ನಾನು ಇದೇ ರೀತಿ ಮುಂದಿನ ಯಾವುದೋ ಠಾಣಕ್ಕೆ, ನನ್ನ ದಾರಿಯಲ್ಲಿ ನಾನು, ನಡೆಯುತ್ತಲೇ ಇದ್ದೇನೆ. ಒಟ್ಟೂ ನನ್ನ ನೆನಪಿಗೆ ಬರೂದೆಂದರೆ ನಾನು ಬಹುದೂರ ನಡೆದು ನಡೆದು ಈಗ ಇಲ್ಲಿಗೆ ತಲ್ಪಿದ್ದೇನೆ. ನಾನು (ಪಶ್ಚಿಮಕ್ಕೆ ತೋರಿಸಿ) ಹೀಗೇ ಮುಂದರಿಯುತ್ತೇನೆ.

(ಹುಡುಗಿ ಕಾಳಜಿಯಿಂದ ನೀರು ತಂದುಕೊಡುತ್ತಾಳೆ.)

**ಪಯಣಿಗ** : (ತೆಗೆದುಕೊಂಡು) ಒಳ್ಳೇದಾಗಲಿ ನಿನಗೆ ಮಗು. (ಎರಡೇ ಗುಟುಕಿಗೆ ಕುಡಿದು ಮುಗಿಸಿ ಚಂಬನ್ನು ಹಿಂದಕ್ಕೆ ಕೊಡುತ್ತ) ಒಳ್ಳೇದಾಗಲಿ ನಿನಗೆ. ಇಂಥ ಕರುಣೆ ಉಳ್ಳವರು ಸಿಕ್ಕುವುದೇ ಅಪರೂಪ. ನಿನ್ನನ್ನು ಎಷ್ಟು ನೆನೆಸಿದರೂ ಕಡಿಮೆಯೆ.

**ಮುದುಕ** : ಇರ್ಲಿ ಬಿಡಿ, ಅದೇನು ಮಹಾ....

**ಪಯಣಿಗ** : ಹಾಗಲ್ಲ, ಹಾಗಲ್ಲ, ಅದೇನು ದೊಡ್ಡ ಮಹಾ ಅಲ್ಲ ಅಂತ ಅಂದರೂ ನನಗೆ ಈಗ ಆರಾಮ ಆಯ್ತು ! ನಾನು ಇನ್ನು ಹೊರಡತೇನೆ. ನೀವು ಇಲ್ಲಿ ಬಹಳ ಕಾಲದಿಂದ ಇದ್ದಿರಬೇಕು. ಮುಂದಿನ ಠಾಣ ಹೇಗೆ ಅಜ್ಜ ?

**ಮುದುಕ** : ಮುಂದಿಂದು ? ಮುಂದಿಂದು ಸ್ಮಶಾನ.

**ಪಯಣಿಗ** : (ತಡೆ ತಡೆದು) ಸ್ಮಶಾನ ?

**ಹುಡುಗಿ** : ಅಲ್ಲ, ಅಲ್ಲ ! ಅಲ್ಲಿ ರಾಶಿ ರಾಶಿ ಕುಸುಮಮಾಲೆ ಹೂಂಗೂ, ಕಾಡುಮಲ್ಲಿಗೆ ಹೂಂಗೂ ಅವೆ. ನಾನು ಪದೇ ಪದೇ ಅಲ್ಲಿಗೆ ಆಡಲು, ಹೂಂಗು ನೋಡಲು ಹೋಗ್ತೇನೆ.

**ಪಯಣಿಗ** : (ಪಶ್ಚಿಮದ ಕಡೆ ನೋಡಿ ಕಿರಿದಾಗಿ ನಗುತ್ತಾನೆ) ಹೌದೌದು ಅಲ್ಲಿ ರಾಶಿ ರಾಶಿ ಕುಸುಮಮಾಲೆ, ಕಾಡು ಮಲ್ಲಿಗೆ ಹೂಗಳಿವೆ. ನಾನೇ ಎಷ್ಟೋ ಸಲ ಹೋಗಿದ್ದೇನೆ. ನೋಡಿ ಖುಶಿಪಟ್ಟಿದ್ದಿದೆ. ಆದರೆ ಅವು ಸ್ಮಶಾನಗಳು. (ಮುದುಕನಿಗೆ) ಆ ಮಸಣದ ಆಚೆ ಏನಿದೆ ಅಜ್ಜ ?

**ಮುದುಕ** : ಮಸಣದ ಆಚೆ : ಗೊತ್ತಿಲ್ಲಪ್ಪ ! ಅದರಾಚೆ ನಾನು ಹೋದದ್ದೇ ಇಲ್ಲ.

**ಪಯಣಿಗ** : ಗೊತ್ತಿಲ್ಲ ?

**ಹುಡುಗಿ** : ನಂಗೂ ಗೊತ್ತಿಲ್ಲ.

**ಮುದುಕ** : ನಂಗೆ ಗೊತ್ತಿರೂದೆಲ್ಲ ತೆಂಕು, ಬಡಗು ಮತ್ತೆ ಈಗ ನೀವು ಬಂದ್ರಲ್ಲ ಆ ಕಡೆ ಮೂಡ್ಲ ದಿಕ್ಕು. ಆ ಜಾಗ ನಂಗೆ ಚಲೋ ತಿಳಿದಿರೂದು. ಆ ಜಾಗ ಬೇಕಾದರೆ ನಿಮ್ಮಂಥವರಿಗೆ ಒಳ್ಳೇದು. ನಾ ಹೀಂಗ ಹೇಳಿದೆ ಅಂತ ಬೇಜಾರ ಮಾಡ್ಕೋಬೇಡಿ. ನೀವು



ಭಾಳ ದಣಿದಿದ್ದೀರಾ. ನಂಗನಿಸ್ತದೆ ನೀವು ಹಿಂದೆ ತಿರುಗಿ ಹೋಗೂದು ಚಲೋದು. ಎಂದಾತೆಂದರೆ ನೀವು ಮುಂದೆ ಮುಂದೆ ಹೊರಟರೆ ಅದು ತುದಿ ಮುಟ್ಟೊದೆ ಇಲ್ಲ.

***ಪಯಣಿಗ*** : ಏನು, ನಾನು ತುದಿ ಮುಟ್ಟೊದೆ ಇಲ್ವೆ ?! (ವಿಚಾರಿಸಿ ಮತ್ತೆ ಹೇಳುತ್ತಾನೆ) ಸಾಧ್ಯವೇ ಇಲ್ಲ. ನಾನು ಹೋಗಲೇಬೇಕು. ನಾನು ಹಿಂತಿರುಗಿ ಹೋದರೆ ಅಲ್ಲಿ ಎಲ್ಲಾ ದೊಡ್ಡ ಮನುಷ್ಯರೇ ಇರೂದು. ಅಲ್ಲಿ ಜಮೀನುದಾರರು ಇಲ್ಲದ ಸ್ಥಳವೇ ಇಲ್ಲ. ಅಲ್ಲಿ ಶೋಷಣೆ ಮತ್ತು ಜೈಲುಗಳು ಇಲ್ಲದಾದ ಜಾಗವೇ ಸಿಕ್ಕುವುದಿಲ್ಲ. ಇಷ್ಟುಮಾತ್ರವಲ್ಲ ನಿರ್ಲಜ್ಜವಾದ, ನಗೆಯಿಲ್ಲದ, ಬೂಟಾಟಿಕೆಯ ಕಣ್ಣೀರಿಲ್ಲದ ಸ್ಥಳವನ್ನೇ ಕಾಣಲು ಸಾಧ್ಯವಿಲ್ಲ. ಅದನ್ನು ನಾನು ದ್ವೇಷಿಸುತ್ತೇನೆ. ನಾನು ಹಿಂತಿರುಗಿ ಹೋಗುವುದಿಲ್ಲ.

***ಮುದುಕ*** : ನೀವು ತಪ್ಪಿರಬಹುದು. ಕೆಲವರ ಹರ್ದಯ ದಿಂದಾದರೂ ಹರಿಯೂ ಅನುಕಂಪೆಯ ಕಣ್ಣೀರನ್ನು ಕಾಣಬೇಕು.

***ಪಯಣಿಗ*** : ಇಲ್ಲ. ಅವರ ಹೃದಯದಿಂದ ಸುರಿವ ಕಣ್ಣೀರನ್ನು ನೋಡಲು ಬಯಸುವುದಿಲ್ಲ. ನನಗೆ ಅವರ ಅನುಕಂಪ ಬೇಡ.

***ಮುದುಕ*** : ಹಾಗಿದ್ದಮೇಲೆ (ತಲೆ ಕುಣಿಸಿ) ನೀವು ಮುಂದೆ ಹೋಗಬೇಕಾಗ್ತದೆ.

***ಪಯಣಿಗ*** : ಹೌದು, ನಾನು ಹೋಗಲೇಬೇಕಾಗುತ್ತದೆ. ಯಾವುದೋ ಒಂದು ಧ್ವನಿ ನನ್ನನ್ನು ಮುಂದಕ್ಕೆ ಹೋಗಲು ಒತ್ತಾಯಿಸುತ್ತ ಕರೆಯುತ್ತಲೇ ಇರುತ್ತದೆ. ಇದರಿಂದ ನನಗೆ ಬಿಡುಗಡೆಯೇ ಇಲ್ಲ.

ತೊಂದರೆ ಎಂದರೆ ನನ್ನ ಪಾದ ಸಿಗಿದುಹೋಗಿದೆ. ಹಾಗಾಗಿ ನನ್ನ ಪಯಣದಗುಂಟ ಒಂದೇಸಮನೆ ರಕ್ತ ಕಳೆದುಕೊಂಡಿದ್ದೇನೆ. (ಮುದುಕನಿಗೆ ಪಾದ ತೋರಿಸಲು ಒಂದು ಕಾಲಿನ ಮೇಲೆ ನಿಲ್ಲುತ್ತಾನೆ) ನನ್ನಲ್ಲಿ ಸಾಕಷ್ಟು ರಕ್ತ ಇಲ್ಲವಾಗಿದೆ. ನನಗೆ ತುಸು ರಕ್ತ ಕುಡಿಯುವ ಅವಶ್ಯ ಕತೆಯಿದೆ. ಆದರೆ ನಾನು ಅದನ್ನು ಎಲ್ಲಿ ಪಡೆಯಬಲ್ಲೆ? ಹಾಗಂತ ಕೇವಲ ಯಾರ ಯಾರದ್ದೋ ರಕ್ತವನ್ನು ಕುಡಿಯಲು ಇಚ್ಛಿಸುವುದಿಲ್ಲ. ಅದರ ಬದಲಾಗಿ ನೀರು ಕುಡಿಯಬೇಕಾಗುತ್ತದೆ. ಅದಂತೂ ದಾರಿಯಲ್ಲಿ ಸಿಕ್ಕುತ್ತದೆ. ಖರೆ ಎಂದರೆ ಅದರ ಕೊರತೆ ನನಗೆ ಅನಿಸಿದ್ದಿಲ್ಲ. ಹೀಗಾಗಿ ನನ್ನ ರಕ್ತದಲ್ಲಿ ನೀರೇ ಹೆಚ್ಚು. ಆದ್ದರಿಂದಲೇ ನನ್ನ ಶಕ್ತಿಯೆಲ್ಲ ತೊಳೆದುಹೋಗಿದೆ. ಆದರೆ ಇಂದು ನೀರಿನ ಒಂದು ಒರತೆಯೂ ಕಣ್ಣಿಗೆ ಬೀಳಲಿಲ್ಲ. ಆದ್ದರಿಂದ ಹೆಚ್ಚು ನಡೆಯಲಾಗಲಿಲ್ಲ.

***ಮುದುಕ*** : ಹಾಂಗೇನೂ ಇರಲಿಕ್ಕಿಲ್ಲ ಅದು. ಹೊತ್ತು ಕಂತಿತು. ಈಗ ನೀವು ನನ್ನ ಹಾಗೇ ಸಲೂಪ ಆರಾಮ ತೆಗೆದುಕೊಂಡರೆ ಚಲೊ.

***ಪಯಣಿಗ*** : ಆದರೆ ಮುಂದಿನ ಧ್ವನಿಯೊಂದು ನನ್ನನ್ನು ಮುಂದೆ ಬಾ ಎಂದು ಕರೆಯುತ್ತಿದೆ.

***ಮುದುಕ*** : ನಂಗೊತ್ತು.

***ಪಯಣಿಗ*** : ನಿಮಗೆ ಗೊತ್ತಾ ? ಆ ಧ್ವನಿ ಗೊತ್ತಾ ?

***ಮುದುಕ*** : ಹೌದು. ಬಹುಶಾ ಅದು ನನ್ನನ್ನು ಕರೆದಿತ್ತು.

***ಪಯಣಿಗ*** : ಈಗ ನನ್ನನ್ನು ಕರೆಯುತ್ತಿರುವ ಧ್ವನಿಯೇ ಅಂತೀರಾ ?

***ಮುದುಕ*** : ಹಾಗೆ ಹೇಳಲಾರೆ. ಆದರೆ ಅದು ಬಹಳ ಸಲ ನನ್ನನ್ನು ಕರೆದಿತ್ತು. ಆದರೆ ನಾನು ನಿರ್ಲಕ್ಷ್ಯ ಮಾಡಿದ್ದೆ. ನಂತರ ಅದು ನಿಂತುಹೋಯ್ತು. ಇಷ್ಟು ಮಾತ್ರ ನೆನಪು.

***ಪಯಣಿಗ*** : ಓ, ನೀವು ಅದನ್ನು ನಿರ್ಲಕ್ಷಿಸಿದಿರಿ. (ಏನೋ ಗ್ರಹಿಸಿ ಬೆಚ್ಚಿಬಿದ್ದು ಆಲಿಸುತ್ತಾನೆ) ಇಲ್ಲ ನಾನು ಹೋಗಲೇಬೇಕು. ನನಗೆ ಬಿಡುಗಡೆ ಇಲ್ಲ. ದುಃಖದ ಸಂಗತಿ ಎಂದರೆ ನನ್ನ ಪಾದಗಳು ! ತುಂಬ ಕೆಟ್ಟ ಸ್ಥಿತಿ (ಹೋಗಲು ತಯಾರಿ).

***ಹುಡುಗಿ*** : ಇಲ್ನೋಡಿ (ಒಂದು ಬಟ್ಟೆ ಕೊಡುತ್ತಾಳೆ ). ನಿಮ್ಮ ಪಾದಕ್ಕೆ ಸುತ್ತಿಕೊಳ್ಳಿ.

***ಪಯಣಿಗ*** : ಓ ಬಹಳ ಉಪಕಾರ ಆಯ್ತು ಕಿಶೋರಿ. ಸತ್ಯವಾಗೂ ಇಂಥ ಕರುಣೆ ಅಪರೂಪ. ಈಗ ನಾನು ಮುಂದಕ್ಕೆ ನಡೆಯಬಲ್ಲೆ. (ವಸ್ತ್ರ ಸುತುತ್ತಾನೆ) ಇಲ್ಲ; ಸಾಕಾಗ್ತಾ ಇಲ್ಲ. ನೀನೇ ತೆಗೆದುಕೊ ಮಗು. ಆದರೆ ನಿನ್ನ ಉಪಕಾರ ದೊಡ್ಡದಪ್ಪ. ಹೇಳಲು ನನಗೆ ಶಬ್ದಗಳೇ ಸಾಲವು.

***ಮುದುಕ*** : ಅದೇನು ದೊಡ್ಡದಲ್ಲ ಬಿಡಿ. ನಿಮಗೇನು ಉಪಯೋಗವೂ ಆಗಲಿಲ್ಲ !

***ಪಯಣಿಗ*** : ಸರಿ. ಅದು ನನಗೇನೂ ಉಪಯೋಗ ಆಗಲಿಲ್ಲ. ಆದರೆ ಇದು ನನಗೆ ಶ್ರೇಷ್ಠವಾದ ಭಿಕ್ಷೆ. ಇದಕ್ಕೆ ಹೋಲಿಸಬಹುದಾದ ಬೇರೇನಾದರೂ ಇದೆ ಅಂದು ಕೊಂಡಿದ್ದೀರಾ ?

***ಮುದುಕ*** : ಅಷ್ಟೆಲ್ಲ ಹಾಡಿ ಹೊಗಳಬೇಕಾದ್ದಿಲ್ಲ.

***ಪಯಣಿಗ*** : ನನಗೆ ಗೊತ್ತು. ಆದರೆ ನಾನು ಹೇಳದಿರಲಾರೆ. ಇದು ನನ್ನ ಸ್ವಭಾವ ಅಂತಿಟ್ಟುಕೊಳ್ಳಿ. ನಾನು ಭಿಕ್ಷೆ ಪಡೆಯುವುದೇ ಆಗಿದ್ದರೆ ಹೆಣವನ್ನು ಕಂಡ, ಅದರ ಮೇಲೆಯೇ ಸುತ್ತಿ ಸುಳಿ ಸುಳಿದು ಅವಳ ನಾಶವನ್ನು ಮಹದಾಶೆಯಿಂದ ನನ್ನ ಕಣ್ಣಿನಿಂದಲೇ ನೋಡುವ ರಣಹದ್ದೇ ಆಗಿರುತ್ತಿದ್ದೆ ಅಥವಾ ಅವಳೊಬ್ಬಳನ್ನು ಬಿಟ್ಟು ನನ್ನನ್ನು ಒಳಗೊಂಡ ಎಲ್ಲದರ ನಾಶಕ್ಕಾಗಿ ಪ್ರಾರ್ಥಿಸಬಹುದಾಗಿತ್ತೇನೊ. ನಾನೂ ಹಾಗೆ ನಾಶಕ್ಕೆ ಪಕ್ಕಾದವನೇ ಹೌದು. ಆದರೆ ನಾನು ಇನ್ನೂ ಅದಕ್ಕೆ ಸಾಕಷ್ಟು ಶಕ್ತಿವಂತನಾಗಲಿಲ್ಲ. ಒಂದು ವೇಳೆ ಹಾಗೇನಾದರೂ ಆಗಿದ್ದರೂ ಅವಳ ಅಂಥ ನಾಶವನ್ನು ಬಯಸುತ್ತಿರಲಿಲ್ಲ. ಯಾಕೆಂದರೆ ಅಂಥ ಅಂತ್ಯ ಯಾರಿಗೂ ಬರಬಾರದು. ಸರಿ, ಆದ್ದರಿಂದ ಹೀಗೆ ಮಾಡುವುದೇ ಒಳಿತು. (ಹುಡುಗಿಗೆ) ಈ ಬಟ್ಟೆಯ ತುಂಡೇನೋ ಸರಿಯಾದುದೇ. ಆದರೆ ತೀರ ಸಣ್ಣದಾಯಿತು. ಇದನ್ನು ನಿನಗೇ ಕೊಡುತ್ತೇನೆ.

***ಹುಡುಗಿ*** : (ಹಿಂಜರಿಯುತ್ತ) ನಂಗೆ ಬೇಡ ಅದು. ನೀವೆ ತೆಗೆದುಕೊಳ್ಳಿ.

***ಪಯಣಿಗ*** : (ಏನೋ ಗ್ರಹಿಸಿ ಮುಗುಳುನಕ್ಕು) ಓ, ನಾ ಹಿಡಿದುಕೊಂಡಿದ್ದೇನೆ ಅಂತಲೋ ?

***ಹುಡುಗಿ*** : (ತಲೆ ಅಲ್ಲಾಡಿಸಿ) ನಿಮ್ಮ ಚೀಲದಲ್ಲಿ ಇಟ್ಟುಕೊಳ್ಳಿ. ಮಜಾಕ್ಕೆ.

***ಪಯಣಿಗ*** : (ನಿರಾಶೆಯಿಂದ ಹಿಂದೆ ಹೆಜ್ಜೆ ಹಾಕಿ) ಇದನ್ನು ಹೇಗೆ ಹೊತ್ತು ಹೋಗಲಿ ?

***ಮುದುಕ*** : ಹೌದು. ನೀವು ಆರಾಮ ತೆಗೆದುಕೊಳ್ಳುವುದೇ ಇಲ್ಲ. ಆದ್ದರಿಂದ ಏನನ್ನೂ ಹೊರಲಾರಿರಿ. ಸಲೂಪ ದಣು ಆರಿಸ್ಕೊಳ್ಳಿ ಆಮೇಲೆ ಎಲ್ಲಾ ಸರಿ ಆಗ್ತದೆ.

***ಪಯಣಿಗ*** : ಅದೇ ಸರಿ. ವಿಶ್ರಾಂತಿ..... (ಏನೋ ವಿಚಾರಿಸಿ ಬೆಚ್ಚಿಬಿದ್ದು ಆಲಿಸುತ್ತಾನೆ) ಇಲ್ಲ; ಅದು ಅಸಾಧ್ಯ. ನಾನು ಹೋಗುವುದೇ ಉತ್ತಮ.

***ಮುದುಕ*** : ನಿಮಗೆ ಆರಾಮ ಬೇಡ ?

***ಪಯಣಿಗ*** : ಬೇಕು.

***ಮುದುಕ*** : ಸರಿ. ಹಾಗಾದ್ದರೆ ಸಲೂಪ ಆರಾಮ ತೆಗೆದುಕೊಳ್ಳಿ.

***ಪಯಣಿಗ*** : ಆದರೆ ನನ್ನಿಂದ ಸಾಧ್ಯವೇ ಇಲ್ಲ.

***ಮುದುಕ*** : ಈಗಲೇ ಹೋಗೂದು ಚಲೊ ಅಂತ ಅನಿಸ್ತದ್ಯಾ ಇನ್ನೂ ?

***ಪಯಣಿಗ*** : ಹೌದು. ನಾನು ಹೋಗೋದೆ ಉತ್ತಮ.

***ಮುದುಕ*** : ಚಲೋ ಆಯ್ತು ಬಿಡಿ. ನೀವ್ ಹೋಗಲೇಬೇಕು.

***ಪಯಣಿಗ*** : (ಏಳುತ್ತ) ಒಳ್ಳೇದು. ಹೋಗಿಬರ್ತೇನೆ. ನಮಸ್ಕಾರ. ನಿಮ್ಮಿಂದ ತುಂಬ ಉಪಕಾರ ಆಯ್ತು. (ಹುಡುಗಿಗೆ) ಇದನ್ನು ನಿನಗೇ ಕೊಡ್ತಿದ್ದೇನೆ. ತೆಗೆದಿಕೋ ಮಗು. ದಯಮಾಡಿ ತೆಗೆದಿಕೊ.

(ಹುಡುಗಿ ಹೆದರುತ್ತಾಳೆ. ಕೈ ಹಿಂದೆ ತೆಗೆದುಕೊಳ್ಳುತ್ತಾಳೆ ಮತ್ತು ಒಳಗೆ ಹೋಗುವಂತೆ ತೋರುತ್ತದೆ).

***ಮುದುಕ*** : ತಕೊ ಅದನ್ನು. ಭಾಳ ಒಜ್ಜೆ ಅನಿಸಿದರೆ ಆ ಮಸಣದಲ್ಲಿ ವಗೆದುಬಿಡು.

***ಹುಡುಗಿ*** : (ಮುಂದೆ ಹೆಜ್ಜೆ ಹಾಕಿ) ಓಹೋ, ಹಾಗೆ ಮಾಡಬೇಡಿ !

***ಪಯಣಿಗ*** : ಇಲ್ಲ, ಹಾಗೆ ಮಾಡುವುದಿಲ್ಲ.

***ಮುದುಕ*** : ಹಾಗಾದರೆ ಯಾವುದಾದರೂ ಗಿಡಕ್ಕೊ ಕಾಡುಮಲ್ಲಿಗೆ ಬಳ್ಳಿ ಹಿಂಡಿಗೊ ತೂಗಿಹಾಕಿಬಿಡು.

***ಹುಡುಗಿ*** : (ನಗುತ್ತ ಚಪಾಳೆ ಹೊಡೆದು) ಹಾಂ, ಅದು ಚಲೋದು.

***ಪಯಣಿಗ*** : ಆ ಹಾ ಹಾ.... (ಒಂದು ಕ್ಷಣ ನಿಶ್ಶಬ್ದ)

***ಮುದುಕ*** : ನಮಸ್ಕಾರ. ಹಾಗಾದರೆ ಒಳ್ಳೇದಾಗಲಿ. (ಎದ್ದು ಹುಡುಗಿ ಕಡೆ ತಿರುಗಿ) ಮಗ್ವೆ, ನನ್ನ ಕೈಹಿಡಿ. ಒಳಗೆ ಹೋಗ್ವ. ನೋಡು ಹೊತ್ತು ಕಂತಿಹೋಯ್ತು. (ಬಾಗಿಲ ಕಡೆ ತಿರುಗುತ್ತಾನೆ).

***ಪಯಣಿಗ*** : ನಿಮ್ಮಿಬ್ಬರಿಗೂ ಶುಭವಾಗಲಿ. ನಿಮಗೆ ಸುಖ-ಶಾಂತಿ ಸಿಕ್ಕಲಿ. ನಮಸ್ಕಾರ. (ಕೆಲ ಹೆಜ್ಜೆ ನಡೆದು ವಿಚಾರಮಗ್ನನಾಗಿ ಬೆಚ್ಚಿಬೀಳುತ್ತಾನೆ) ಆದರೆ ನನ್ನಿಂದ ಅಸಾಧ್ಯ. ನಾನು ಈ ಸ್ಥಳ ಬಿಡಲೇಬೇಕು. ನಾನು ಹೋಗುವುದೇ ಉತ್ತಮ. (ತಲೆ ಎತ್ತಿ ನಿಶ್ಚಯದಿಂದ ಪಶ್ಚಿಮದ ಕಡೆ ನಡೆಯುತ್ತಾನೆ. ಹುಡುಗಿ ಮುದುಕನು ಒಳಗೆ ಹೋಗಲು ಸಹಾಯ ಮಾಡುತ್ತಾಳೆ. ನಂತರ ಬಾಗಿಲು ಮುಚ್ಚುತ್ತಾಳೆ. ಪಯಣಿಗ ಕುಂಟುತ್ತ ಹೋಗುತ್ತಾನೆ. ರಾತ್ರಿ ಆವರಿಸುತ್ತದೆ).

ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೩೩೪, ಹೊನ್ನಾವರ - ಉ. ಕ.

# ಕನ್ನಗಳ್ಳರಿಗೆ ಪೂರ್ಣಕುಂಭ ಸ್ವಾಗತ

*ಅತ್ಯುತ್ಸಾಹದಿಂದ ವಿದೇಶಿ ವಿಮಾ ಕಂಪೆನಿಗಳನ್ನು ಭಾರತಕ್ಕೆ ಬರಮಾಡಿಕೊಳ್ಳಲು ಭಾಜಪದ 'ರಾಷ್ಟ್ರೀಯ' ಸರ್ಕಾರ ಮುನ್ನುಗ್ಗುತ್ತಿದೆ. ದೇಶದ ಭವಿಷ್ಯವಾಗಲಿ ದೇಶದ ಜನರು ವಿಮಾ ಕಂಪೆನಿಗಳಿಂದ ಲೂಟಿಗೊಳಗಾಗುವುದಾಗಲಿ ಅದಕ್ಕೆ ಲಕ್ಷ್ಯವಿಲ್ಲ. ಸಾರ್ವಜನಿಕ ಹಣವನ್ನು ಸೂರೆಗೊಳ್ಳುವುದು ಮೊದಲ ಹೆಜ್ಜೆ; ಆಮೇಲೆ ಪಾಲಿಸಿದಾರರಿಗೆ ಮಣ್ಣು ಮುಕ್ಕಿಸುವುದು, ಇತ್ಯಾದಿ ಮುಂದಿನ ಹೆಜ್ಜೆಗಳು, ಇಷ್ಟು ರಾಷ್ಟ್ರವಿರೋಧಿ ಧೋರಣೆ ತಾಳುವ ಸರ್ಕಾರ ಅಸ್ತಿತ್ವಕ್ಕೆ ಬಂದಿದೆಯೆಂದರೆ ಆತಂಕ ಸಹಜವೇ ಆಗಿದೆ.*

**ಕೆ. ಎಸ್. ರವಿಕುಮಾರ್**

ಮಾಜಿ ಪ್ರಧಾನಿ ಪಿ. ವಿ. ನರಸಿಂಹರಾಯರನ್ನು ನಿರಂತರ ನೆನಪಿಸಿಕೊಳ್ಳಬೇಕು. ದೇಶಕ್ಕೆ ಅನೇಕ ಆರ್ಥಿಕ ಹಗರಣಗಳನ್ನು ಕೊಡುಗೆಯಾಗಿ ನೀಡಿದ್ದಕ್ಕಾಗಿ ಮತ್ತು ದಗಾ, ಹಲಾಲಖೋರತನಗಳಿಗೆ ಅಂತರರಾಷ್ಟ್ರೀಯ ಮನ್ನಣೆ ತಂದುಕೊಟ್ಟಿದ್ದಕ್ಕಾಗಿ. ಇಂತಹವುಕ್ಕೆಲ್ಲಾ ಒಂದು ಸೂತ್ರಬದ್ಧ ಆರ್ಥಿಕ ನೀತಿಯ ವೇದಿಕೆ ಸೃಷ್ಟಿಗೆ ಒತ್ತಾಸೆಯಾದವರು ಹಿಂದೊಮ್ಮೆ ವಿಶ್ವಬ್ಯಾಂಕಿಗಾಗಿ ದುಡಿದಿದ್ದ ಮಾಜಿ ವಿತ್ತ ಮಂತ್ರಿ ಮನಮೋಹನ ಸಿಂಗ್. ಇವರಿಬ್ಬರ ಧೋರಣೆಗಳ ಫಲವಾಗಿ ಜೀವವಿಮೆ ಮತ್ತು ಸಾಮಾನ್ಯ ವಿಮೆಗಳ ನೆತ್ತಿಯ ಮೇಲೆ ಇವತ್ತು ಖಾಸಗೀಕರಣದ ಕತ್ತಿ ತೂಗುತ್ತಿದೆ. ದೇಶಕ್ಕೆ ಸಮೃದ್ಧತೆ, ಆರ್ಥಿಕ ಸಬಲತೆ, ಬಡತನ ನಿರ್ಮೂಲನೆ ಇತ್ಯಾದಿಗಳೆಲ್ಲಾ ಆರ್ಥಿಕ ಉದಾರೀಕರಣದಿಂದ ಸಾಧ್ಯ ಎಂದು ಇವರಿಬ್ಬರು ಖಾಸಗೀಕರಣದ ಮೂಲಕ ಜಾಗತೀಕರಣ ಸಾಧಿಸಿದ ಪಿತೂರಿಗಳನ್ನು ಹೆಣೆದುಹೋದರು. ಇವರ ಪರಂಪರೆಯನ್ನು ಇನ್ನಿಬ್ಬರು ಮಾಜಿ ಪ್ರಧಾನಿಗಳಾದ ದೇವೇಗೌಡರು ಮತ್ತು ಐ. ಕೆ. ಗುಜ್ರಾಲರು ಮುಂದುವರಿಸಿದರು. ಈಗಿನ ಪ್ರಧಾನಿ ವಾಜಪೇಯಿ ನೇತೃತ್ವದ ಸರ್ಕಾರವಂತೂ ಇನ್ನಿಲ್ಲದ ಉತ್ಸಾಹವನ್ನು ವಿಮಾ ಖಾಸಗೀಕರಣದ ವಿಚಾರದಲ್ಲಿ ಪ್ರದರ್ಶಿಸುತ್ತಿದೆ. ಸ್ವದೇಶಿ, ಸ್ವಾವಲಂಬನೆಗಳನ್ನು ಬಡಬಡಿಸುತ್ತಲೇ ವಿದೇಶಿ ಕಂಪೆನಿಗಳಿಗೆ ಶರಣಾಗಿ ಕೋಟ್ಯಾಂತರ ಪಾಲಿಸಿದಾರರ ಯೋಗಕ್ಷೇಮವನ್ನು ಒತ್ತೆಯಿಡಲು ತಯಾರಾಗಿರುವ ಈ ಸರ್ಕಾರಕ್ಕೆ ನಾಚಿಕೆಯೇ ಇಲ್ಲ. ಅಪರಾಧಿ ಪ್ರಜ್ಞೆ ಕಾಡುವ ವಿಚಾರವಂತೂ ಇಲ್ಲವೇ ಇಲ್ಲ.




### ಹಣ ಹೂಡುವುದು ಹಣ ಮಾಡಲು

ಸಾರಾಸಗಟು ಖಾಸಗೀಕರಣದ ಉರುಳಲ್ಲಿ ಕೊರಳೊಡ್ಡಿರುವ ವಿಮಾಕ್ಷೇತ್ರದ ಮೇಲೆ ವಿದೇಶಿ ಕಂಪೆನಿಗಳಂತೂ ತಮ್ಮ ಆಸೆಗಣ್ಣನ್ನು ಬೀರಿವೆ. ಭಾರತೀಯ ಕಂಪೆನಿಗಳ ಜೊತೆಗೂಡಿ ಲಾಭ ಹಿರಿಯುವ ಸವಿಗನಸು ಕಾಣುತ್ತಿವೆ. ಯಾಕೆ ಗೊತ್ತೆ? ''ಪಾಶ್ಚಿಮಾತ್ಯ ದೇಶಗಳ ಹೂಡಿಕೆದಾರರಿಗೆ ದುಡ್ಡು ಮಾಡಲು ಅತ್ಯುತ್ತಮವಾದ ಸ್ಥಳವೆಂದರೆ ಭಾರತ.'' ಹೀಗೆಂದವರು ವಾಷಿಂಗ್‌ಟನ್ನಿನ 'ವೆಂಚರ್ ಕ್ಯಾಪಿಟಲ್' ಎಂಬ ಆರ್ಥಿಕ ಸಲಹಾ ಸಂಸ್ಥೆಯ ಉಪಾಧ್ಯಕ್ಷ ಸ್ಟೀಫನ್‌ಸನ್. ಜೆ. ಎಂ. ಹ್ಯೂಬರ್ ಕಾರ್ಪೊರೇಷನ್ನಿನ ರಾಸಾಯನಿಕ ವಿಭಾಗದ ಅಧ್ಯಕ್ಷ ಸತೀಶ್ ವಾಸನ್ ಇನ್ನೂ ಒಂದು ಹೆಜ್ಜೆ ಮುಂದಿದ್ದಾರೆ. ಅವರ ಪ್ರಕಾರ ''ಭಾರತದಲ್ಲಿ ಎಷ್ಟು ದುಡ್ಡು ಮಾಡಬಹುದೆಂದರೆ ಅದನ್ನೇನು ಮಾಡುವುದು ಎಂದು ತಿಳಿಯಲಾಗದಷ್ಟು''. ಇವರಿಬ್ಬರೂ 1996ರ ಜೂನ್ 13ರಂದು ಅಮೆರಿಕಾದ ಬಾಲ್ಟಿಮೋರ್‌ನಲ್ಲಿ ನಡೆದ ವಿಚಾರ ಸಂಕಿರಣವೊಂದರಲ್ಲಿ ಮೇಲಿನಂತೆ ಹೇಳಿದ್ದರು. ಆ ವಿಚಾರ ಸಂಕಿರಣದ ವಿವರಗಳನ್ನು ಫಿನಾನ್ಸಿಯಲ್ ಎಕ್ಸ್‌ಪ್ರೆಸ್ ''ಅಮೆರಿಕನ್ ಹೂಡಿಕೆದಾರರಿಗೆ ಭಾರತದಲ್ಲಿ ಹಣದ ಕಂತೆಗಳೇ ಕಾಣುತ್ತಿವೆ'' ಎಂಬ ದೀರ್ಘ ಶೀರ್ಷಿಕೆಯಡಿ ವರದಿಮಾಡಿತ್ತು.

ಅರ್ಥವಾಯಿತಲ್ಲ? ಹಣ ಮಾಡಲು ವಿದೇಶಿ ಕಂಪೆನಿಗಳಿಗೆ ಭಾರತವು ಸ್ವರ್ಗ ಸದೃಶ ಭೂಮಿ. (ಹಿಂದೆ ಪರಕೀಯ ದಾಳಿಕಾರರಿಗೂ, ಸಾಮ್ರಾಜ್ಯಶಾಹಿ ಬ್ರಿಟಿಷರಿಗೂ ಇದೇ ಭಾವನೆ ಇತ್ತಲ್ಲವೆ?) ಹೀಗಿರುವಾಗ ವಿಮಾಕ್ಷೇತ್ರ ಚಿನ್ನದ ಮೊಟ್ಟೆ ಇಡುವ ಕೋಳಿಯಾಗಿ ಖಾಸಗೀ ವಿಮಾ ಕಂಪೆನಿಗಳಿಗೆ ಕಂಡಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಕೋಳಿಯನ್ನು ಸಾಯಿಸಿದ ಮೇಲೆ ಚಿನ್ನವೂ ಇಲ್ಲ, ಮೊಟ್ಟೆಯೂ ಇಲ್ಲ!

ಭಾರತಕ್ಕೆ ಆಗಮಿಸಲು ತುದಿಗಾಲಲ್ಲಿ ನಿಂತಿರುವ ವಿಮಾ ಕಂಪೆನಿಗಳು ಬೈಬಲ್ ಆಗಲಿ, ಭಗವದ್ಗೀತೆಯನ್ನಾಗಲಿ ಮುಂದಿಟ್ಟುಕೊಂಡು ವ್ಯವಹಾರ ನಡೆಸುವುದಿಲ್ಲ. ಕಳೆದ ನಾಲ್ಕು ದಶಕಗಳಿಂದ ವಿಮಾ ವ್ಯವಹಾರವನ್ನು ನಡೆಸಲು ಸಾಧ್ಯವಾಗದ ಭಾರತೀಯ ಖಾಸಗೀ ಕಂಪೆನಿಗಳೊಡನೆ ಇವು ಕೈಜೋಡಿಸುತ್ತವೆ. ಬಹುತೇಕ ಈ ಎಲ್ಲಾ ಕಂಪೆನಿಗಳು 'ನೇರ ವಂಚನೆ'ಯ ವಿಮಾ ವ್ಯವಹಾರವನ್ನೇ ನಡೆಸುತ್ತವೆ. ಪರಿಣಾಮವಾಗಿ ಕಂಪೆನಿಗಳು ಮತ್ತು ದಾವೆದಾರರ ನಡುವೆ ಮತ್ತು ಕಂಪೆನಿ ಕಂಪೆನಿಗಳ ನಡುವೆ ಅಸಂಖ್ಯ ವ್ಯಾಜ್ಯಗಳು ಇತ್ಯರ್ಥವಾಗದೇ ಉಳಿಯುತ್ತವೆ. ಹಿಂದಿನ ಉದಾಹರಣೆಗಳನ್ನು ಗಮನಿಸೋಣ. ಅಮೆರಿಕಾದಲ್ಲಿ ಪ್ರುಡೆನ್ಶಿಯಲ್ ಇನ್ಸ್ಯೂರೆನ್ಸ್ ಕಂಪೆನಿ ತನ್ನ ಪಾಲಿಸಿದಾರರಿಗೆ ವಂಚಿಸಿದ್ದಕ್ಕಾಗಿ 50 ಕೋಟಿ ಡಾಲರ್ (ಸುಮಾರು 22 ಶತಕೋಟಿ ರೂಪಾಯಿಗಳು)ನಷ್ಟು ಹಣವನ್ನು ದಂಡವಾಗಿ ತೆರಬೇಕಾಯಿತು. 1994ರಲ್ಲಿ ಮೆಟ್ರೋಪಾಲಿಟನ್ ಇನ್ಸ್ಯೂರೆನ್ಸ್ ಕಂಪೆನಿ 2 ಕೋಟಿ ಡಾಲರ್‌ಗಳನ್ನು ವಿಮಾ ಮಾರಾಟದಲ್ಲಿ ಪಾಲಿಸಿದಾರರಿಗೆ ತಪ್ಪು ಮಾಹಿತಿ ನೀಡಿದ ತಪ್ಪಿಗಾಗಿ ದಂಡವೆಂದು ತೆರಬೇಕಾಯಿತು. 1991ರಲ್ಲಿ 'ಫಸ್ಟ್ ಎಕ್ಸಿಕ್ಯೂಟಿವ್' ಕಂಪೆನಿ ತನ್ನದೇ ಹೂಡಿಕೆಯ ತಪ್ಪು ಲೆಕ್ಕಾಚಾರಗಳಿಂದಾಗಿ ದಿವಾಳಿಯೇಳಬೇಕಾಯಿತು. ಪಾಲಿಸಿದಾರರು ಎಂದೆಂದೂ ಮರೆಯಲಾಗದಂಹತ 'ಮಹಾನ್‌ಸಾಧನೆ' ಮಾಡಿರುವ ಅಮೆರಿಕಾದ ವಿಮಾ ಕಂಪೆನಿಗಳ ಪಟ್ಟಿ ಇಷ್ಟಕ್ಕೇ ಕೊನೆಗೊಳ್ಳುವುದಿಲ್ಲ. ಆ ಪಟ್ಟಿಯಲ್ಲಿ ನ್ಯೂಯಾರ್ಕ್ ಲೈಫ್ ಇನ್ಸ್ಯೂರೆನ್ಸ್, ಯುನೈಟೆಡ್ ಬಾಲ್ಡ್‌ವಿನ್, ಅಲಿಯಾನ್ಜ್ ಎಜಿ, ಫಸ್ಟ್ ಕ್ಯಾಪಿಟಲ್, ಇಕ್ವಿಟೇಬಲ್ ಲೈಫ್- ಇತ್ಯಾದಿ (ಕು)ಖ್ಯಾತ ಕಂಪೆನಿಗಳಿವೆ. (ಈ ಮಾಹಿತಿಗೆ ಮೂಲಾಧಾರ 1996ರ ಜುಲೈ 5ರ 'ಬಿಸಿನೆಸ್ ಸ್ಟ್ಯಾಂಡರ್ಡ್'ನಲ್ಲಿನ ರಾಯಿಟರ್ ಸುದ್ದಿ). ದಿವಾಳಿಯೆದ್ದಿದ್ದರೂ ಈ ಕಂಪೆನಿಗಳು ಭಾರತಕ್ಕೆ ಬಂದು ಲಾಭ ಗಳಿಸಲು ಉತ್ಸುಕವಾಗಿವೆ.

### ಸೂರ್ಯ ಮುಳುಗದ ಸಾಮ್ರಾಜ್ಯದಲ್ಲಿ

ಬ್ರಿಟನ್ನಿನ ರಾಜಮನೆತನದ ಸದಸ್ಯರ ಲೈಂಗಿಕ ಹಗರಣಗಳನ್ನು ಸುದ್ದಿ ಮಾಡಲು ಟನ್‌ಗಟ್ಟಲೆ ಪುಟಗಳನ್ನು ವ್ಯಯಿಸುವ ಅನೇಕ ಅಂತರರಾಷ್ಟ್ರೀಯ ಪತ್ರಿಕೆಗಳಿಗೆ ಅದೇ ಬ್ರಿಟನ್ನಿನ ವಿಮಾ ಕಂಪೆನಿಗಳ ಅವ್ಯವಹಾರಗಳು ವಿಶೇಷ ಸುದ್ದಿಯಾಗುವುದಿಲ್ಲ. ಸೂರ್ಯ ಮುಳುಗದ ಸಾಮ್ರಾಜ್ಯವಾಗಿದ್ದ ಬ್ರಿಟನ್ನಿನಲ್ಲಿ 'ಲಾಯ್ಡ್ಸ್ ಸಿಂಡಿಕೇಟ್' ಎಂಬ ಪ್ರಖ್ಯಾತ ವಿಮಾ ಕಂಪೆನಿ ನಷ್ಟ ಅನುಭವಿಸಿ ಮುಳುಗಿಹೋದ ವಿಚಾರವನ್ನು 'ಬಿಸಿನೆಸ್ ಲೈನ್' ಪತ್ರಿಕೆ ಪ್ರಕಟಿಸಲೋ ಬೇಡವೋ ಎಂಬಂತೆ ವರದಿ (ಮಾರ್ಚ್ 21, 1994) ಮಾಡಿತು. ಬಹುತೇಕ ವಿವಿಧ ಇಲಾಖೆಗಳು ಹಾಗೂ ಖಾಸಗೀ ಕಂಪೆನಿಗಳ ಪೆನ್‌ಷನ್‌ದಾರರ ಉಳಿತಾಯದ ಹಣದ ಜೊತೆ ವಿಮಾ ವ್ಯವಹಾರ ಮಾಡುತ್ತಿದ್ದ ಈ ಕಂಪೆನಿ 1988-90ರ ಅವಧಿಯಲ್ಲಿ 8.2 ಶತಕೋಟಿ ಡಾಲರ್ ನಷ್ಟ ಅನುಭವಿಸಿದರೆ, 1990-91ರ ಸಾಲಿನಲ್ಲಿ 3 ಶತಕೋಟಿ ಡಾಲರ್‌ನಷ್ಟು ನಷ್ಟ ಅನುಭವಿಸಿತು. ಮುಂದಿನ ಕೆಲವೇ ತಿಂಗಳುಗಳಲ್ಲಿ ತನ್ನ ಲಕ್ಷಾಂತರ ಪಾಲಿಸಿದಾರರಿಗೆ ಅದು ವಿದಾಯ ಹೇಳಿತು.

ಪಾಲಿಸಿದಾರರಿಗೆ ಮೋಸ ಮಾಡಿದ ತಪ್ಪಿಗಾಗಿ ಬ್ರಿಟನ್ನಿನ ಇತರ ವಿಮಾ ಕಂಪೆನಿಗಳಾದ ಲಂಡನ್ ಎಂಡ್ ಮ್ಯಾಂಚೆಸ್ಟರ್, ಕ್ಯಾನನ್, ಜನರಲ್ ಆಕ್ಸಿಡೆಂಟ್ ಮತ್ತು ನಾರ್‌ವಿಚ್ ಯೂನಿಯನ್‌ಗಳಿಗೆ ತಲಾ 50,000 ಪೌಂಡುಗಳ ಜುಲ್ಮಾನೆ ವಿಧಿಸಲಾಯಿತು. ಗಾರ್ಡಿಯನ್ ರಾಯಲ್ ಎಕ್ಸ್‌ಚೇಂಜ್ ಎಂಬ ಕಂಪೆನಿಯಂತೂ 1 ಲಕ್ಷ ಪೌಂಡ್ ಜುಲ್ಮಾನೆ ಕಟ್ಟಿ ದಾಖಲೆ ಸ್ಥಾಪಿಸಿತು. (ಈ ಜುಲ್ಮಾನೆಗೆ ಹಣವಾದರೂ ಎಲ್ಲಿಂದ ಬರಬೇಕು?

ಪಾಲಿಸಿದಾರರು ತುಂಬಿದ ವಿಮಾ ಕಂತುಗಳಿಂದ ಅಲ್ಲವೆ?) ಈಗಾಗಲೇ ಬ್ರಿಟನ್ನಿನಲ್ಲಿ ಈಗಲ್ ಸ್ಟಾರ್, ಜಿ.ಆರ್.ಇ. ರಾಯಲ್, ಕಮರ್ಷಿಯಲ್ ಯೂನಿಯನ್‌ನಂತಹ ಕಂಪೆನಿಗಳು ದಿವಾಳಿಯೇಳಲು ದೌಡಾಯಿಸುತ್ತಿವೆ.

ಇಂತಹ ಅಭೂತಪೂರ್ವ ವಿಮಾಕ್ಷೇತ್ರದ ಸಾಧನೆಗಳ ಹಿನ್ನೆಲೆಯಿಟ್ಟುಕೊಂಡು ಬ್ರಿಟನ್ನಿನ ಮಾಜಿ ಪ್ರಧಾನಿ ಜಾನ್ ಮೇಜರ್ 1997ರ ಜನವರಿ 9ರಂದು ಭಾರತಕ್ಕೆ ಭೇಟಿಕೊಟ್ಟಿದ್ದರು. ಈ ಸಂದರ್ಭದಲ್ಲಿ ತಮ್ಮೊಡನೆ ಕಮರ್ಷಿಯಲ್ ಯೂನಿಯನ್, ಈಗಲ್ ಸ್ಟಾರ್ ಹೋಲ್ಡಿಂಗ್ (ಬ್ರಿಟಿಷ್ ಅಮೆರಿಕನ್ ತಂಬಾಕು ಸಂಸ್ಥೆಯ ವಿಮಾ ವಿಭಾಗ), ಪ್ರುಡೆನ್ಶಿಯಲ್ ಮತ್ತು ಸನ್ ಅಲಿಯೆನ್ಸ್ ಎಂಬ ಕಂಪೆನಿಗಳ ಛೇರ್‌ಮನ್‌ಗಳನ್ನು ಕರೆತಂದಿದ್ದರು. ಭಾರತದ ವಿಮಾಕ್ಷೇತ್ರವನ್ನು ಖಾಸಗೀಕರಣಗೊಳಿಸಿ ಎಂದು ಆಗಿನ ದೇವೇಗೌಡರ ಸರ್ಕಾರದ ಮೇಲೆ ಒತ್ತಡ ತರುವುದೇ ಮೇಜರ್‌ರ ಭೇಟಿಯ ಪ್ರಮುಖ ಉದ್ದೇಶವಾಗಿತ್ತು. ಮುಳುಗುತ್ತಿರುವ ಬ್ರಿಟಿಷ್ ಕಂಪೆನಿಗಳಿಗೂ ಭಾರತೀಯ ಪಾಲಿಸಿದಾರ ಆಪದ್ಬಾಂಧವನಾಗಿ ಕಂಡಿದ್ದರೆ ಆಶ್ಚರ್ಯವೇನಿಲ್ಲ.

### ಜನಪರ ಸಂಸ್ಥೆಗಳು

*ಜೀವ ವಿಮೆ (ಎಲ್ಐಸಿ) 1956ರಲ್ಲಿ ಮತ್ತು ಸಾಮಾನ್ಯ ವಿಮೆ (ಜಿ.ಐ.ಸಿ.) 1971ರಲ್ಲಿ ರಾಷ್ಟ್ರೀಕೃತಗೊಂಡವು. ಅನಂತರ ಅವುಗಳ ಆರ್ಥಿಕ ಬೆಳವಣಿಗೆ ಗಮನಾರ್ಹವಾದುದಾಗಿದೆ. ಕೇವಲ 5 ಕೋಟಿ ರೂ. ಬಂಡವಾಳದೊಂದಿಗೆ ಎಲ್ಐಸಿ ಕಾರ್ಯಾರಂಭ ಮಾಡಿತು. ಆದರೆ ಇವತ್ತು ಅದು ತನ್ನ ಮೂಲಧನದ 200 ಪಟ್ಟು ಹಣವನ್ನು ಡಿವಿಡೆಂಡ್ ರೂಪದಲ್ಲಿ ಸರ್ಕಾರಕ್ಕೆ ಹಿಂದಿರುಗಿಸಿದೆ. ಕಾರ್ಪೊರೇಟ್ ವಲಯದಲ್ಲಿ ಅತಿ ಹೆಚ್ಚು ಆದಾಯತೆರಿಗೆ ಪಾವತಿಸುವ ಅತಿದೊಡ್ಡ ಸಂಸ್ಥೆ ಎಂಬ ಖ್ಯಾತಿ ಎಲ್ಐಸಿಯದು. ಪಾಲಿಸಿದಾರರಿಗೆ ದಾವೆ (ಕ್ಲೇಮ್) ಇತ್ಯರ್ಥಗೊಳಿಸುವ ಎಲ್ಐಸಿಯ ಕಾರ್ಯಕ್ಷಮತೆ ಶೇ. 95ರಷ್ಟಿದ್ದರೆ, ಜಿಐಸಿಯದು ಶೇ. 75. ಜಾಗತಿಕ ಖಾಸಗೀ ಕಂಪೆನಿಗಳು ಇತ್ಯರ್ಥಗೊಳಿಸುವ ದಾವೆಗಳ ಸರಾಸರಿ ಪ್ರಮಾಣ ಕ್ರಮವಾಗಿ ಶೇ. 65 ಮತ್ತು ಶೇ. 40. ದಾವೆ ಇತ್ಯರ್ಥದಲ್ಲಿ ಜಗತ್ತಿನಲ್ಲೆ ಅತ್ಯಂತ ವಿಶ್ವಸನೀಯ ಸಂಸ್ಥೆ ಎಂಬ ಖ್ಯಾತಿಯೂ ಎಲ್ಐಸಿಯದು.*

*ಎಲ್ಐಸಿ ಮತ್ತು ಜಿ.ಐ.ಸಿ.ಗಳಿಗೆ ಸಾಮಾಜಿಕ ಜವಾಬ್ದಾರಿಗಳಿವೆ. ವಿದ್ಯುತ್ ತಯಾರಿಕೆ ಮತ್ತು ಸರಬರಾಜು, ಗೃಹ, ನೀರು ಸರಬರಾಜು, ರಸ್ತೆ ಸಾರಿಗೆ ಮತ್ತು ನಿರ್ಮಾಣ, ಕೈಗಾರಿಕೆ, ಸಹಕಾರಿ ಸಂಸ್ಥೆಗಳು, ನಿರ್ಮಾಣ ಪ್ರಾಧಿಕಾರಗಳು, ಮುನ್ಸಿಪಾಲಿಟಿ ಮುಂತಾದ ಕಡೆ ಅವು ಹಣ ಹೂಡಿವೆ. ಈ ಕ್ಷೇತ್ರಗಳಲ್ಲಿ 1957ರಲ್ಲಿ ಎಲ್ಐಸಿ ಹೂಡಿದ ಹಣ 225 ಕೋಟಿ ರೂಗಳಾಗಿದ್ದರೆ, ಆ ಪ್ರಮಾಣ 1999ರಲ್ಲಿ 98,003 ಕೋಟಿ ರೂಗಳು! ದೇಶದಾದ್ಯಂತ 507 ಜಿಲ್ಲಾ ಪರಿಷತ್‌ಗಳಿಗೆ ಹಾಗೂ 23 ರಾಜ್ಯಗಳಲ್ಲಿ ಎಲ್ಐಸಿ ಅಭಿವೃದ್ಧಿ ಯೋಜನೆಗಳಿಗೆ ಹಣ ನೀಡಿದೆ. ಪಂಚವಾರ್ಷಿಕ ಯೋಜನೆಗಳಿಗೆ ಅದು ಕೋಟ್ಯಾಂತರ ಧನಸಹಾಯ ಒದಗಿಸಿದೆ.*

*ಸಾಮಾನ್ಯ ಪಾಲಿಸಿದಾರರಲ್ಲದೆ ಕೋಟ್ಯಾಂತರ ಕೃಷಿ ಕಾರ್ಮಿಕರು, ಕರಕುಶಲಗಾರರು, ಕಸುಬುದಾರರು, ಭೂರಹಿತ ಕೃಷಿಕರು ಮತ್ತು ಗ್ರಾಮಾಂತರ ಅಭಿವೃದ್ಧಿ ಯೋಜನೆಯ ಫಲಾನುಭವಿಗಳಿಗೆ ಎಲ್ಐಸಿ ಉಚಿತ ವಿಮಾ ಭದ್ರತೆಯನ್ನು ಕೇಂದ್ರ ಸರ್ಕಾರದ ಪ್ರೋತ್ಸಾಹದ ಮೇರೆಗೆ ಒದಗಿಸುತ್ತಿದೆ.*

*ಎಲ್ಐಸಿ ಸಾಧಿಸುವ ಮಿಗುತಾಯದ ಬಹುಭಾಗ ಆಪತ್‌ಕಾಲೀನ ಜೀವನಿಧಿಗೆ ಹರಿದುಹೋಗುತ್ತದೆ. 1957ರಲ್ಲಿ ಎಲ್ಐಸಿಯ ಜೀವನಿಧಿ 410 ಕೋಟಿ ಇತ್ತು. 1999ರ ವೇಳೆಗೆ ಅದು 1,27,389 ಕೋಟಿ ರೂಗಳಾಗಿದೆ. ಎಲ್ಐಸಿಯ ಒಟ್ಟು ಆಸ್ತಿಯ ಮೌಲ್ಯ 1,32,705 ಕೋಟಿ ರೂಗಳು. ಇಷ್ಟು ಸಂಪದ್ಭರಿತ ಸಂಸ್ಥೆಯಾದರೂ ಕಳೆದ ನಾಲ್ಕು ದಶಕಗಳಲ್ಲಿ ಎಲ್ಐಸಿಯಲ್ಲಿ ಯಾವುದೇ ರೀತಿಯ ಆರ್ಥಿಕ ಹಗರಣಗಳು ಜರುಗಿಲ್ಲ. ಪಾಲಿಸಿ ಸೇವೆಯಲ್ಲಿ ಲಂಚ, ರುಷುವತ್ತುಗಳಿಗೆ ಸ್ಥಾನವಿಲ್ಲ. ತಾವೂ ದೃಢವಾಗಿದ್ದು, ದೇಶದ ಆರ್ಥಿಕತೆಯನ್ನು ದೃಢವಾಗಿಸುವಲ್ಲಿ ಎಲ್ಐಸಿ ಮತ್ತು ಜಿ.ಐ.ಸಿ.ಗಳು ಮಹತ್ತರ ಪಾತ್ರ ವಹಿಸಿವೆ.*

*ವಿದೇಶಿ ಕಂಪೆನಿಗಳು ಇವುಗಳಲ್ಲಿ ಯಾವ ಜವಾಬ್ದಾರಿ ನಿರ್ವಹಿಸಬಹುದೆಂದು ನಿರೀಕ್ಷಿಸಬೇಕು?*

### ಜನರಿಂದ ಮರೆಮಾಚಿದ್ದು

*ಇದೀಗ ಲೋಕಸಭೆಯಲ್ಲಿ ಅಂಗೀಕಾರ ಪಡೆದ ಮಸೂದೆಯ ಪ್ರಕಾರ, ವಿಮಾ ಕ್ಷೇತ್ರದಲ್ಲಿ ಶೇ 26ರಷ್ಟು ಬಂಡವಾಳವನ್ನು ತೊಡಗಿಸಲು ಖಾಸಗಿಯವರಿಗೆ ಬಹುರಾಷ್ಟ್ರೀಯ ಕಂಪೆನಿಗಳಿಗೆ ಮತ್ತು ಅನಿವಾಸಿ ಭಾರತೀಯರಿಗೆ ಅವಕಾಶ ನೀಡಲಾಗುತ್ತದೆ. ಅಂದರೆ ಹತ್ತು ವರ್ಷಗಳಲ್ಲಿ ಭಾರತದ ಬಂಡವಾಳವನ್ನು ಶೇ 26ಕ್ಕೆ ಇಳಿಸಬೇಕು. ಎಂದರೆ, ಭಾರತದ ವಿಮಾಕ್ಷೇತ್ರದ ಶೇ 74 ರಷ್ಟು ಬಂಡವಾಳ ವಿದೇಶಿ ಕಂಪೆನಿಗಳ ಕೈವಶವಾಗುತ್ತದೆ. ಈ ವಿಚಾರವನ್ನು ಸರಕಾರ ಜನರಿಂದ ಮರೆಮಾಚುತ್ತಿದೆ!*

ಈ ಮಧ್ಯೆ (1997ರ ಏಪ್ರಿಲ್‌ನಲ್ಲಿ) ಜಪಾನಿನಲ್ಲಿ ಸುಪ್ರಸಿದ್ಧ ನಿಸಾನ್ ಮೋಟಾರ್ ಮತ್ತು ಹಿಟಾಚಿ ಗುಂಪಿನ ನಿಸ್ಸಾನ್ ಮ್ಯುಚುವಲ್ ಫಂಡ್ ಎಂಬ ವಿಮಾ ಕಂಪೆನಿ ಭಾರತಕ್ಕೆ ಬರುವ ಮೊದಲೇ ದಿವಾಳಿಯೆದ್ದು ನೆಲಕಚ್ಚಿತು. ತಾಯಿಯ ಗರ್ಭದಿಂದ ಹೊರಬರುವ ಮುನ್ನವೇ ಕೂಸು ಕೊನೆಯುಸಿರೆಳೆದಂತೆ. ಒಂದೇ ತಿಂಗಳಲ್ಲಿ ನಾಲ್ಕು ವಿಮಾ ಕಂಪೆನಿಗಳು ನಷ್ಟ ಘೋಷಿಸಿಕೊಂಡು ದಿವಾಳಿಯಾದ ದಾಖಲೆಯೂ ಜಪಾನಿಗೆ ಸಂಬಂಧಿಸಿದೆ. ಪ್ರತಿಯೊಂದಕ್ಕೂ ಜಪಾನಿಯರನ್ನು ಮಾದರಿಯಾಗಿಸಿಕೊಳ್ಳುವ ಕೆಲವು ಸಿನಿಕ ಭಾರತೀಯ ಮನಸ್ಸುಗಳಿಗೆ ದಿವಾಳಿಯೇಳುವ ಪ್ರಕ್ರಿಯೆ ಜಪಾನಿನಲ್ಲೂ ವ್ಯಾಪಕವಾಗಿದೆ ಎಂದು ಅರ್ಥವಾಗಬೇಕು.

### ಲಾಭಗಳಿಕೆ ಹೇಗೆ?

ಖಾಸಗಿ ವಿಮಾ ಕಂಪೆನಿಗಳು ಭಾರತದ ವಿಮಾಕ್ಷೇತ್ರ ಹೇಗೆಂದರೆ ಹಾಗೆ ಹಣ ಹೂಡಲು, ಹಣ ಮಾಡಲು, ಕುದುರೆ ಜೂಜಿನಂತಿದೆ ಎಂದು ಭಾವಿಸಿರುವಂತಿದೆ. ಭಾರತೀಯ ಪಾಲಿಸಿದಾರರು ಪಣಕ್ಕೊಡ್ಡಲ್ಪಡುವ ರೇಸಿನ ಕುದುರೆಗಳಂತೆ ಕಾಣುತ್ತಿದ್ದಾರೆ. ಖಾಸಗಿ ವಿಮಾ ಕಂಪೆನಿ (ವಿದೇಶಿಯಿರಲಿ, ದೇಶೀಯವಿರಲಿ)ಗಳ ವಿಮಾ ವ್ಯವಹಾರದ ವೈಖರಿ ಹೇಗೆ ಗೊತ್ತೆ? ಒಂದು ಸಣ್ಣ ಉದಾಹರಣೆ: ಭಾರತದಲ್ಲಿ ತಾವು ಲಾಭಗಳಿಸಲಾರಂಭಿಸಲು ಕನಿಷ್ಠ ಏಳು ವರ್ಷಗಳಾದರೂ ಬೇಕು ಎಂಬುದು ವಿದೇಶಿ ಕಂಪೆನಿಗಳ ಲೆಕ್ಕಾಚಾರ. ಮೊದಮೊದಲು ಪ್ರೀಮಿಯಂ ದರವನ್ನು ಅತ್ಯಂತ ಕಮ್ಮಿ ಮಟ್ಟಕ್ಕಿಳಿಸಿ ಪ್ರತಿಸ್ಪರ್ಧಿ ಕಂಪೆನಿಗಳು ಕುಸಿಯುವಂತೆ ಮಾಡಿ ಮಾರುಕಟ್ಟೆಯನ್ನು ವಶಪಡಿಸಿಕೊಳ್ಳುವುದು. ಮಾರುಕಟ್ಟೆ ತನ್ನ ವಶಕ್ಕೆ ಬಂದಂತೆ ಪ್ರೀಮಿಯಂ ದರಗಳನ್ನು ವಿಪರೀತ ಏರಿಸಿ ಲಾಭಮಾಡಿಕೊಳ್ಳುವುದು ಅವುಗಳ ಮೂಲಭೂತ ದಂಧೆ. ಮೊದಲ ವರ್ಷಗಳಲ್ಲಿ ಎಷ್ಟೇ ನಷ್ಟವಾದರೂ ಅವು ತಲೆಕೆಡಿಸಿಕೊಳ್ಳುವುದಿಲ್ಲ. ನ್ಯೂಯಾರ್ಕ್ ಲೈಫ್ ಕಂಪೆನಿಯ ವಿಲಿಯಂ ಯೆಲ್ವರ್ಟನ್ ''ನಾವು ಆರಂಭದಲ್ಲಿ ಲಾಭದ ಕನಸು ಕಾಣುವುದಿಲ್ಲ. ಹಲವು ವರ್ಷ ಕಾದರೆ ಲಾಭ ತಾನಾಗೇ ಬರುತ್ತದೆ'' ಎನ್ನುತ್ತಾರೆ. ಲಾಭ 'ತಾನಾಗೇ' ಬರುವ ವಿಧಾನ ನಿಮಗೀಗಾಗಲೇ ಗೊತ್ತಾಗಿದೆಯಲ್ಲವೆ ? ಎ.ಐ.ಜಿ. ಕಂಪೆನಿಯ ಜಾನ್ ಚೆಂಬ್ಯೂ ಹೇಳುವ ಪ್ರಕಾರ ಅವರ ಕಂಪೆನಿ ಮೊದಲು 'ಕಂಪೆನಿವಲಯ'ದ ವಿಮೆಯ ಮೇಲೆ ಗುರಿಯಿಡುತ್ತದೆ. ನಂತರ ವೈಯಕ್ತಿಕ ವಿಮಾ ವ್ಯವಹಾರ ಪಡೆಯಲು ಪ್ರಯತ್ನಿಸುತ್ತದೆ. ಈಗ ಸ್ಪಷ್ಟವಾಗಿರಬೇಕು: ಪಾಲಿಸಿದಾರನ ಹಣಕ್ಕೆ ಭದ್ರತೆ ನೀಡುವುದಕ್ಕಿಂತ ಲಾಭವೇ ಈ ಕಂಪೆನಿಗಳಿಗೆ ಎಷ್ಟು 'ಅರ್ಥ'ಪೂರ್ಣವೆಂದು.

ಈಗಿನ ರಾಷ್ಟ್ರೀಕೃತ ವಿಮಾಕ್ಷೇತ್ರದಲ್ಲಿ ವಿಮಾ ಕಾಯಿದೆಯ ಪ್ರಕಾರ ಪಾಲಿಸಿದಾರ ತುಂಬುವ ವಿಮಾಕಂತಿಗೆ, ಮತ್ತು ಅವನು ಇಳಿಸಿದ ಪ್ರತಿ ವಿಮೆಗೆ ಭಾರತದ ರಾಷ್ಟ್ರಪತಿಯವರು 'ಶೂರಿಟಿ' ಆಗಿರುತ್ತಾರೆ. ಇಂತಹ ಖಾತರಿ ವಿಮಾ ಖಾಸಗೀಕರಣದ ನಂತರ ಇರುವುದಿಲ್ಲ. ಪಾಲಿಸಿದಾರರ ತಲೆಗೆ ಅವರದೇ ಕೈ ಆಗುತ್ತದೆ. ಅವರಿಗೆ ಮೋಸವಾದರೆ ಸರ್ಕಾರ ತಲೆ ಕೆಡಿಸಿಕೊಳ್ಳುವುದಿಲ್ಲ. ತನ್ನ ಹೊಣೆಗಾರಿಕೆಗಳಿಂದ ಮುಕ್ತವಾಗಿ ಖಾಸಗಿ ಕಂಪೆನಿಗಳ ಅಸಂಖ್ಯ ಸ್ವರೂಪದ ಕಪಟ ನಾಟಕಗಳಿಗೆ ಪರವಾನಗಿ ನೀಡಲು ಶತಾಯಗತಾಯ ವಿಮಾ ಖಾಸಗೀಕರಣ ಸಾಧಿಸುತ್ತೇನೆ ಎಂದು ಭಾರತ ಸರ್ಕಾರ ಹೆಜ್ಜೆಯಿಡುತ್ತಿದೆ. ಕನ್ನ ಕೊರೆವ ಕಳ್ಳರಿಗೆ ಪೂರ್ಣಕುಂಭ ಸ್ವಾಗತ ನೀಡಲು ತಯಾರಾಗಿದೆ.

ಕೆ. ಎಸ್. ರವಿಕುಮಾರ್
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩ ೨೦೧




**ಕಳಚಿದ ಕೊಂಡಿ** (ಕಾದಂಬರಿ) ಚಿನುವ ಅಚಿಬೆ

*ಅನು: ಪ್ರಮೋದ ಮುತಾಲಿಕ*

**ಪುಟ: 174** **ಬೆಲೆ : ರೂ. 45**

**ಕುಸುಮ ಪ್ರಕಾಶನ**, 629, ಮಂದಾರ, 68ನೇ ಅಡ್ಡ ರಸ್ತೆ, ಕುಮಾರಸ್ವಾಮಿ ಬಡಾವಣೆ, ಬೆಂಗಳೂರು-78.

*ಈ ಶತಮಾನದ ಅತಿ ಮಹತ್ವದ ವಿಶ್ವ ಸಾಹಿತಿಗಳಲ್ಲಿ ಒಬ್ಬರಾದ ಚಿನುವ ಅಚಿಬೆಯ ಖ್ಯಾತ ಕಾದಂಬರಿಯ ಕನ್ನಡ ರೂಪಾಂತರ. ವಸಾಹತುಶಾಹಿಯು ಆಫ್ರಿಕಾಕ್ಕೆ ಪ್ರವೇಶಿಸಿದಾಗ, ಸಂಪ್ರದಾಯ ಮತ್ತು ಆಧುನಿಕತೆಗಳ ನಡುವೆ ಒಂದು ತೀವ್ರವಾದ ಸಂಘರ್ಷ ಏರ್ಪಟ್ಟಿತು. ಆ ಸಂಕ್ರಮಣ ಕಾಲದ ದಟ್ಟವಾದ ಅನುಭವಗಳ ಚಿತ್ರಣ ಈ ಕಾದಂಬರಿಯಲ್ಲಿದೆ.*



**ಭಾರತೀಯರಿಗೆ ಭಗವಂತರೆಷ್ಟು ?**

*(ಲೇಖನ ಸಂಗ್ರಹ) ಸದಾಶಿವಯೋಗಿ*

**ಪುಟ: 176** **ಬೆಲೆ : ರೂ. 60**

**ಶ್ರೀ ಶಿವಾನಂದ ಯೋಗಾಶ್ರಮ** ಹಂಪಿ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ - 583 211

*ದೇವರಿಗೆ ಸಂಬಂಧಿಸಿದಂತೆ ಪುರಾಣಗಳಲ್ಲಿ, ಇತರ ಗ್ರಂಥಗಳಲ್ಲಿ ಬರುವ, ನಾವು ಈವರೆಗೆ ನಂಬಿಕೊಂಡಿರುವ ಹಲವು ವಿಷಯಗಳ ಬಗ್ಗೆ ಚಿಂತಿಸುವಂತೆ ಮಾಡುವ ಲೇಖನಗಳ ಸಂಗ್ರಹ. ನಮಗೆ ಈಗಿರುವ ದೇವರು, ದೇವಸ್ಥಾನಗಳು ಸಾಕಲ್ಲವೆ? ನಮ್ಮ ಊರಿನಲ್ಲಿ ಶಾಲೆ ಇದೆಯೆ, ಶಿಕ್ಷಕರಿದ್ದಾರೆಯೇ? ಬಾವಿಗಳಿವೆಯೆ? ರಸ್ತೆ ಇದೆಯೆ ಎಂದು ಆಲೋಚನೆಗೆ ತೊಡಗಿಸುವ ಲೇಖನಗಳು.*

**ಬಾಬಾ ಆಮಟೆ** (ಜೀವನ ಚರಿತ್ರೆ)

*ಡಾ|| ಭ.ಗ. ಬಾಪಟ ಅನು: ವಿರೂಪಾಕ್ಷ ಕುಲಕರ್ಣಿ*

**ಪುಟ: 208** **ಬೆಲೆ : ರೂ. 65**

**ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು - 560 001.




*ನಮ್ಮ ದೇಶದಲ್ಲಿ ಧರ್ಮೋದ್ಧಾರಕರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ತಮ್ಮ ಜಾತಿಯ ಜನರನ್ನಷ್ಟೇ ಉದ್ಧಾರ ಮಾಡಲು ಟೊಂಕ ಕಟ್ಟಿರುವ ಮಠಾಧಿಪತಿಗಳಿದ್ದಾರೆ. ಶ್ರೀಮಂತ ಶಿಷ್ಯರನ್ನು ಓಲೈಸುವ ಬಾಬಾಗಳಿದ್ದಾರೆ. ಆದರೆ, ಕುಷ್ಠರೋಗಿಗಳ ಸೇವೆಗೆ ನಿಂತವರು ಬಹಳ ವಿರಳ. ಅಂಥವರಲ್ಲಿ ಬಾಬಾ ಆಮಟೆಯವರು ಎದ್ದು ಕಾಣಸುವಂಥವರು. ಕುಷ್ಠ ರೋಗಿಗಳಿಗೆ ಹೊಸ ಬಾಳು ನೀಡುವ ನಿಟ್ಟಿನಲ್ಲಿ ತಮ್ಮ ಇಡೀ ಜೀವನವನ್ನು ಮುಡಿಪಾಗಿಟ್ಟಿರುವ ಬಾಬಾ ಆಮಟೆಯವರ ಜೀವನದ ರೋಚಕ ಚಿತ್ರಣ.*



**ಕಲಾವಿದ ಹೆಬ್ಬಾರರ ರೇಖಾಲಾವಣ್ಯ**

*(ಲೇಖನ ಸಂಕಲನ) ವ್ಯಾಸರಾಯ ಬಲ್ಲಾಳ*

**ಪುಟ: 96** **ಬೆಲೆ : ರೂ. 80**

**ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್**, ಎಂಬೆಸಿ ಸೆಂಟರ್, ಬೆಂಗಳೂರು - 560 001.

*ನಮ್ಮ ಹಿರಿಯ ಲೇಖಕರಾದ ಶ್ರೀ ವ್ಯಾಸರಾಯ ಬಲ್ಲಾಳರು ತಮ್ಮ ಆಪ್ತ ಮಿತ್ರರಾದ ಕಲಾವಿದ ಕಟ್ಟಿಂಗೇರಿ ಕೃಷ್ಣ ಹೆಬ್ಬಾರರ, ಅವರ ಕಲಾಸಂಪುಟಗಳ ಕುರಿತ ಆಗಾಗ ಬರೆದಿರುವ ಲೇಖನಗಳ ಸಂಗ್ರಹ. ಈ ಸಂಕಲನದಲ್ಲಿ ಹೆಬ್ಬಾರರ ಹಲವು ಅಪೂರ್ವ ರೇಖಾಚಿತ್ರಗಳು ಮತ್ತು ವರ್ಣಚಿತ್ರಗಳಿವೆ. ಇದು ಹೆಬ್ಬಾರರನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ ಒಂದು ಪ್ರಯತ್ನ. ಶ್ರೀ ಬಲ್ಲಾಳರ ಅಭಿನಂದನ ಸಮಾರಂಭದಂದು ಬಿಡುಗಡೆಯಾಗಿದೆ.*



ಕಳೆಯಬೇಕಿದೆ ನಿಮ್ಮ ಜೊತೆಯಲಿ

**ಒಂದು ಶ್ಯಾಮಲ ಸಂಜೆ** (ಕಥಾಸಂಕಲನ) ನೇಮಿಚಂದ್ರ

ಪುಟ: 130 ಬೆಲೆ : ನಮೂದಿಸಿಲ್ಲ

*ನೇಮಿಚಂದ್ರ ಅವರು ಕಳೆದ ನಾಲ್ಕೈದು ವರ್ಷಗಳ ಅವಧಿಯಲ್ಲಿ ಬರೆದಿರುವ ಏಳು ವಿಭಿನ್ನ ಮಾದರಿಯ ಸಣ್ಣ ಕಥೆಗಳ ಸಂಕಲನ. ಬದುಕನ್ನು ಹೊಸ ದೃಷ್ಟಿಯಿಂದ ನೋಡುವ, ಸಮಸ್ಯೆಗಳು ಎದುರಾದಾಗ ಅವನ್ನು ತಮ್ಮದೇ ರೀತಿಯಲ್ಲಿ ಎದುರಿಸುವ ಮಹಿಳೆಯರದೇ ಈ ಕಥೆಗಳಲ್ಲಿ ಮುಖ್ಯ ಪಾತ್ರ. ವಿಶಿಷ್ಟ ಶೈಲಿ.*

**ಗಾಂಧಿ ಬಂದ** (ಕಾದಂಬರಿ) ಎಚ್. ನಾಗವೇಣಿ

ಪುಟ: 366 ಬೆಲೆ : ರೂ. 130

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103.



*ಬಹಳ ವರ್ಷಗಳ ಹಿಂದೆ ತುಳು ಜಿಲ್ಲೆಗೆ ಗಾಂಧೀಜಿ ಭೇಟಿಕೊಟ್ಟರು. ಆ ಸಂಭ್ರಮವನ್ನು ಬಣ್ಣಿಸುತ್ತಲೇ, ಗಾಂಧಿಯ ಬರವು ಅಲ್ಲಿನ ಜನರ ಬದುಕಿನ ಮೇಲೆ ಮಾಡಿದ ಪವಾಡದಂತ ಪರಿಣಾಮವನ್ನು, ತುಳು ನಾಡಿನ ಸಂಸ್ಕೃತಿಯೊಂದಿಗೆ ಬೆಸುಗೆ ಹಾಕುವ ಪ್ರಯತ್ನ.*

**ಹನಿಕೇತನ** (ಚುಟುಗ್ಗವನಗಳ ಸಂಗ್ರಹ)

*ಎಚ್. ಡುಂಡಿರಾಜ್*

**ಪುಟ: 56** **ಬೆಲೆ : ರೂ. 22**

**ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು - 560 001.



*ಚೂಪು ಮೊನೆಯ ಲೇಖಣಿ. ಪಕ್ಕೆಗೆ ಚುಚ್ಚಿ ಪಕಪಕ ನಗಿಸುವಂಥದ್ದು. ಈ ಚುಟುಕಗಳಿಗೆ ಹೊಂದಿಕೆಯಾಗುವ ನಗೆ ಚಿತ್ರಗಳಿವೆ.*

*ಇಂದ್ರ ಪುನಃ ಬಂದ*
*ಕೊಕ್ಕಕ್ಕೊ ಅಂದ*
*ಈ ಸಲ ಜಾಣೆ ಅಹಲ್ಯ*
*ಮಾಡಿದಳು ಕೋಳಿ ಪಲ್ಯ*




**ಭೂಗೋಳ ಪ್ರಶ್ನೆ** (ಕವನ ಸಂಕಲನ)

*ಕೃಷ್ಣನಾಯಕ ಹಿಚಕಡ*

**ಪುಟ: 58** **ಬೆಲೆ : ರೂ. 35**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - 581 314.

*ಕವನ ಬರೆಯಬೇಕೆಂದರೆ...*
*ಅರುಣೋದಯದ ಹೊಂಗಿರಣದ ಹೊಳಪಿಗೆ*
*ಮಾಗಿಯ ಮುಂಜಾವಿನ ಮಂಜು*
*ಪೊರೆಕಟ್ಟಿದ ಪರಿಯ ಕುರಿತು*

*ಕಾವ್ಯ ಬರೆಯಬೇಕೆಂದರೆ - , ಚಾವಣಿ ಇಲ್ಲದೆ, ಕೌದಿ ಕಾಣದ,*
*ಚಿಂದಿಯುಟ್ಟವರ ನಡುಕದ ನರಳುವಿಕೆಯ . ಕಣ್ಣೀರ ಹನಿಯೊಡೆಯುತ್ತದೆ.*

# ಸಂಗೀತ ಸಂವಾದ

ಎಪ್ಪತ್ತರ ದಶಕದ ಕೆಲವು Off beat ಸಿನಿಮಾಗಳನ್ನು ನೋಡಿದ್ದವರಿಗೆ ಭಾಸ್ಕರ್ ಚಂದಾವರ್ಕರ್ ಎಂಬ ಹೆಸರು ಪರಿಚಿತವಾದುದು. ಆದರೆ ಕಳೆದ ಐದಾರು ವರ್ಷಗಳಿಂದ ಹೆಗ್ಗೋಡಿನ ಸಂಸ್ಕೃತಿ ಶಿಬಿರದಲ್ಲಿ ಈ ವ್ಯಕ್ತಿಯನ್ನು ಹತ್ತಿರದಿಂದ ಕಾಣುವ-ಕೇಳುವ ಅವಕಾಶ ಸಿಕ್ಕಿದ್ದು ನನ್ನ ಅದೃಷ್ಟವೆಂದೇ ಹೇಳಬಯಸುತ್ತೇನೆ. ಈತ ಸಂಗಿತ, ಸಾಹಿತ್ಯ, ಸಿನೆಮಾ, ರಂಗಭೂಮಿ, ಸಮಾಜಶಾಸ್ತ್ರ ಭಾಷಾಶಾಸ್ತ್ರ ಅರ್ಥಶಾಸ್ತ್ರ ತತ್ವಶಾಸ್ತ್ರ ರಾಜಕೀಯ, ಇತಿಹಾಸ ಮುಂತಾದ ಕ್ಷೇತ್ರಗಳಲ್ಲಿ ನಿರಾಯಸವಾಗಿ ವ್ಯವಹರಿಸಬಲ್ಲ ಅಸಾಧಾರಣ ಪ್ರತಿಭೆ.

ಗುರು ರವಿಶಂಕರರ ಬೆನ್ನು ಹತ್ತಿ ಭಾರತೀಯ ಸಂಗೀತವನ್ನು ಪಶ್ಚಿಮಕ್ಕೆ ದಾಟಿಸುವ 'ದುಸ್ಸಾಹಸ' ಮುಗಿಸಿ ತಾಯ್ನಾಡಿಗೆ ಬಂದಾಗ ಇಲ್ಲೂ ಆ ಬಗೆಯ ಆಸಕ್ತರಿದ್ದಾರೆ ಎಂದು ಗೊತ್ತಾಗಿ ತನಗೆ ತಿಳಿದಿದ್ದನ್ನು ಹೇಳುತ್ತಾ, ಸಿತಾರ್ ನುಡಿಸುತ್ತಾ ಸಂಗೀತ ಸಂವಾದ ನಡೆಸಿಕೊಂಡು ಬಂದಿದ್ದಾರೆ.

ಸಂಗೀತವನ್ನು ಜನಜೀವನದಿಂದ ಪ್ರತ್ಯೇಕಿಸದೇ, ದಿನನಿತ್ಯದ ರಾಜಕಾರಣ, ಟೆಕ್ನಾಲಜಿ, ಕನ್‌ಸ್ಯೂಮರಿಸಂ, ಪುರಾಣಗಳು, ಪವಾಡಗಳು, ಝುಂಝೂಟಗಳು ಮುಂತಾದ ಸಂಗತಿಗಳ ನಡುವಿನಿಂದ ಬೇರ್ಪಡಿಸದೇ, ಸಂಗೀತ ನೀಡುವ ಅನುಭವ ಅಲೌಕಿಕವಾದರೂ ಲೌಕಿಕ ಪ್ರಪಂಚದಲ್ಲಿ ಅನಿವಾರ್ಯವಾಗಿ ವ್ಯವಹರಿಸಬೇಕಾಗುತ್ತದೆ ಎಂಬ ಸತ್ಯ ತಿಳಿದುಕೊಂಡಿರುವ ಭಾಸ್ಕರ್ ಉಳಿದ ಸಂಗೀತಜ್ಞರಿಗಿಂತ ಬೇರೆಯಾಗಿಯೇ ನಿಲ್ಲುತ್ತಾರೆ.

ಹಿಂದೂಸ್ತಾನಿ, ಕರ್ನಾಟಕಿ, ಪಾಶ್ಚಿಮಾತ್ಯ, ಜಾನಪದ ಹಾಗೂ ಅನೇಕ ಬುಡಕಟ್ಟು ಜನಾಂಗಗಳ ಸಂಗೀತದ ಬಗ್ಗೆ ಸ್ಪಷ್ಟವಾದ ಮಾಹಿತಿ ಇರುವ ಈ ವ್ಯಕ್ತಿಯ ಪ್ರಕಾರ, ಸಂಗೀತ ಶಾಸ್ತ್ರದ ಬಗ್ಗೆ ಇರಬೇಕಾದ ತಿಳಿವಳಿಕೆ ಅದನ್ನು ಕೇಳಿ ಖುಷಿಪಡುವ, ಆನಂದಿಸುವ ಹೊತ್ತಿನಲ್ಲಿ ಅಡ್ಡಿಯುಂಟುಮಾಡುವುದಿಲ್ಲ. ಸಮುದಾಯದ ಅಭಿರುಚಿಯನ್ನು ಉತ್ತಮಗೊಳಿಸಲೆಂದೇ ನಿರ್ಮಿತವಾದ ಶಾಸ್ತ್ರವಾದ್ದರಿಂದ ಅದರ ಬಗ್ಗೆ ತಿಳಿವಳಿಕೆಯೂ ಅಗತ್ಯ.

ಸಂಗೀತ ಸಂವಾದದಂಥ ಪುಸ್ತಕದ ಬಗ್ಗೆ ಪರಿಚಯದ ಮಾತುಗಳನ್ನು ಬರೆಯುವುದೂ ಒಂದು ದುಸ್ತರದ ಕೆಲಸವೇ! ಉಪನ್ಯಾಸದ ನಡುನಡುವೆ ಹೆಸರಾಂತ ಸಂಗೀತಗಾರರ 'ಟೇಪ್' ಹಾಕಿಕೊಂಡು ಅದರ ಬಗ್ಗೆ ಮಾತನಾಡುತ್ತಾ ಹೋಗುವ, ಎದುರಾಗುವ ನಾನಾ ರೀತಿಯ ಪ್ರಶ್ನೆಗಳಿಗೆ ಸ್ಪಂದಿಸುತ್ತಾ ಸಾಗುವ ಇವರ ಶೈಲಿ ಸ್ವಲ್ಪ ಹೆಚ್ಚು ಕಡಿಮೆ ಒಂದು ಸಂಗೀತ ಕಛೇರಿ ಇದ್ದಂತೆ! ಭರತ, ಪೈಥಾಗೊರಾಸ್, ಯೂಕ್ಲಿಡ್, ಐನ್‌ಸ್ಟೀನ್ ಮುಂತಾದವರನ್ನೆಲ್ಲ ತನ್ನ ಮಾತಿನ ನಡುವೆ ತಂದು - ನಕ್ಷತ್ರ ಖಚಿತ ಆಕಾಶದ ನಿರಂತರ ಸಂಗೀತ, ವೃತ್ತ, ಪರಿಧಿ, ವ್ಯಾಸಗಳ ಚಿಂತನೆ, ಆಹತ-ಅನಾಹತ, ವರ್ಣ-ನಾದ, ರಾಗ-ತಾಳ-ಲಯಾದಿಗಳ ಬಗ್ಗೆ ನಿರರ್ಗಳವಾಗಿ ಈತ ಮಾತನಾಡಹತ್ತಿದರೆ ಯಾವುದೋ ಯಮನ್ ಕಲ್ಯಾಣದಂತಹ ರಾಗ ನುಡಿಸುತ್ತಾ ಬೆರಗಾಗಿಸುವ ಸ್ವರಪ್ರಸ್ತಾರಗಳನ್ನು ಹೆಣೆಯುತ್ತಿದ್ದಾನೋ ಎನಿಸುತ್ತದೆ.

ಸ್ವರ, ತಾಳ, ಲಯ, ರಾಗ ಮುಂತಾದ ಶಾಸ್ತ್ರೀಯ ವಿಚಾರಗಳನ್ನು ಅವುಗಳ ಸಂಕೀರ್ಣ ಚೌಕಟ್ಟುಗಳಿಂದ ಹೊರತೆಗೆದು ಅತ್ಯಂತ ಲವಲವಿಕೆಯ ದೃಷ್ಟಾಂತಗಳಿಂದ ಮನಮುಟ್ಟುವ ಹಾಗೆ ಮಾಡುತ್ತಾರೆ. ರಾಗಗಳನ್ನು ಅನುಭವಿಸುವ ಕಲೆಯ ಬಗ್ಗೆ ಮಾತನಾಡುವಾಗ ಸಂಗೀತದ ಇಡೀ ಶ್ರವ್ಯಾನುಭವವನ್ನು ದೃಶ್ಯಾನುಭವವನ್ನಾಗಿ ಪರಿವರ್ತಿಸಿ ಹೇಳುವ ರೀತಿಯಂತೂ ಅದ್ಭುತವಾದುದು.

ಕುಮಾರ ಗಂಧರ್ವ, ಅಮೀರ್‌ಖಾನ್, ಡಾಗರ್ ಬಂಧುಗಳು, ಪಲುಸ್ಕರ್, ಮಹಾಲಿಂಗಂ, ಎಂ.ಡಿ.ಆರ್., ಬಾಖ್, ಬಿಥೋವನ್, ಮೊಸಾರ್ಟ್, ಅಲ್ಲಾವುದ್ದೀನ್ ಖಾನ್, ರವಿಶಂಕರ್ ಮುಂತಾದ ಮಹನೀಯರನ್ನು ಕುರಿತ ಘಟನಾವಳಿಗಳು ಮೈನವಿರೇಳಿಸುತ್ತವೆ. ಕೇವಲ ಸಂಗೀತಗಾರರು ಮಾತ್ರವಲ್ಲದೆ, ವಾದ್ಯಗಳನ್ನು ತಯಾರಿಸುವವರ ಶ್ರೇಷ್ಠತೆಯ ಬಗ್ಗೆ ಹೇಳುತ್ತಾ ಆಂಟೋನಿಯೋ ಸ್ಟ್ರಾಡಿವಾರಿಸ್, ಶಾಕೂ ಹಾಕಿ, ಮಾಖನ್ ಲಾಲ್, ಹಿರೇನ್ ರಾಯ್, ನೋದೂ ಮಲ್ಲಿಕ್ ಮುಂತಾದ ಮಹಾನುಭಾವರನ್ನು ಸ್ಮರಿಸುತ್ತಾರೆ.

ಪಾಶ್ಚಿಮಾತ್ಯ ಸಂಗೀತದ ಬಗ್ಗೆ ಪುಟ್ಟ ಪರಿಚಯ ಹಾಗೂ ಬಾಖ್ ಮತ್ತು ಮೊಸಾರ್ಟ್‌ರ ಬಗ್ಗೆ ಚೊಕ್ಕದಾದ ಕೆಲವು ನುಡಿಗಳು ಸೊಗಸಾಗಿವೆ.

ಗ್ಲೋಬಲೈಸೇಶನ್, ಲಿಬರಲೈಸೇಶನ್, ಟೀವಿಗಳ ಮುಖಾಂತರ ನಿರಂತರವಾಗಿ ನಡೆಯುತ್ತಿರುವ ಅಮೆರಿಕನ್ ಹಾವಳಿ, ಟೆಕ್ನಾಲಜಿಯ ರಾಕ್ಷಸೀ ವೇಗ ಇತ್ಯಾದಿಗಳ ಕೃಷ್ಣ ರಂಧ್ರದಲ್ಲಿ ಅನಿವಾರ್ಯವಾಗಿ ಸೆಳೆದು ಹೋಗುತ್ತಿರುವ ನಮ್ಮ ಭವಿಷ್ಯವನ್ನು ''ಸಂಗೀತ ರಸಗ್ರಹಣ ಕುರಿತ ಗಂಭೀರ ಪ್ರಯತ್ನಗಳ ಹಾಗೂ ಮೂಲ ಸೈದ್ಧಾಂತಿಕ ಆಸ್ಥೆಯ ಮೂಲಕ'' ಎದುರಿಸುವ ಸನ್ನಾಹ ಮಾಡಬೇಕೆನ್ನುತ್ತಾರೆ.

ನುಡಿದರೆ ಮುತ್ತಿನ ಹಾರದಂತೆ ನುಡಿಯುವ ಭಾಸ್ಕರ್, ನುಡಿಗಳನ್ನು ಕನ್ನಡಿಸಿರುವ ವೈದೇಹಿ, ಪ್ರಕಟಿಸಿರುವ ಅಕ್ಷರ ಪ್ರಕಾಶನ ಹಾಗೂ ಈ 'ಸಂಗೀತ ಸಂವಾದ'ದಲ್ಲಿ ಮಿಂಚಿ ಮಾಯವಾಗಿರುವ

''ಎಂದರೋ ಮಹಾನುಭಾವಲು ಅಂದರಿಕೀ ವಂದನಮು...''

ವಿಜಯವಾಮನ
ಪ್ರಾಚಾರ್ಯರು, ಕೆ.ಎಚ್.ಬಿ. ಕಾಲನಿ, ಸರ್ಕಾರಿ ಪದವಿಪೂರ್ವ ಕಾಲೇಜು, ಸಾಗರ - [illegible]

## ಸಾದರ ಸ್ವೀಕಾರ

**ಉಳಿವು ಮತ್ತು ಉನ್ನತಿಗಾಗಿ ಜನಸಂಖ್ಯಾ ಶಿಕ್ಷಣ**
*ಕೋಡಿ ರಂಗಪ್ಪ* **ಪು : 408 ಬೆಲೆ : ರೂ. 100**
ಅನುಸೂಯ ಪ್ರಕಾಶನ
ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.

**ಮದುವೆಯ ಗಾದೆಗಳು**
*ಕೋ. ಲ. ರಂಗನಾಥ ರಾವ್* **ಪು:48 ಬೆಲೆ:ರೂ. 15**
ಗುರುರಾಜ ಪ್ರಕಾಶನ
ನಂ. 2, ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್
ವಿಜಯನಗರ, ಬೆಂಗಳೂರು-560 040

**ಸ್ವದೇಶಿ-ಒಂದು ವಿಶ್ಲೇಷಣೆ**
*ಡಾ॥ ಚಂದ್ರ ಪೂಜಾರಿ* **ಪು : 34 ಬೆಲೆ : ರೂ. 5**
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
ಕಮಲಾಪುರ-583 221

**ಚಿಪ್ಪಿನೊಳಗಣ ಜೀವ** (ಒಗಟುಗಳ ಸಂಕಲನ)
*ಗಣಪತಿ ದಿವಾಣ* **ಪು : 104 ಬೆಲೆ : ರೂ. 30**
ದಿವಾಣ ಪ್ರಕಾಶನ, ಎಡನಾರು ಅಂಚೆ, ಕುಂಬಳೆ-671 321

**ಸುರಖಾಬದ ಗರಿಗಳು,** ಮಕ್ಕಳ ಕಥೆಗಳು
*ಹಿಂದಿಮೂಲ : ಡಾ॥ ಹರಿಕೃಷ್ಣ ದೇವಸರೆ*
*ಡಾ॥ ಪಂಚಾಕ್ಷರಿ ಹಿರೇಮಠ* **ಪು:80 ಬೆಲೆ:ರೂ. 25**
ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ
ಬೆಂಗಳೂರು-560 009

**ಬೆಳಕಿನ ಹೆಪ್ಪು ಹಾಕುವ ತವಕ**
(ಕವನ ಸಂಗ್ರಹ)
ಡಾ॥ ಪಂಚಾಕ್ಷರಿ ಹಿರೇಮಠ **ಪು : 72 ಬೆಲೆ : ರೂ. 50**
ತಾರಾ ಗ್ರಂಥ ಪ್ರಕಾಶನ
ಜಯನಗರ, ಧಾರವಾಡ-580 001

**ಕೆಂಡದಲ್ಲಿ ಎರಡು ಹೆಜ್ಜೆ** (ಕವನ ಸಂಕಲನ)
*ಶಂಕರ ಹುಕನೂರ* **ಪು : 56 ಬೆಲೆ : ರೂ. 20**

**ಕ್ಷಿತಿಜ** (ಅನುವಾದಿತ ಹಿಂದಿ ಕಥೆಗಳು)
*ಡಾ॥ ಪಂಚಾಕ್ಷರಿ ಹಿರೇಮಠ* **ಪು:108 ಬೆಲೆ:ರೂ. 50**
ಸ್ವಾತಿ ಪ್ರಕಾಶನ, 117/2, 5ನೇ ಮುಖ್ಯ ರಸ್ತೆ
ಚಾಮರಾಜಪೇಟೆ, ಬೆಂಗಳೂರು-560 018

**ತಣ್ಣಗಿನ ಬೆಂಕಿ** (ವ್ಯಾಸರ ಆತ್ಮಚರಿತ್ರೆ)
*ಸತ್ಯಕಾಮ* **ಪು : 122 ಬೆಲೆ : ರೂ. 75**
ಸ್ವಯಂ ಪ್ರಕಾಶನ, ಕಲ್ಲಹಳ್ಳಿ, ಜಮಖಂಡಿ

**ಕರಿಯ ಕಟ್ಟಿದ ಕವನ** (ಕವನ ಸಂಗ್ರಹ)
ಸತ್ಯಾನಂದ ಪಾತ್ರೋಟ **ಪು : 90 ಬೆಲೆ : ರೂ. 35**
ಸಮತಾ ಪ್ರಕಾಶನ, ಬಾಗಲಕೋಟೆ

**ಮೂಡಣದ ಹಾಡುಗಳು** (ಕವನ ಸಂಗ್ರಹ)
*ನಿಂಗು ಸೊಲಗಿ* **ಪು : 58 ಬೆಲೆ : ರೂ. 20**
ಸೃಷ್ಟಿ-ಪ್ರತಿಸೃಷ್ಟಿ ಸಾಹಿತ್ಯ ವೇದಿಕೆ
ಮುಂಡರಗಿ-582 118, ಗದಗ ಜಿಲ್ಲೆ.




*ಸಹಸ್ರಮಾನದ ಆರಂಭದಲ್ಲಿ ಜನರನ್ನು ಹೆದರಿಸುವ ಅನೇಕ ಪುಸ್ತಕಗಳು ಬಿಡುಗಡೆಯಾಗಿವೆ. ಅವೆಲ್ಲವೂ ಆಕಾಶದತ್ತ ನೋಡಲು ಜನರನ್ನು ಪ್ರೇರೇಪಿಸುತ್ತಿವೆ ಎಂಬುದೇ ಸಮಾಧಾನದ ಸಂಗತಿ.*

# 2000 ಎಂಬುದೇನು?

ಡಾ|| ಬಿ. ಎಸ್. ಶೈಲಜಾ

ಆಗ ತಾನೇ ಎಣಿಸಲು ಕಲಿತ ಮಗು ಎಲ್ಲೆಲ್ಲೂ ಸಂಖ್ಯೆಗಳನ್ನು ಗುರುತಿಸಲು ಪ್ರಯತ್ನಿಸುತ್ತಿರುತ್ತದೆ. ಪೆಟ್ರೋಲ್ ಬಂಕ್‌ನಲ್ಲಾಗಲೀ, ಬ್ಯಾಂಕ್‌ನ ಕ್ಯಾಷ್ ಕೌಂಟರ್‌ನಲ್ಲಾಗಲೀ ಅಥವಾ ಬಸ್ ಮೇಲಾಗಲೀ ಒಂದು, ಎರಡು, ಮೂರು... ಹೀಗೆ ಸಂಖ್ಯೆಗಳು ಕಂಡಾಗ ಓದಿ ಹೇಳಿಕೊಳ್ಳುವುದು ಅದಕ್ಕೊಂದು ಆನಂದ. ಸಂಖ್ಯಾಗಣಕ (ಡಿಜಿಟಲ್ ಕೌಂಟರ್) ಕಣ್ಣಿಗೆ ಬಿದ್ದರಂತೂ ಸರಿ. ಅದಕ್ಕಿಂತ ವೇಗವಾಗಿ ತಾನು ಎಣಿಸುವ ಪ್ರಯತ್ನ ಮಾಡುತ್ತದೆ. ಬಿಡಿ ಸ್ಥಾನದಲ್ಲಿ 9 ಬಂದು ಹತ್ತರ ಸ್ಥಾನ ಬದಲಾಗುವುದನ್ನು ಕಂಡಕೂಡಲೇ ಮಗುವಿಗೆ ಖುಷಿ. ಚಪ್ಪಾಳೆ ತಟ್ಟಿ ಕುಣಿದಾಡುವುದು.

ಇದು ಎಣಿಕೆ ಕಲಿತ ಸಂಭ್ರಮ. ಹೀಗೆ 'ಕಾಲ'ವನ್ನು ಅಳತೆ ಮಾಡಲು ಕಲಿತು ಮಾನವ ಎರಡು ಸಾವಿರ ವರ್ಷಗಳಾಗಿವೆ. ಅಷ್ಟೇ? ಇಲ್ಲ, ಇನ್ನೂ ಹೆಚ್ಚು ವರ್ಷಗಳಾಗಿವೆ. ಈಗ ಇಸವಿಯ ಸಂಖ್ಯೆಗಳು 1999ರಿಂದ 2000ಕ್ಕೆ ಬದಲಾಗುವುದನ್ನು ಕಾಣುವ ಸಂಭ್ರಮ ಎಲ್ಲೆಲ್ಲೂ.

ನಮ್ಮ ಮಾತೆ ಎನಿಸಿಕೊಂಡ ಭೂಮಿ ಈಗಾಗಲೇ ಮಿಲಿಯನ್‌ಗಟ್ಟಲೆ ಬಾರಿ 2000 ವರ್ಷಗಳನ್ನು ದಾಟಿ ಬಂದಿದೆ. ಆದರೆ ಭೂಮಿಯ ಮೇಲೆ ಬುದ್ಧಿಜೀವಿಯ ಪಟ್ಟ ಪಡೆದ ಮಾನವ ವ್ಯವಸ್ಥಿತ ರೀತಿಯಲ್ಲಿ ವರ್ಷಗಳ ಎಣಿಕೆಯನ್ನು ಮಾಡಲು ಕಲಿತದ್ದು ([illegible]) 2000 ವರ್ಷಗಳಿಂದೀಚೆಗೆ ಎಂಬುದೇ ಇದರ ಮಹತ್ವ.

ಚರಿತ್ರೆಯ ಪುಟಗಳು ತಿಳಿಸುವಂತೆ ಕ್ರಿಸ್ತನ ಜನ್ಮವರ್ಷದಿಂದ ಮುಂದಿನ ಅವಧಿಯನ್ನು 1,2... ಹೀಗೆ ಎಣಿಸಿಕೊಂಡು ಬರಲಾಗಿದೆ. ಅದರ ಹಿಂದಿನ ವರ್ಷಗಳನ್ನು ಕ್ರಿಸ್ತಪೂರ್ವ 1,2... ಎಂದು ಹಿಂದಕ್ಕೆ ಎಣಿಸಿಕೊಂಡು ಹೋಗಬಹುದು. ಈ ಎಣಿಕೆಯಲ್ಲಿ ಸೊನ್ನೆ ಇಲ್ಲ. ಈ ಕಾರಣ ಎರಡನೆಯ ಸಹಸ್ರಮಾನ 1ನೇ ಜನವರಿ 2001ರಿಂದ ಪ್ರಾರಂಭವಾಗಬೇಕಾದ್ದು ತರ್ಕಬದ್ಧ. ಆದರೆ 999ಗಳೆಲ್ಲ 000ಗಳಾಗಿ ಪರಿವರ್ತಿತವಾಗುವ ಸಂದರ್ಭವೇ ಸಂಭ್ರಮಕ್ಕೆ ಹೆಚ್ಚು ಸಮಂಜಸ ಎಂಬುದು ಇನ್ನೊಂದು ವಾದ.

ಯಾವುದೋ ಒಂದು ನೈಸರ್ಗಿಕ ಪ್ರಕೋಪ ಉಂಟಾದಾಗ, ಅದರ ಕಾರಣವನ್ನು ಹುಡುಕುವ ಪ್ರಯತ್ನ ಮಾಡುವುದು ಸಹಜ. ಆದರೆ ಅದರ ಕಾರಣವನ್ನು ಆಕಾಶದಲ್ಲಿ ನಕ್ಷತ್ರ ಲೋಕದಲ್ಲಿ ಹುಡುಕಿ ತೆಗೆಯುವ ಸಂಪ್ರದಾಯ ಇಂದು ನಿನ್ನೆಯದಲ್ಲ. ಇಂದು ಎರಡು ಸಹಸ್ರಮಾನಗಳನ್ನು ಎಣಿಸುವ ಸಂದರ್ಭದಲ್ಲಿ ಇಂಥ ಅನೇಕ ಪ್ರಯತ್ನಗಳು ನಡೆದಿವೆ. ಪ್ರಪಂಚವನ್ನೇ ನಾಶಮಾಡುವ ವರ್ಷ ಇದು ಎಂಬರ್ಥ ಬರುವ ಪುಸ್ತಕಗಳು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರಕಟವಾಗಿ ಹುರಿಗಾಳಿನಂತೆ ಖರ್ಚಾಗಿಹೋಗುತ್ತಿವೆ. ಹೊಸ ಸಹಸ್ರಮಾನಕ್ಕೆ ಕಾಲಿಡುತ್ತಿದ್ದೇವೆ ಎಂದು ಸಂತೋಷದಿಂದ ಕೆಲವರು ಸಂಭ್ರಮಪಡುತ್ತಿದ್ದರೆ, ಇನ್ನು ಕೆಲವರು ಆಕಾಶವೇ ತಲೆಯ ಮೇಲೆ ಬಿದ್ದಂತೆ ಕಳವಳಪಡುತ್ತಿದ್ದಾರೆ.

ಅದೇನೇ ಇರಲಿ, ಇದು ಎರಡನೆ ಸಹಸ್ರಮಾನವಲ್ಲವೇ? ಮೊದಲನೆಯ ಸಹಸ್ರಮಾನ ಅಂದರೆ ಕ್ರಿ.ಶ. 999ರಿಂದ 1000ಕ್ಕೆ ಇಸವಿ ಬದಲಾದಾಗಲೂ ಹೀಗೊಂದು ಗೊಂದಲವಾಗಿತ್ತೇ? ಇದನ್ನು ತಿಳಿಯಲು ಹೊರಟಾಗ ಎದುರಾಗುವುದು ಅನೇಕ ಹೊಸ ಸಂಗತಿಗಳು.

ಹೊಸ ವರ್ಷದ ಆರಂಭ ಎಂದು, ಎಂಬ ಗೊಂದಲ ಕ್ರಿ.ಶ. 999ರಲ್ಲಿ ಎದ್ದಿತ್ತಂತೆ. ಕಾರಣಗಳು ಹಲವಾರು - ಮೇಷಸಂಕ್ರಮಣ ದಿನ ಅಂದರೆ ಮಾರ್ಚ್ 21ರಂದು ವರ್ಷಾರಂಭ ಎಂದು ಕೆಲವರು ವಾದಿಸಿದರೆ, ಇನ್ನು ಕೆಲವರು ಕ್ರಿಸ್ತನ ಜನ್ಮದಿನ ಎಂದರು. ಇನ್ನೂ ಕೆಲವರು ಇನ್ನೊಂದೆರಡು ವಿಕೃತ ಲೆಕ್ಕಗಳನ್ನು ಮಾಡಿ 1001ನೇ ಇಸವಿಯ ಗುಡ್ ಫ್ರೈಡೆಯ ದಿನವೇ ಹೊಸ ವರ್ಷಾರಂಭ ಮತ್ತು ಹೊಸ ಸಹಸ್ರಮಾನದ ಆರಂಭ ಎಂದು ಘೋಷಿಸಿದ್ದರು. ಒಟ್ಟಿನಲ್ಲಿ 1000 ಇಸವಿಯ ಜನವರಿ 1 ನಿರಾಡಂಬರವಾಗಿ ಸರಿದುಹೋಗಿತ್ತು.

ಆದರೆ ಸಹಸ್ರಮಾನವನ್ನು ಪ್ರವೇಶಿಸುವ ವಿಶೇಷ ಸವಲತ್ತು ಪಡೆದಿದ್ದೇವೆಂದು ಹೆಮ್ಮೆಯಿಂದ ಬೀಗುವವರು ಆಗಲೂ ಇದ್ದರು. ಆ ಸಂಭ್ರಮದ ಸುಸಂದರ್ಭದಲ್ಲಿ ಆಕಾಶದಿಂದ ಒಂದು ವಿಶೇಷ ಸಂದೇಶ ಬರಲಿದೆ ಎಂದು ಕಾಯುತ್ತಲಿದ್ದರು. ಆದರೆ ಏನಾದರೂ ಅನಾಹುತ ಸಂಭವಿಸಬಹುದೆಂದು ನಿರೀಕ್ಷಿಸಿದವರೇ ಹೆಚ್ಚು. ಕ್ರಿ.ಶ. 998ರಲ್ಲಿ ಯೋರೋಪನ್ನು ಅಪ್ಪಳಿಸಿದ ಎರಡು ಉಲ್ಕೆಗಳ "ಹೊಣೆಗೇಡಿತನ"ವನ್ನು ಸಹಸ್ರಮಾನಕ್ಕೆ ಒಪ್ಪಿಸಲಾಯಿತು. ಕ್ರಿ.ಶ. 1000ದಲ್ಲಿ ಬೃಹತ್ ಉಲ್ಕೆಯೊಂದು ಆಕಾಶದಲ್ಲಿ ಸ್ಫೋಟಿಸಿತು. ಬೋಲೈಡ್ ಎಂಬ ಹೆಸರಿನ ಇಂತಹವು ಹಗಲಿನಲ್ಲೂ ಕಾಣುವಷ್ಟು ಪ್ರಕಾಶಮಾನವಾಗಿರುತ್ತವೆ. ಕಳೆದ ನವೆಂಬರ್‌ನಲ್ಲಿ ಉಂಟಾದ ಉಲ್ಕಾವೃಷ್ಟಿಯಲ್ಲಿ ಇಂತಹ ಬೋಲೈಡ್ ಅಥವಾ ಸ್ಫೋಟಕ ಉಲ್ಕೆಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬಂದವು. ಇತ್ತೀಚಿನ ದಿನಗಳಲ್ಲಿ ಆಗೊಮ್ಮೆ ಈಗೊಮ್ಮೆ ಈ ಬಗೆಯ ಸುದ್ದಿಗಳು ಕೇಳಿಬರುತ್ತವೆ. ಅದೃಷ್ಟಶಾಲಿ ಛಾಯಾಗ್ರಾಹಕನೊಬ್ಬ 1974ರಲ್ಲಿ ಇಂಥದೊಂದನ್ನು ಕ್ಯಾಮರಾದಲ್ಲಿ ಸೆರೆ ಹಿಡಿದದ್ದು, Sky and Telescope ಎಂಬ ಪತ್ರಿಕೆಯ ಮುಖಪುಟದಲ್ಲಿ ಪ್ರಕಟವಾಗುವಷ್ಟು ಪ್ರಾಮುಖ್ಯತೆ ಪಡೆಯಿತು. ಅದು ಹಾಗಿರಲಿ, ಕ್ರಿ.ಶ. 1000ದಲ್ಲಿ ಉರಿದ ಈ ಉಲ್ಕೆಯ ಸುದ್ದಿ ವಿಚಿತ್ರ ರೂಪ ಪಡೆಯಿತು. ಅದಕ್ಕೆ ಹಾವಿನಂತಹ ತಲೆ ಇತ್ತಂತೆ. ನೀಲಿಬಣ್ಣದ ಕಾಲುಗಳು ಇದ್ದುವಂತೆ. ಇದರ ಬೆಳಕು ಆಕಾಶದ ಅರ್ಧಭಾಗವನ್ನು ಆವರಿಸಿ, ಮೂರು ತಿಂಗಳು ಪ್ರಕಾಶಿಸಿತು ಎಂದು ಚರಿತ್ರಕಾರನೊಬ್ಬ ಬರೆದಿಟ್ಟಿದ್ದಾನೆ. ಇದರ ಸತ್ಯಾಸತ್ಯತೆಯ ನಿರ್ಧಾರ ನಿಮಗೇ ಬಿಟ್ಟದ್ದು.

ಕಳೆದೆರಡು ವರ್ಷಗಳಿಂದ ಕಂಡ ಖಗೋಳೀಯ ಘಟನೆಗಳೆಲ್ಲವನ್ನೂ "ಮಿಲೆನಿಯಂ"ಗೆ ಅಂಟಿಸುವ ಹುಚ್ಚು ಪ್ರವೃತ್ತಿ ಈಗ ಬೆಳೆಯುತ್ತಿದೆ. 1996ರಲ್ಲಿ ಬಂದು ಹೋದ ಹಯಾಕುಟಾಕೆ ಎಂಬ ಧೂಮಕೇತು, 97ರ ಹೇಲ್-ಬಾಪ್ ಧೂಮಕೇತು, ಆಗಸ್ಟ್ 11ರ ಸೂರ್ಯಗ್ರಹಣ, ನವೆಂಬರ್‌ನ ಉಲ್ಕಾವೃಷ್ಟಿ ಅಷ್ಟೇ ಅಲ್ಲದೆ 99ರ ಜನವರಿ ಮತ್ತು ಮಾರ್ಚ್‌ನಲ್ಲಿಯ "ನೀಲಿ ಚಂದ್ರ"* ಎಲ್ಲವೂ 2000ದ ಮುನ್ಸೂಚನೆ ಎಂದು ಹೇಳಲಾಗುತ್ತಿದೆ. ಕೆಲವರಂತೂ ಲಾತೂರ್, ಉತ್ತರಕಾಶಿ ಅಲ್ಲದೆ ಟರ್ಕಿಯ ಭೂಕಂಪವನ್ನೂ, ಒರಿಸ್ಸಾವನ್ನು

---

**ಮತ್ಸರ**

*ಕೋಗಿಲೆಯ*
*ಇಂಪಾದ ಗಾನವನ್ನಾಲಿಸಿದ*
*ಕಿವಿಗಳಿಗೆ ಕೆಂಬೂತದ*
*ಕರ್ಕಶ ಧ್ವನಿ ಕೇಳಿದಂತೆ*

ಎನ್. ಶ್ರೀನಿವಾಸ್
ಗ್ರಾಮೀಣ ಅಭಿವೃದ್ಧಿ ಕೇಂದ್ರ, ವಿ.ಸಿ. ಫಾರಂ, ಮಂಡ್ಯ-೫೭೧ ೪೦೫

---

ಧೂಳೀಪಟವೆಬ್ಬಿಸಿದ ಚಂಡಮಾರುತವನ್ನೂ 2000ಕ್ಕೆ ಲಗತ್ತಿಸಿ ಕಳವಳ ಪಡುತ್ತಿದ್ದಾರೆ.

*(* ನೀಲಿಚಂದ್ರ ಎಂದರೆ ಒಂದೇ ಕ್ಯಾಲೆಂಡರ್ ತಿಂಗಳಲ್ಲಿ ಬರುವ ಎರಡನೆಯ ಹುಣ್ಣಿಮೆ ಎಂದರ್ಥ. ಈ ಪದದ ಮೂಲವನ್ನು ಹುಡುಕುತ್ತಾ ಹೋದಾಗ ರೇಡಿಯೋ ಕಾರ್ಯಕ್ರಮದ ನಿರೂಪಕಿಯೊಬ್ಬಳು ಮಾಡಿದ ಎಡವಟ್ಟು ಎಂದು ತಿಳಿಯಿತು. ಈಕೆ ಅಮೆರಿಕದ ಬಾನುಲಿ ಕೇಂದ್ರದ ಕಾರ್ಯಕ್ರಮವೊಂದರಲ್ಲಿ ನೀಲಿಚಂದ್ರದ ಈ ವ್ಯಾಖ್ಯೆಯನ್ನು ಜಾಹೀರುಮಾಡಿದಳು. ಆಕೆಗೆ ಸಿಕ್ಕಿದ ಆಧಾರಗ್ರಂಥ 1942ರಲ್ಲಿ ಪ್ರಕಟವಾಗಿದ್ದುದು; ಆ ಮೂಲವನ್ನೇ ಹುಡುಕಿದ ಪತ್ತೆದಾರರು, ಅಲ್ಲಿ ನೀಲಿಚಂದ್ರ ಎಂದು ನಮೂದಿಸಿದ್ದು ಕ್ರಾಂತಿಮಾಸದ ಎರಡನೆಯ ಹುಣ್ಣಿಮೆಗೆ ಎಂದು ಪತ್ತೆ ಮಾಡಿದರು. ಅಂದರೆ ಮಾರ್ಚ್ 21ರಿಂದ ಏಪ್ರಿಲ್ 20, ಏಪ್ರಿಲ್ 21ರಿಂದ ಮೇ 20 - ಹೀಗೆ ತಿಂಗಳುಗಳನ್ನು ಎಣಿಸಿದಾಗ ಕೆಲವೊಮ್ಮೆ ಒಂದೇ ತಿಂಗಳಲ್ಲಿ ಎರಡು ಹುಣ್ಣಿಮೆ ಬಂದರೆ ಅದು ನೀಲಿಚಂದ್ರ ಎನಿಸಿಕೊಳ್ಳುತ್ತದೆ. ಇಲ್ಲಿ ಕ್ರಾಂತಿಮಾಸ - tropical month - ಎಂಬುದನ್ನು ಉಪೇಕ್ಷಿಸಿ ಆಕೆ ಮಾಡಿದ ತಪ್ಪು ಇಂದು ಒಪ್ಪಾಗಿ ಅಂಗೀಕೃತವಾಗಿದೆ.)*

ಕ್ರಿ. ಶ. 2000ದಲ್ಲಿ 'ಖಗೋಳೀಯ ಅನಾಹುತ' ಗಳಿಗೇನೂ ಕೊರತೆ ಇಲ್ಲ. ಎರಡು ಚಂದ್ರಗ್ರಹಣಗಳು, ನಾಲ್ಕು (ಪಾರ್ಶ್ವ) ಸೂರ್ಯಗ್ರಹಣಗಳು, 'ಚಂದ್ರ -ಶುಕ್ರ' ಗ್ರಹಣ, ಸೂರ್ಯಕಲೆಗಳ ಗರಿಷ್ಠ, ನವೆಂಬರ್‌ನ ಲಿಯೋನಿಡ್ ಉಲ್ಕಾವೃಷ್ಟಿ, ಇಷ್ಟು ಸಾಲದೆಂಬಂತೆ ಮೇ 5ರಂದು ಕನಿಷ್ಠ ಕೋನದಲ್ಲಿ ಗ್ರಹಗಳೆಲ್ಲವುಗಳ ವಿಶಿಷ್ಟ ಹಂಚಿಕೆ - ಒಟ್ಟಿನಲ್ಲಿ ಫಲಜ್ಯೋತಿಷಿಗಳಿಗೆ ಬಿಡುವೇ ಇಲ್ಲ.

ಇದಕ್ಕೆಲ್ಲ ಕಾರಣ 2000 ಎಂಬ ಸಂಖ್ಯೆಯೇ? ಹಾಗಾದರೆ 500 ವರ್ಷಗಳಿಗೂ ಹೆಚ್ಚು ಹಿಂದಿರುವ ಇಸ್ಲಾಮ್ ಪಂಚಾಂಗದ ಅನುಯಾಯಿಗಳು ಮತ್ತು ಇನ್ನೂ 78 ವರ್ಷ (2000ಕ್ಕಾಗಿ) ಕಾಯಬೇಕಾಗಿರುವ ಹಿಂದೂಗಳು, 2054ಕ್ಕೆ ಕಾಲಿಡುವ ವಿಕ್ರಮಶಕೆಯ ಅನುಯಾಯಿಗಳು ನಿರಾಳವಾಗಿರಬಹುದೇ? - ಈ ವಾದ ಕುಹಕ ಎನ್ನಿಸಿಕೊಂಡು ಮೂಲೆಗುಂಪಾಗುವುದು ಆಶ್ಚರ್ಯವೇನಲ್ಲ.

ಈ 2000 ಎಂಬುದೇನು? ಅದು ಮುಂದಿನ ಪ್ರಶ್ನೆ. ಇದನ್ನು ಅರ್ಥಮಾಡಿಕೊಳ್ಳಲು ಕ್ಯಾಲೆಂಡರ್ ಕರ್ತೃಗಳು ಎಡವಿಬಿದ್ದ ಸಂದರ್ಭಗಳನ್ನು ನೆನಪು ಮಾಡಿಕೊಳ್ಳಬೇಕು. ಸೌರ ವರ್ಷವನ್ನು ಮತ್ತು ಹನ್ನೆರಡು ಚಾಂದ್ರಮಾಸಗಳನ್ನು ಒಗ್ಗೂಡಿಸುವ ಪ್ರಯತ್ನಗಳಲ್ಲಿ ಈ ಎಡರು ತೊಡರು ಅನಿವಾರ್ಯ. ಭಾರತೀಯ ಪಂಚಾಂಗ ಈ ತೊಡರನ್ನು ಯಶಸ್ವಿಯಾಗಿ ದಾಟಿ ನಿಂತಿದೆ. ಅಧಿಕಮಾಸಗಳು, ಕ್ಷಯಮಾಸಗಳು ಸೌರಚಾಂದ್ರಮಾಸಗಳನ್ನು ಕರಾರುವಾಕ್ಕಾಗಿ ಮೇಳೈಸಿಕೊಂಡು ಬಂದಿವೆ.

ಯೂರೋಪಿನಲ್ಲಿ ಇದು ಅಷ್ಟು ಸುಲಭವಾಗಿ ಆಗಲಿಲ್ಲ. ಚಾಂದ್ರಮಾಸದ ಅವಧಿ ಸರಿಯಾಗಿ $(365.25 \div 12)$ ಆಗಿದ್ದಿದ್ದರೆ ಈ ತಾಪತ್ರಯವೇ ಇರುತ್ತಿರಲಿಲ್ಲ. ಎರಡು ಸಾವಿರ ವರ್ಷಗಳ ಹಿಂದೆ ಯಹೂದಿಗಳು ಚಂದ್ರ, ಸೂರ್ಯರನ್ನು ಹೊಂದಿಸಲು ಹೆಣಗಾಡುತ್ತಿದ್ದರು. ಅಧಿಕಮಾಸವನ್ನು ಯಾವ ವರ್ಷ ಸೇರಿಸಬೇಕು ಎಂದು ನಿರ್ಧರಿಸಲು ಅವರು ವಸಂತಾಗಮನವನ್ನು ಅಂದರೆ ಚಿಗುರೊಡೆಯುವುದನ್ನು ಕಾಯುತ್ತಿದ್ದರು. ಪ್ರಾಕೃತಿಕ ಗಡಿಯಾರ ಎಂದೂ ತಪ್ಪಾಗದು. ಈಗಲೂ ವಲಸೆ ಹೋಗುವ ಹಕ್ಕಿಗಳು ನಿರ್ದಿಷ್ಟ ದಿನಾಂಕಗಳಂದು ಹಾಜರಾಗುತ್ತವೆ.

ಯಹೂದಿಗಳು ಜೆರುಸಲಂನಲ್ಲಿ ಕುಳಿತು ಅಧಿಕಮಾಸವನ್ನು ನಿರ್ಧರಿಸಿದ ಮೇಲೆ ಅದು ವಲಸೆ ಹೋದ ಇತರರಿಗೆ ತಿಳಿಯುತ್ತಿತ್ತು. ಸಂದೇಶಗಳು ತಲುಪುವುದರಲ್ಲಿ ವಿಳಂಬವಾದಲ್ಲಿ ಲೆಕ್ಕ ಏರುಪೇರಾಗುತ್ತಿತ್ತು. ಈ ಸಮಸ್ಯೆಯನ್ನು ಬಗೆಹರಿಸಲು ಖಗೋಳಜ್ಞರ ಸೂತ್ರಗಳನ್ನು ಬಳಸಿಕೊಂಡರು. ಮೇಟನ್ ಎಂಬ ಗ್ರೀಕ್ ವಿಜ್ಞಾನಿ ಕ್ರಿ.ಪೂ. 5ರಷ್ಟು ಹಿಂದೆಯೇ ಸೂಚಿಸಿದ್ದ 19 ವರ್ಷಗಳ ಚಕ್ರದಿಂದ ಗ್ರಹಣ ದಿನಗಳನ್ನು ಲೆಕ್ಕ ಹಾಕಬಹುದಾಗಿತ್ತು. ಅದೇ ಚಕ್ರವನ್ನು ಪ್ರಯೋಗಿಸಿ, ವರ್ಷದ ಆರಂಭವನ್ನು ನಿಗದಿಪಡಿಸಿದರು.

ಈಸ್ಟರ್ ಹಬ್ಬದ ಆಚರಣೆಯಲ್ಲಿ ತೊಡಕನ್ನು ನಿವಾರಿಸಲು ಈ ಚಕ್ರವನ್ನು ಉಪಯೋಗಿಸಿದ ಜಾಣ್ಮೆ ಸಿರಿಲ್ ಎಂಬ ಪಾದ್ರಿಯದು. ಆತ ಮುಂದಿನ 95 ವರ್ಷಗಳಿಗೆ ಈಸ್ಟರ್ ದಿನಾಂಕವನ್ನು ಗೊತ್ತು ಮಾಡಿದ. 95 ವರ್ಷಗಳು ಕಳೆದ ಮೇಲೆ ಮುಂದಿನ ಲೆಕ್ಕ ಮಾಡಲು ಡಯನೀಸಿಯಸ್ ಎಕ್ಸಿಗಸ್ ಎಂಬಾತನಿಗೆ ಜವಾಬ್ದಾರಿ ವಹಿಸಲಾಯಿತು. ಆತ ಇನ್ನೂ ನಿಖರವಾಗಿ ಲೆಕ್ಕಮಾಡಿ, 532 ವರ್ಷಗಳ ಹಿಂದೆ ಕ್ರಿಸ್ತ ಹುಟ್ಟಿದ ಎಂದು ತಿಳಿಸಿ, ಆ ವರ್ಷವನ್ನು ಕ್ರಿಸ್ತಶಕ 1 (AD1) ಎಂದು ಕರೆದ. ಅದೇ ಮೊದಲ ವರ್ಷ ಎಂದಾತ ಗಣಿಸಿದ.



*ಮೊದಲನೆಯ ''ಮಿಲನಿಯಂ'' ವರ್ಷದಲ್ಲಿ ಬಿದ್ದ ಉಲ್ಕೆಗೆ ಹಾವಿನಂತಹ ತಲೆ ಇತ್ತಂತೆ. ಹಲ್ಲಿಯ ಕಾಲುಗಳಿದ್ದವಂತೆ. ಇದನ್ನು ಸೂಚಿಸುವ ಒಂದು ರೇಖಾಚಿತ್ರ.*

ಅವ್ಯಾಹತವಾಗಿ ನಡೆದುಕೊಂಡು ಬಂದ ಲೆಕ್ಕದಲ್ಲಿ ವರ್ಷಕ್ಕಿಂತಿಷ್ಟು ಎಂದು ಕೊಸರುಗಳು ಸೇರಿದವು. 15ನೆಯ ಶತಮಾನದ ಹೊತ್ತಿಗೆ ಈಸ್ಟರ್ ಆಚರಣೆಯಲ್ಲಿ ಗೊಂದಲ ತಲೆದೋರಿತು. ಕ್ಯಾಲೆಂಡರ್ ಎಂಬುದು ಧರ್ಮಾಧಿಕಾರಿಗಳಿಗೆ ತಲೆನೋವಾಯಿತು. ಇದಕ್ಕೊಂದು ಪರಿಹಾರ ಸೂಚಿಸಲು ಸಮಿತಿಯೊಂದನ್ನು ರಚಿಸಲಾಯಿತು. ಸರಳ ಪರಿಹಾರದ ಬದಲು ಸಮಸ್ಯೆಯನ್ನು ಗೋಜಲುಗೊಳಿಸಿ, ಅತ್ಯಂತ ಕ್ಲಿಷ್ಟ ಪರಿಹಾರ ಸೂಚಿಸುವುದೇ ತಮ್ಮ ಕರ್ತವ್ಯವೆಂದು ಸಮಿತಿ ಸದಸ್ಯರು ಭಾವಿಸಿದರು. (ಅದು ಇಂದಿನ ಸಮಿತಿಗಳಿಗೂ ಅನ್ವಯಿಸುತ್ತದೆಯೋ ಏನೋ!) ಆದ್ದರಿಂದ ಸರಳವಾಗಿ ಏಪ್ರಿಲ್‌ನ ಎರಡನೇ ಭಾನುವಾರ ಎಂದು ನಿಗದಿಪಡಿಸುವ ಬದಲು, ವಿಷುವದ್‌ಬಿಂದುವನ್ನು ಸೂರ್ಯ ದಾಟಿದ ನಂತರದ ಹುಣ್ಣಿಮೆಯ ಮುಂದಿನ ಭಾನುವಾರ ಎಂದು ಘೋಷಿಸಿದರು. ವಿಷುವದ್ ದಿನವೇ

> *ಇಳೆಯಿಂದ ಮೊಳಕೆಯೊಗೆವೊಂದು ತಮಟೆಗಳಿಲ್ಲ*
> *ಫಲಮಾಗುವಂದು ತುತ್ತೂರಿ ದನಿಯಿಲ್ಲ*
> *ಬೆಳಕೀವ ಸೂರ್ಯಚಂದ್ರರದೊಂದು ಸದ್ದಿಲ್ಲ*
> *ಹೊಲಿ ನಿನ್ನ ತುಟಿಗಳನು* - **ಮಂಕುತಿಮ್ಮ**

ಭಾನುವಾರವಾದರೆ...? ಇದಕ್ಕೊಂದು ತಿದ್ದುಪಡಿ. ಹುಣ್ಣಿಮೆಯೇ ಭಾನುವಾರವಾದರೆ...? ಅದಕ್ಕೆ ಇನ್ನೊಂದು ತಿದ್ದುಪಡಿ. ಹೀಗೆ ರೂಪಿತವಾದ ಸೂತ್ರ ಕ್ಯಾಥೊಲಿಕ್‌ರಿಗೊಂದು, ಪ್ರೊಟೆಸ್ಟೆಂಟರಿಗೊಂದು ಮತ್ತು ಸಂಪ್ರದಾಯಸ್ಥ ಗ್ರೀಕರಿಗೊಂದು ಈಸ್ಟರ್‌ಗಳನ್ನು ಸೃಷ್ಟಿಸಿತು. ಅಲ್ಲದೆ ಪ್ರತಿವರ್ಷಕ್ಕೆ ಆರು ಗಂಟೆಗಳಷ್ಟು ವ್ಯತ್ಯಾಸ ಕೂಡಿಕೊಂಡು ಹದಿನೈದನೆಯ ಶತಮಾನದ ಹೊತ್ತಿಗೆ ವಿಷುವವನ್ನು ದಾಟುವ ದಿನ ಮಾರ್ಚ್ 11ಕ್ಕೆ ಸರಿದಿತ್ತು.

ಈ ಹತ್ತು ದಿನ ಅಂತರವನ್ನು ಲೆಕ್ಕಕ್ಕೆ ಸೇರಿಸಿಕೊಂಡು ಹಿಂದುಹಿಂದಕ್ಕೆ ಲೆಕ್ಕ ಹಾಕಿದಾಗ ಡಯನೀಸಿಯಸ್ ಮೊದಲನೆ ವರ್ಷ ಎಂದು ನಿಗದಿಪಡಿಸಿದ ವರ್ಷಕ್ಕಿಂತ ಮೊದಲೇ ಕ್ರಿಸ್ತ ಹುಟ್ಟಿದ್ದುದು ಎಂದು ತಿಳಿದುಬಂದಿತು. ಹದಿನೈದನೆಯ ಶತಮಾನದ ಗಣಿತಜ್ಞ ಜೋಸೆಫ್ ಸ್ಕೇಲಿಗರ್ ಕ್ರಿಸ್ತಶಕ 1 ಎಂಬುದಕ್ಕೆ ಎರಡು ವರ್ಷ ಮುಂಚೆ ಕ್ರಿಸ್ತ ಹುಟ್ಟಿದ್ದ ಎಂದು ಲೆಕ್ಕ ಹಾಕಿ ತೋರಿಸಿದ. ಖ್ಯಾತ ಖಗೋಳಜ್ಞ ಕೆಪ್ಲರ್ ಇನ್ನೂ ನಿಖರವಾಗಿ ಲೆಕ್ಕ ಹಾಕಿ ಕ್ರಿಸ್ತ ಹುಟ್ಟಿದ್ದು ಇನ್ನೂ ಎರಡು ವರ್ಷಗಳ ಹಿಂದೆ ಎಂದು ವಿವರಿಸಿದ. ಇತ್ತೀಚಿನದೊಂದು ಲೆಕ್ಕ ಅದನ್ನು ಇನ್ನೂ ಮೂರು ವರ್ಷಗಳಷ್ಟು ಹಿಂದಕ್ಕೆ ತಳ್ಳುತ್ತದೆ.

ಹಾಗಾದರೆ ಕ್ರಿಸ್ತ ಹುಟ್ಟಿದ್ದು ಕ್ರಿ.ಪೂ. 4 ಅಥವಾ 6 ಅಥವಾ ಇನ್ನೂ ಮುಂಚೆ ಎಂದಾಯಿತು. ಈ ವಾಕ್ಯವನ್ನು ಓದುವಾಗಲೇ ಅಸಂಬದ್ಧ ಎನಿಸುತ್ತದೆ. ಇಂಗ್ಲಿಷ್‌ನಲ್ಲೂ ಅಷ್ಟೇ. Christ was born in 4 B.C. (Before Christ)!

ಈ ಜಿಜ್ಞಾಸೆ ಹೀಗೆ ತಲೆಕೆಡಿಸುತ್ತಿರುವಾಗ 2000 ಎಂಬ ಸಂಖ್ಯೆಗೆ ಮಹತ್ವ ಅಂಟಿಸುವುದು ಹೇಗೆ? ಕ್ರಿಸ್ತ ಕ್ರಿ.ಪೂ. 4ರಲ್ಲಿ ಹುಟ್ಟಿದ್ದಾದರೆ 1996ಕ್ಕೆ ಆತನ ''ದ್ವಿ ಸಹಸ್ರ ಜಯಂತಿ'' ಆಗಿಹೋಯಿತಲ್ಲವೇ?

ಪಟಾಕಿ, ಬಾಣ ಬಿರುಸು, ಮಿಲೆನಿಯಂ ಡೋಮ್, ಮಿಲೆನಿಯಂ ಸೇಲ್ ಮುಂತಾದವನ್ನು ಅಣಿಮಾಡಿಕೊಂಡು ಸಜ್ಜಾಗಿ ಕುಳಿತವರಿಗೆ ಈ ವಾದ - ''ಕೋಣನ ಮುಂದೆ ಕಿನ್ನರಿ'' ಅಷ್ಟೇ. ಆದ್ದರಿಂದ ಕಾಲದ ಓಡೋಮೀಟರ್ ಸುತ್ತಿ ಬರುವುದನ್ನು ಕಂಡು (ಎಣಿಸಲು ಕಲಿತ ಮಗುವಿನಂತೆ) ಆನಂದಿಸುವುದೇ ಸರಿ.

ಆದರೆ 2001ರ ಜನವರಿ ಮೊದಲ ದಿನಕ್ಕೆ ತರ್ಕಬದ್ಧವಾಗಿ ಸಹಸ್ರಮಾನ ಆರಂಭವಲ್ಲವೇ? ಆಗೇನು ಮಾಡೋಣ? - ಉತ್ತರ ಸರಳ. ಯಾವುದೇ ಸಮಿತಿಯ ಸಲಹೆ ಬೇಕಿಲ್ಲ. ಪುನಃ ಇನ್ನೊಂದು ಸಂಭ್ರಮ, ಇನ್ನಷ್ಟು ಪಟಾಕಿಗಳು, ಬಾಣ, ಬಿರುಸು... ಅಷ್ಟೇ!

ಡಾ।। ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು

## ಒಂದು ಗಣಿಯ ಸುತ್ತು

ಒಂದು ಹಳೆ ಗಣಿ ಇದ್ದ ಜಾಗಾ ಅದು;
ಪುಡಿಯಾದ ಕೈಕಾಲು ತಲೆಯೋಡು
ಬಿದ್ದಿತ್ತು ರಾಶಿ ರಾಶಿ-
ಜೀವಧಾತು ಖನಿಜ ಸಂಪತ್ತು
ಸುತ್ತಲು ನಡೆದಿತ್ತು ಕುಶಲ ಮಾತು
ಗತ ವೈಭವದ ಅವಶೇಷಗಳು
ಅಲ್ಲೆಲ್ಲ ಮೆರೆದಿತ್ತು, ಎತ್ತಿ ಹೊರಕ್ಕೆ
ಒಗೆದಿತ್ತು ಬೇರುಗಳ, ಆ ಸುರಂಗಗಳು.
ಕುತೂಹಲ ತಡೆಯಲಾಗದೆ
ಹತ್ತಿರ ಹೋಗಿ ಇಣುಕಿದೆ; ಆಳಕ್ಕೆ-
ಕಾಣುತ್ತಿತ್ತು ಬಾವಿ ತೊರೆ ಕಡಲದಾರಿ-
ಒಂದು ಕಲ್ಲೆಸೆದು ಕಾದೆ !
ಸದ್ದು ಮರುಕಳಿಸುವುದನ್ನೆ
ಆತಂಕದಿಂದ-
ಎದೆಯಲ್ಲಿ ಎಲುಬುಗಳ ವೀಣೆ
ಇಳಿದೋಗಿತ್ತು ಪಾತಾಳಕ್ಕೆ-
ಇರುವೆ ಸಾಲು ಸಾಲು. ಯಾರನ್ನೊ



ಕೂಗಿ ಕರೆಯುತ್ತಿತ್ತು ಕೆಳಗಡೆ ಭೂಮಿ.
ಕಾಲು ಮೇಲೆ ನಡೆಯುವರು
ನೋಡಲಾರರು ಕೆಳಗಿಂದ
ಹಾಗೆ ಶಬ್ದಗಳು.

ಎಂ. ವೆಂಕಟಸ್ವಾಮಿ
೪೨೭, ೧೩ನೇ ಮುಖ್ಯರಸ್ತೆ, ಎಂ.ಸಿ. ಬಡಾವಣೆ,
ವಿಜಯನಗರ, ಬೆಂಗಳೂರು-೪೦

## ರೆಕ್ಕೆಗಳಿದ್ದರೆ

ನಮಗೂ ರೆಕ್ಕೆಗಳೇಕಿಲ್ಲಮ್ಮ
ಹಕ್ಕಿಗೆ ಇಹವು ಎರಡೆರಡು
ಕೊಟ್ಟರೆ ನನಗೆ ಅದರಲಿ ಒಂದು
ಏನಾಗಿತ್ತು ಕೇಡು ?
ಹಾರುತಲಿದ್ದೆ ಗಗನದಿ ತೇಲಿ;
ಇದ್ದರೆ ರೆಕ್ಕೆಗಳೆರಡು
ಚಂದ್ರನ ದಾಟ, ಸೂರ್ಯನ ದಾಟ;



ತಾರೆಯ ಮೇಲ ನಲಿದು
ದಪ್ಪ ಮತ್ತು ಚಿಕ್ಕ ಮೋಡವ
ತರಲು ಹೊತ್ತುಕೊಂಡು
ಪಕ್ಷಿಗೆ ಇರಲು ಸಾಧ್ಯವೇ ? ಮೋಡದ
ಗೂಡನು ಕಟ್ಟಿಕೊಂಡು
ನನಗೂ ರೆಕ್ಕೆಗಳಿದ್ದರೆ ಎರಡು
ವಿಶ್ವವ ಕಾಣಲು ಹಾರುವೆ ನೋಡಿ
ಅಮ್ಮನ ಕರೆಯು ಕೇಳಿದ ಕೂಡಲೆ
ಕ್ಷಣದೊಳು ಬರುವೆ ಓಡಿ.

ವರ್ಷಾ ಹೂಗಾರ
೭ನೇ ವರ್ಗ, ಕಾಗವಾಡ

## ಮೈಲಿಗೆ

ಶತ ಶತಮಾನಗಳಿಂದ
ಹೆಪ್ಪುಗಟ್ಟಿದ್ದ
ನಿರ್ಮಲ ಹಿಮದ ಮೇಲೆ
ರಕ್ತದ ಚೆಲ್ಲಾಟ
ಮೈಲಿಗೆಯಾಗಿದೆ
ಪ್ರೀತಿಯಿಂದ ಚುಂಬಿಸುವ
ಮುಗಿಲೆತ್ತರದ ಬೆಟ್ಟ



ಒಂದಾಗಿ ಹಗಲು ರಾತ್ರಿಗಳು
ತೆರೆದುಕೊಂಡು ಕಾಯುತ್ತಿವೆ ಕಣ್ಣುಗಳು
ಮನೆಮಂದಿ ಹೆಂಡತಿ
ಮುದ್ದು ಮಕ್ಕಳ ನೆನೆಯುತ್ತ
ಕಾಣುತ್ತಿವೆ ಹಗಲುಗನಸುಗಳು

ಫಿರಂಗಿ ಬಂದೂಕುಗಳು
ಕೈಮರಗಳಾಗಿ ತೋರುತ್ತಿವೆ
ಸುಳ್ಳಿನ ಸ್ವರ್ಗದ ದಾರಿಗಳು

ಜರಗನಹಳ್ಳಿ ಶಿವಶಂಕರ್
ಜರಗನಹಳ್ಳಿ, ಜೆ. ಪಿ. ನಗರ, ಬೆಂಗಳೂರು - ೭೮

## ಸಾಯಂಕಾಲದ ನೋಟಗಳು

ಮಾತಿನ ಮಳಿಗೆಯು ಮಾಡಿದ ಸರಕನು
ಮಾರುವ ಸಿದ್ಧತೆ ನಡೆಯುತಿದೆ

ಓದುವ ಹುಡುಗರ ಆಟದ ಚೆಂಡನು
ಬೇಡುವ ಮಕ್ಕಳು ನೋಡುತಿವೆ

ಪಡಗಳ ಜೋಡಿಸಿ ಸವೆಯುವ ಸೇತುವೆ
ಕುರ್ಕುರ ಮರಕ್ಕೆಯು ಬೇಡುತಿದೆ

ಮರವನ್ನೇರುವ ರಸ್ತೆಯ ಸಾಗುವ ಹಳೆಟನ
ನಾಗರ ಸ್ನಾನಕೆ ಕರೆಯುತಿದೆ !



ತರತಮ ಚಹರೆಯ ಪತ್ತೆಯ ದಳಗಳು
ನಿಗೂಢ ತುಣಕೆ ತೆರಳುತಿವೆ !

ಶತಶತಮಾನದ ದುಮ್ಮಾನದ ನೆನಪು
ಕರಿ ಮುಗಿಲೊಡಲಲಿ ಬೇಯುತಿದೆ

ಮರಗಳ ಸಂತಸ ಸಂಪಿಗೆ ಹೂಗಳು,
ಸಂಜೆಯ ಹೊತ್ತಿಗೆ ಬಾಡುತಿವೆ;
ತಾಯಿಯ ಕೊಕ್ಕಿನ ತುತ್ತಿನ ನೆನಪಿನ
ತಬ್ಬಲಿ ಮರಿಗಳು ನೋಡುತಿವೆ;
ನೆನೆಯುತ, ನೆನೆಯುತ ಹಾಡುತಿವೆ !

ಕುತ್ಯಾಳ ನಾಗಪ್ಪಗೌಡ (ಕಿರಣ)
ಕಿರಣ ಕುಟೀರ, ಸುಳ್ಯ-೫೭೪ ೨೩೯

# ಗಜಗಾತ್ರ ಮಂತ್ರಿಮಂಡಲ ಮತ್ತು ವೆಚ್ಚಗಳು

**ಎನ್. ಪಿ. ಜಗದೀಶ್**

ಇತ್ತೀಚಿನ ವಿಧಾನಸಭಾ ಚುನಾವಣೆಯ ನಂತರ ಹೊಸ ಮಂತ್ರಿಮಂಡಲ ಅಸ್ತಿತ್ವಕ್ಕೆ ಬಂದಿದೆ. ನಿರೀಕ್ಷೆಯಂತೆ ಮುಖ್ಯಮಂತ್ರಿಗಳು ನಾನಾ ಬಗೆಯ ಒತ್ತಡಕ್ಕೆ ಮಣಿದಿರುವುದು ಸ್ಪಷ್ಟ. 42 ಮಂದಿಯನ್ನು ಸಂಪುಟಕ್ಕೆ ಸೇರಿಸಿಕೊಂಡರೂ ಪ್ರಾದೇಶಿಕ ಪ್ರಾತಿನಿಧ್ಯ ನೀಡುವಲ್ಲಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರವರು ಸಂಪೂರ್ಣ ಯಶಸ್ವಿಯಾದಂತಿಲ್ಲ. ಈ ಗಜಗಾತ್ರದ ಮಂತ್ರಿಗಳಿಗೆ ಪ್ರತಿ ತಿಂಗಳು ತಗಲುವ ಖರ್ಚುಗಳ ವಿವರಗಳನ್ನು ಗಮನಿಸುವುದು ಸೂಕ್ತವಾಗಿದೆ. ಸಾಮಾನ್ಯವಾಗಿ ಶಾಸಕರಿಗೆ ಲಭ್ಯವಿರುವ ಎಲ್ಲ ಸವಲತ್ತುಗಳು ಸಚಿವರಿಗೂ ಇರುತ್ತವೆ. ಅವಲ್ಲದೆ ಇನ್ನು ಕೆಲವು ಬೇರೆ ಸೌಲಭ್ಯಗಳೂ ಉಂಟು.

**ಮಂತ್ರಿಗಳ ಸಂಬಳ ಮತ್ತು ಭತ್ಯೆಗಳು**

| | |
|---|---|
| ಸಂಪುಟ ದರ್ಜೆ ಸಚಿವರ ಸಂಬಳ | 2,500-00 |
| ಇತರ ಭತ್ಯೆಗಳು (ತಿಂಗಳಿಗೆ) | 14,000-00 |
| ರಾಜ್ಯಸಚಿವರಿಗೆ ಸಂಬಳ | 2,250-00 |
| ಇತರೆ ಭತ್ಯೆಗಳು (ತಿಂಗಳಿಗೆ) | 14,000-00 |
| ಆತಿಥ್ಯ ಭತ್ಯೆ ಪ್ರತಿ ತಿಂಗಳಿಗೆ | 2,500-00 |
| ಸಚಿವರ ಕಾರಿಗೆ ಪ್ರತಿ ಕಿ. ಮೀ. | 8-00 |
| ಪ್ರವಾಸದ ಭತ್ಯೆ (ದಿನಕ್ಕೆ) | 500-00 |
| ಹೊರ ರಾಜ್ಯದ ಪ್ರವಾಸದ ಭತ್ಯೆ (ದಿನಕ್ಕೆ) | 650-00 |

**ವಸತಿ**

| | |
|---|---|
| ಸರ್ಕಾರಿ ಬಂಗಲೆ ಅಥವಾ ಖಾಸಗಿ ಮನೆಗೆ ಪ್ರತಿ ತಿಂಗಳ ಬಾಡಿಗೆ ಸುಮಾರು | 25,000-00 |
| ಸಚಿವರ ಗೃಹ ನಿತ್ಯದ ಉಪಯೋಗಿ ವಸ್ತುಗಳಿಗೆ ಸುಮಾರು (5 ಲಕ್ಷದವರೆಗೆ ಅವಕಾಶ) | 5,00,000-00 |

**ಪ್ರಯಾಣಗಳು**

ವಿಮಾನ - ವೈ. ಮತ್ತು ಜೆ. ವರ್ಗದ ಪ್ರಯಾಣ
ರೈಲು - ಪ್ರಥಮ ದರ್ಜೆ ಪ್ರಯಾಣ (ಹವಾನಿಯಂತ್ರಿತ)
ನಿತ್ಯ ಬಳಕೆಯ ಕಾಂಟೆಸ್ಸಾ ಕಾರು

**ಮಂತ್ರಿಗಳ ಸಿಬ್ಬಂದಿ**

ಆಪ್ತ ಸಹಾಯಕ - 1, ಸಹಾಯಕರು - 5, ರಕ್ಷಾದಳ- 3 ದಲಾಯತ್ ಮತ್ತು ಅಡಿಗೆಯವರು - 4, ವಾಹನ ಚಾಲಕರು- 2 ಸಚಿವರು ಹಾಗೂ ಕುಟುಂಬಕ್ಕೆ ಉಚಿತ ವೈದ್ಯಕೀಯ ಸೌಲಭ್ಯವಿದೆ.

ಸಚಿವರಿಗೆ ಸಂಬಳ ಕಡಿಮೆ ನಿಗದಿಪಡಿಸಿ ತೆರಿಗೆಯಿಂದ ವಿನಾಯಿತಿ ಪಡೆಯುವುದನ್ನು ಹಾಗೂ ವಾಹನಗಳು ಪ್ರತಿ ಕಿ. ಮೀ.ಗೆ 6ರಿಂದ 7 ರೂ.ಗೆ ಸಿಗುವಾಗ 8 ರೂ. ನಿಗದಿ ಮಾಡಿರುವುದನ್ನು ಗಮನಿಸಬಹುದು.

ಸಚಿವರಿಗೆ ಒದಗಿಸಿರುವ ಸರ್ಕಾರಿ ಬಂಗಲೆಗಳಿಗೆ ಸುಮಾರು 5.00 ಲಕ್ಷ ರೂ. ಮೌಲ್ಯದ ಗೃಹೋಪಯೋಗಿ ವಸ್ತುಗಳನ್ನು ಖರೀದಿಸುವಲ್ಲಿ ಹಲವಾರು ಬಾರಿ ಅವು ಕಳಪೆ ವಸ್ತುಗಳಾಗಿರುತ್ತವೆ. ಈ ಖರೀದಿಯಲ್ಲಿ ಕಮಿಷನ್ ವ್ಯವಹಾರ ಉಂಟು ಮತ್ತು ಕೊನೆಯಲ್ಲಿ ಇವುಗಳನ್ನು ಬಿಟ್ಟುಹೋಗುವ ಸಂದರ್ಭದಲ್ಲಿ ಇಲಾಖೆ ಕಡಿಮೆ ಬೆಲೆಗೆ ಹರಾಜು ಮಾಡುತ್ತದೆ. ಯಾವಾಗಲೂ ಅಧಿಕಾರಿಗಳೇ ಅವನ್ನು ಅತ್ಯಂತ ಕಡಿಮೆ ಬೆಲೆಗೆ ಲಪಟಾಯಿಸಿ ಕೊಳ್ಳುತ್ತಾರೆಂದು ತಿಳಿದುಬಂದಿದೆ.

ಹಲವಾರು ಸಚಿವರಿಗೆ ಬೆಂಗಳೂರಿನಲ್ಲಿ ಸ್ವಂತ ಮನೆಗಳಿದ್ದರೂ ಬಾಡಿಗೆ ಮನೆ ಪಡೆಯುವುದು ಸ್ವಾಭಾವಿಕ. ಕೆಲವೇ ಸಚಿವರು ತಮ್ಮ ಸ್ವಂತ ಮನೆಯಲ್ಲಿದ್ದು, ಪ್ರತಿ ತಿಂಗಳು 5,000 ರೂ.ಗಳ ಬಾಡಿಗೆ ಪಡೆಯುತ್ತಿದ್ದಾರೆ.

**ಕಂಪ್ಯೂಟರ್ ಕೃಷ್ಣ ಮತ್ತು ಗಣಪತಿ ಹೋಮ**

ಮುಖ್ಯಮಂತ್ರಿಗಳು ತಮ್ಮ ಅಧಿಕೃತ ನಿವಾಸ 'ಅನುಗ್ರಹ'ಕ್ಕೆ ವರಾಂಡ, ಮುಖದ್ವಾರ, ಮತ್ತಿತರ ವಾಸ್ತು ಬದಲಿಗೆ ಬೆನ್ನತ್ತಿ 12 ಲಕ್ಷ ಖರ್ಚಾಗಿದೆ ಎಂದು ಅವರೇ ಒಪ್ಪಿದ್ದಾರೆ. ಇದು ಸುಮಾರು 40 ಲಕ್ಷದವರಿಗೆ ಖರ್ಚಾಗಿದೆ ಎಂದು ಸುದ್ದಿಗಳಿವೆ. ಅನುಗ್ರಹಕ್ಕೆ ಶುದ್ಧಿ ಪುಣ್ಯಾಹ, ಗಣಪತಿ ಹೋಮ ಮಾಡಿಸುವ ಮೂಲಕ ಸಾರ್ವಜನಿಕ ಗೃಹಗಳನ್ನು ತಮ್ಮ ಖಾಸಗಿ ನಿವಾಸದಂತೆ ಬಳಸಿದ್ದಾರೆ. ಕಂಪ್ಯೂಟರ್ ಯುಗದ ಕೃಷ್ಣ ವಾಸ್ತು ಮತ್ತು ಗಣಪತಿ ಹೋಮ ನಡೆಸಿರುವುದು ಆಶ್ಚರ್ಯ ಉಂಟುಮಾಡುತ್ತದೆ.

**ಮಂತ್ರಿಗಳ ಕಛೇರಿಗಳ ಶೃಂಗಾರ**

ವಿಧಾನ ಸೌಧದಲ್ಲಿ ಸಚಿವರಿಗೆ ನೀಡಲಾಗುವ ಕೊಠಡಿಗಳಿಗೆ ವಾಸ್ತು ಇತ್ಯಾದಿ ನೋಡಿ ಆರಿಸಿಕೊಳ್ಳುವ ಪ್ರಯತ್ನ ನಡೆಯಿತು. ಈಗ ಕೊಠಡಿಯನ್ನು ಶೃಂಗರಿಸುವ ಕೆಲಸ ನಡೆದಿದೆ. ಈ ಅಲಂಕಾರಗಳಿಗೆ ತಗಲುವ ಖರ್ಚು ಸುಮಾರು ಒಂದು ಕೋಟಿ ರೂಪಾಯಿಗಳಿಗೆ ಹೆಚ್ಚಾಗುವ ನಿರೀಕ್ಷೆ ಇದೆ. ಕೊಠಡಿಗಳನ್ನು ಅತ್ಯಾಧುನಿಕ ಹಾಗೂ ಶ್ರೀಮಂತವಾಗಿ ಕಾಣುವಂತೆ ಮಾಡುವ ಪ್ರಯತ್ನ ನಡೆದಿದೆ. ಕುರ್ಚಿ, ಮೇಜು, ನೆಲಹಾಸು, ಕಿಟಕಿ, ಬಾಗಿಲುಗಳ ಪರದೆ ಮುಂತಾದ ಸಾಮಗ್ರಿಗಳನ್ನು ಹೊಸದಾಗಿ ಜೋಡಿಸಲಾಗುತ್ತಿದೆ. ಒಬ್ಬೊಬ್ಬ ಹೊಸ ಮಂತ್ರಿ ಬಂದಾಗಲೂ ಈ ಕೊಠಡಿಗಳಿಗೆ ಸಾರ್ವಜನಿಕ ಹಣದಿಂದ ಇಂತಹ ಸಂಸ್ಕಾರ ನಡೆಯುತ್ತದೆ !

ತೆಂಗಿನ ನಾರಿನ ನೆಲಹಾಸಿಗೆ ಬದಲಿಗೆ ಸಚಿವರು ತಮ್ಮ ಕೊಠಡಿಗಳಿಗೆ ವೆಲ್ವೆಟ್ ಅಥವಾ ಉಣ್ಣೆಯಂತೆ ಮೃದುವಾಗಿರುವ ನೆಲಹಾಸಲು ಹಾಕಿಸುವ ಒತ್ತಡ ತಂದಿದ್ದಾರೆ. ತೆಂಗಿನ ನಾರಿನ ಹೆಣಿಗೆಯ ನೆಲಹಾಸಿಗೆ ಚದರ ರೂ. 10 ಬೆಲೆ ಇದೆ. ಆದರೆ ಉಣ್ಣೆಯ ನೆಲಹಾಸಿಗೆ ರೂ. 45ಕ್ಕೂ ಹೆಚ್ಚು ತೆರಬೇಕಾಗುತ್ತದೆ. ಸಚಿವರು ಕುಳಿತುಕೊಳ್ಳುವ ಕುರ್ಚಿಗಳು ಚೆನ್ನಾಗಿದ್ದರೂ ಜನತಾದಳ ಸಚಿವರು ಕುಳಿತ ಕುರ್ಚಿಗಳೆಂದು ಅವನ್ನು ಬದಲಾಯಿಸುತ್ತಿದ್ದಾರೆ. ಹೀಗಾಗಿ ಹೆಚ್ಚಿನ ಬೆಲೆಯ 43 ಸುಖಾಸೀನಗಳನ್ನು ಹೊಸದಾಗಿ ಖರೀದಿಸಲು ಪ್ರಯತ್ನ ನಡೆದಿದೆ. ಆಗ ಹಳೆಯವು ಯಾರದೋ ಮನೆಗಳನ್ನು

*ಒಬ್ಬ ಮಂತ್ರಿಯ ಸಂಬಳವನ್ನು ನಿರ್ಣಯಿಸಬೇಕಾದರೆ ಮುಖ್ಯವಾಗಿ ಯಾವ ವಿಚಾರಗಳಿರಬೇಕು ? ನನ್ನ ನಿರ್ಣಯದಂತೆ ಮಾನ್ಯರೆ, ಅದರಲ್ಲಿ ನಾಲ್ಕು ವಿಚಾರಗಳಿರಲೇಬೇಕು. ಮೊದಲನೆಯ ವಿಚಾರ ನಿಃಸಂಶಯವಾಗಿಯೂ ಸಮುದಾಯದ ಸಾಮಾಜಿಕ ನಾಯಕರಾಗಿರಬೇಕಾದ ಅವರ ಸಾಮಾಜಿಕ ಸ್ಥಾನಮಾನ; ಎರಡನೆಯ ವಿಚಾರ ಅವರ ದಕ್ಷತೆ; ಮೂರನೆಯ ವಿಚಾರ ಅವರ ಪ್ರಜಾಸತ್ತೆಯದು; ನಾಲ್ಕನೆಯ ವಿಚಾರ ಅವರ ನಿಷ್ಠೆ ಹಾಗೂ ಆಡಳಿತದಲ್ಲಿ ಪಾವಿತ್ರ್ಯ. ಮೊದಲನೆಯ ವಿಚಾರವನ್ನು ಮಿತಿಮೀರಿ ವಿವರಿಸುವುದಕ್ಕೆ ನಾನು ಸಿದ್ಧನಿಲ್ಲ. ವೈಯಕ್ತಿಕವಾಗಿ ನನ್ನ ವಿಚಾರ ಹೀಗಿದೆ. ದೇಶದ ಪ್ರಥಮ ನಾಗರಿಕರಾದ ನಮ್ಮ ದೇಶದ ಮಂತ್ರಿಗಳು, ಸುಸಂಸ್ಕೃತವಾದ, ಕಲಾ ಕಾಳಜಿಯುಳ್ಳ, ಕಲಿಯುವುದರಲ್ಲಿ ಆಸಕ್ತಿಯುಳ್ಳ ಜೀವನವನ್ನು ಸಾಗಿಸಬೇಕು. ಇವರ ಜೀವನ ಇನ್ನಿತರರಿಗೆ ಮಾದರಿಯಾಗಬೇಕು. ಆದರೆ ನಮ್ಮ ಮಿತ್ರರು ವಿಷಯದ ಅಂಶವನ್ನು ವಿಚಾರ ಮಾಡದೇ ಹೋದರೆ, ಆಮೇಲೆ ಇದನ್ನೆಲ್ಲ ಸಂಪೂರ್ಣವಾಗಿ ಬಿಟ್ಟುಬಿಡಲು ನಾನು ಸಿದ್ಧನಿರುವೆ. ನಿಜವಾಗಿಯೂ ಮಂತ್ರಿಗಳ ಸಂಬಳಗಳನ್ನು ನಿರ್ಣಯಿಸುವಾಗ ಅವರ ದಕ್ಷತೆ, ಪ್ರಜಾಸತ್ತೆಯ ಪ್ರೇಮ ಹಾಗೂ ನಿಷ್ಠೆ ಇವುಗಳ ವಿಚಾರಗಳನ್ನೂ ಎಂದೂ ಕಡೆಗಣಿಸುವಂತಿಲ್ಲ. ಮಂತ್ರಿಗಳ ಕರ್ತವ್ಯಗಳು ಹಾಗೂ ಕಾರ್ಯಗಳು ಇದರ ಬಗ್ಗೆ ಮಾನ್ಯ ಮುಖ್ಯ ಮಂತ್ರಿಗಳು ಯಾವ ದೃಷ್ಟಿ ತಾಳಿರುವರೆಂಬುದು ನನಗೆ ಗೊತ್ತಿಲ್ಲ. ಮಂತ್ರಿಗಳು ಏನೂ ಮಾಡಬೇಕಾಗಿಲ್ಲ; ಅವರು ಓಡಾಡುತ್ತಿರಬೇಕು, ಧ್ವಜಾರೋಹಣ ಮಾಡಬೇಕು, ಗೌರವ ರಕ್ಷಕ ರಚಿತವಾದ ಕೆಂಪುಬಣ್ಣದ ಬಟ್ಟೆಯುಳ್ಳ ಮಹಿಳೆಯರಿಂದ ವಂದನೆ ಸ್ವೀಕರಿಸಬೇಕು ಎಂಬ ವಿಚಾರಗಳು ಮುಖ್ಯಮಂತ್ರಿಯವರದು ಆಗಿದ್ದರೆ, ಆದರ ಪ್ರಸ್ತಾಪವೇ ಬೇರೆ. ನನಗೆ ಸಾಮರ್ಥ್ಯವಿದ್ದಷ್ಟೂ ಶಕ್ತಿಯನ್ನುಪಯೋಗಿಸಿ ಒತ್ತುಕೊಟ್ಟು ಹೇಳುವುದಾದರೆ ನನ್ನ ದೃಷ್ಟಿಯಲ್ಲಿ ಮಂತ್ರಿಮಂಡಲಿಯಿಂದ ನಾವು ಏನಾದರೂ ನಿರೀಕ್ಷಿಸುತ್ತಿದ್ದರೆ ಅದು ಅವರ ದಕ್ಷತೆ.*

*- ಮುಂಬಯಿ ವಿಧಾನ ಪರಿಷತ್ತಿನಲ್ಲಿ 23-8-1937ರಂದು ಮಂತ್ರಿಗಳ ಸಂಬಳಗಳ ಮಸೂದೆ ಕುರಿತ ಚರ್ಚೆಯಲ್ಲಿ ಡಾ|| ಬಿ. ಆರ್. ಅಂಬೇಡ್ಕರ್ ಮಾಡಿದ್ದ ಭಾಷಣದ ಒಂದು ಭಾಗ.*

ಸೇರಿಕೊಳ್ಳುತ್ತವೆ.

### ದುಬಾರಿ ಆ್ಯಂಟಿ ಚೇಂಬರುಗಳು

ಸಚಿವಾಲಯದಲ್ಲಿರುವ ಮಂತ್ರಿಗಳ ವಿಶಾಲವಾದ ಕಛೇರಿಗಳಲ್ಲಿ ದಣಿವಾರಿಸಿಕೊಳ್ಳಲು ಹಾಗೂ ಖಾಸಗಿ (ಗೌಪ್ಯ) ಮಾತುಕತೆ ನಡೆಸಲು ಇರುವ ಆ್ಯಂಟಿ ಚೇಂಬರ್‌ಗಳಿಗೆ ಸಾಕಷ್ಟು ಸೌಲಭ್ಯ ಒದಗಿಸಲಾಗುತ್ತದೆ. ಕನಿಷ್ಠ ನಾಲ್ವರು ಕೂರಲು ಹಾಗೂ ಸಚಿವರು ಮಲಗಿ ವಿಶ್ರಾಂತಿ ಪಡೆಯಲು ವ್ಯವಸ್ಥೆ ಇದೆ. ಉತ್ತಮ ಗುಣಮಟ್ಟದ ದೀಪಗಳು, ಫ್ಯಾನುಗಳು ಜೋಡಿಸಲಾಗುತ್ತವೆ. ಆದರೆ ಪ್ರತಿಬಾರಿಯೂ ಹೊಸದಾಗಿಯೇ ಏಕೆ ಮಾಡಬೇಕೋ ತಿಳಿಯದು. ಇಂತಹ ದುಂದುಗಾರಿಕೆಯು ಮಂತ್ರಿಗಳಿಗೆ ಅಸಹ್ಯ ಹುಟ್ಟಿಸದಿರುವುದು ಒಂದು ಸೋಜಿಗ.

### ಸಚಿವರ ಕಂಪ್ಯೂಟರ್

ಮಂತ್ರಿಗಳ ಕೊಠಡಿಗಳಿಗೆ ಅತ್ಯಾಧುನಿಕ ಕಂಪ್ಯೂಟರ್‌ಗಳನ್ನು ಒದಗಿಸಲಾಗುತ್ತದೆ. ತಲಾ ಒಂದು ಕಂಪ್ಯೂಟರ್, ಪ್ರೊಸೆಸರ್, ಇಂಕ್‌ಜೆಟ್ ಪ್ರಿಂಟರ್‌ಗಳನ್ನು ಸರಬರಾಜು ಮಾಡಲಾಗುತ್ತಿದ್ದು, ವಿದ್ಯುದೀಕರಣವೂ ಸೇರಿದರೆ ತಲಾ 1 ಲಕ್ಷ ರೂ. ವೆಚ್ಚವಾಗುತ್ತದೆ. ಇದರ ಜೊತೆಗೆ ಎಲ್ಲಾ ಶಾಸಕರಿಗೆ ಕಂಪ್ಯೂಟರ್ ನೀಡುವುದಾಗಿ ಮುಖ್ಯಮಂತ್ರಿಗಳು ಭರವಸೆ ನೀಡಿದ್ದಾರೆ. ಮಂತ್ರಿಗಳ ಕಂಪ್ಯೂಟರ್ ಬಳಕೆಗೆ ನಮ್ಮ ವಿರೋಧವಿಲ್ಲ. ಆದರೆ ಈಗಾಗಲೆ ಇರುವ ಗ್ರಂಥಾಲಯ, ವ್ಯಾಯಾಮ ಶಾಲೆಗಳತ್ತಲೂ ಅವರ ಗಮನ ಹರಿಯಲೆಂಬ ಆಶಯ ನಮ್ಮದು. ಶಾಸಕಾಂಗ ಸಮಿತಿಗಳು ಮತ್ತು ಶಾಸನಸಭೆಯ ಅಧಿವೇಶನಗಳಲ್ಲಿ ಆಸಕ್ತಿಯಿಂದ ಭಾಗವಹಿಸುವುದು ಹಾಗೂ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದು ಸಹ ಅವರಿಗೆ ಆರೋಗ್ಯಕರವಲ್ಲವೆ?

### ಸಚಿವರ ಮನೆಗಳು ಮತ್ತು ವಾಸ್ತು

ಸರ್ಕಾರಿ ಬಂಗಲೆಗಳು ಮತ್ತು ಖಾಸಗಿ ಮನೆಗಳನ್ನು ಸಚಿವರಿಗೆ ಹುಡುಕಿಕೊಡುವಲ್ಲಿ ಇಲಾಖೆಯ ಅಧಿಕಾರಿಗಳು ಪರದಾಡುತ್ತಾರೆ. ಕೆಲವು ಸಚಿವರ ಧರ್ಮಪತ್ನಿಯರ ಆಸೆ, ಅಭಿರುಚಿ, ವಾಸ್ತು ಇತ್ಯಾದಿಗಳ ಕಿರಿಕಿರಿಯನ್ನು ಅವರು ಎದುರಿಸಬೇಕು. ಆಡಳಿತ ಸಿಬ್ಬಂದಿ ಸುಧಾರಣೆ ಇಲಾಖೆಯ ಅಧೀನದಲ್ಲಿ ಒಟ್ಟು 29 ಬಂಗಲೆಗಳು ಇದ್ದರೂ ಎಂಟು ನ್ಯಾಯಾಧೀಶರಿಗೆ, ಒಂದು ವಿಧಾನ ಸಭಾ ಅಧ್ಯಕ್ಷರಿಗೆ ಹಾಗೂ ಇನ್ನೊಂದು ವಿಧಾನ ಪರಿಷತ್ ಸಭಾಧ್ಯಕ್ಷರಿಗೆ ನೀಡಿ ಉಳಿದ 19 ಮಾತ್ರ ಸಚಿವರಿಗೆ ಲಭ್ಯವಿದೆ. ಉಳಿದ ಸಚಿವರಿಗೆ ಖಾಸಗಿ ಮನೆಗಳು, ಕುಮಾರಕೃಪ ಮತ್ತು ಬಾಲಬ್ರೂಯಿ ಅತಿಥಿ ಗೃಹ, ಇವೇ ಆಶ್ರಯ.

### ಸುಖೀ ರಾಜ್ಯದ ಕಲ್ಪನೆ

ಇಂದು ಸರ್ಕಾರದ ಅಸ್ತಿತ್ವದ ಬಗ್ಗೆಯೇ ನಾಗರಿಕರು ಪ್ರಶ್ನಿಸುತ್ತಿದ್ದಾರೆ. ಸರ್ಕಾರವೇ ಎಲ್ಲವನ್ನೂ ಖಾಸಗಿಯವರಿಗೆ ವಹಿಸುತ್ತಿರುವಾಗ ಮಂತ್ರಿಗಳ ಸಂಖ್ಯೆ ಏಕೆ ಏರುತ್ತಿದೆ ? ನೀರು, ವಿದ್ಯುತ್, ರಸ್ತೆ, ವೈದ್ಯಕೀಯ, ವಸತಿ, ಎಲ್ಲವೂ ಖಾಸಗೀಕರಣಗೊಂಡರೆ ಸುಖೀ ರಾಜ್ಯದ ಕೆಲಸವಾದರೂ ಏನು ? ಆದಾಗ್ಯೂ ಸಚಿವರ ಸಂಖ್ಯೆ ಬೆಲೆಯೇರಿಕೆಯಷ್ಟೇ ಪ್ರಮಾಣದಲ್ಲಿ ಹಿಗ್ಗುತ್ತಿದೆ. ವೀರೇಂದ್ರ ಪಾಟೀಲರು 16 ಮಂತ್ರಿಗಳ ಚಿಕ್ಕ ಹಾಗೂ ದುಂದುವೆಚ್ಚವಿಲ್ಲದ ಸರ್ಕಾರ ರಚಿಸಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಕಳೆದ 10 ವರ್ಷಗಳ ಅವಧಿಯಲ್ಲಿ ವಿವಿಧ ಮುಖ್ಯಮಂತ್ರಿಗಳ ನೇತೃತ್ವದ ಸಂಪುಟಗಳಲ್ಲಿ ಇದ್ದ ಸಚಿವರ ಸಂಖ್ಯೆ ವಿವರ ಈ ರೀತಿ ಇದೆ:



| | |
|---|---|
| ವೀರೇಂದ್ರ ಪಾಟೀಲ್ | 16 ಮಂತ್ರಿಗಳು |
| ಎಸ್. ಬಂಗಾರಪ್ಪ | 33 ಮಂತ್ರಿಗಳು |
| ಎಂ. ವೀರಪ್ಪ ಮೊಯ್ಲಿ | 46 ಮಂತ್ರಿಗಳು |
| ರಾಮಕೃಷ್ಣ ಹೆಗಡೆ | 34 ಮಂತ್ರಿಗಳು |
| ಹೆಚ್. ಡಿ. ದೇವೇಗೌಡ | 37 ಮಂತ್ರಿಗಳು |
| ಜೆ. ಹೆಚ್. ಪಟೇಲ್ | 51 ಮಂತ್ರಿಗಳು |
| ಎಸ್. ಆರ್. ಬೊಮ್ಮಾಯಿ | 34 ಮಂತ್ರಿಗಳು |
| ಎಸ್. ಎಂ. ಕೃಷ್ಣ | 43 ಮಂತ್ರಿಗಳು |

ಸಚಿವರು ಹೆಚ್ಚಿದಾಗ ಆಡಳಿತ ಯಂತ್ರವು ಚುರುಕಾಗುತ್ತದೆ ಎಂಬುದಕ್ಕೆ ಯಾವ ಪ್ರಮಾಣವೂ ದೊರೆತಿಲ್ಲದಿರುವುದು ಅನುಭವದ ವಿಷಯ.

### ತರಬೇತಿ ಕೇಂದ್ರದ ಅಗತ್ಯ

ಇಂದು ನಮಗೆ ಬೇಕಾಗಿರುವುದು ದಕ್ಷತೆ, ಸರಳತೆ ಮತ್ತು ಪ್ರಾಮಾಣಿಕತನ. ಜನರ ತೆರಿಗೆ ಹಣದಲ್ಲಿ ದುಂದುವೆಚ್ಚದ ಸಚಿವರ ಅಗತ್ಯ ನಮಗಿಲ್ಲ. ರಾಜಕೀಯ ಪಕ್ಷಗಳು ಬಿ.ಫಾರಂ ನೀಡಿ, ಚುನಾವಣೆ ಫಲಿತಾಂಶದಲ್ಲಿ ಬಹುಮತ ಪಡೆದು, ಸರ್ಕಾರ ರಚಿಸಿ ಕೈಕಟ್ಟಿ ಕುಳಿತುಕೊಳ್ಳುವುದಲ್ಲ. ತಮ್ಮ ಪಕ್ಷಗಳಲ್ಲಿ ಗೆದ್ದುಬಂದಿರುವ ಶಾಸಕರಿಗೆ, ಮಂತ್ರಿಗಳಿಗೆ ಸಂಸದೀಯ ಕಲಾಪಗಳಲ್ಲಿ ಭಾಗವಹಿಸಲು ಸೂಕ್ತ ತರಬೇತಿ ನೀಡುವ ಜವಾಬ್ದಾರಿ ಪಕ್ಷಗಳದ್ದಾಗಬೇಕು. ಇಂತಹ ತರಬೇತಿ ಕೇಂದ್ರ ಸ್ಥಾಪನೆಯಿಂದ ಸಚಿವರು ಕ್ಷೇತ್ರದ ಜನರಿಗೆ ಹಾಗೂ ರಾಜ್ಯದ ಅಭಿವೃದ್ಧಿಗೆ ಪೂರಕವಾಗಿ ಕೆಲಸ ನಿರ್ವಹಿಸುವಂತೆ ಮಾಡಲು ಶಕ್ತವಾಗುತ್ತದೆಯೇ ಎಂಬುದನ್ನು ವಿವೇಚಿಸಬೇಕು.

### ಅಧಿಕಾರಶಾಹಿಗೆ ಕಡಿವಾಣ

ಚುನಾವಣೆಯಲ್ಲಿ ಜನರು ತಮಗೆ ಬೇಕಾದ ಪಕ್ಷಗಳನ್ನು ಬದಲಾಯಿಸಬಹುದು. ಆದರೆ ಅಧಿಕಾರಶಾಹಿಯನ್ನು ಬದಲಾಯಿಸಲು ಆಗುತ್ತಿಲ್ಲ. ಇದಕ್ಕೆ ಜನಪರ ಹೋರಾಟಗಳು ಅಗತ್ಯ. ಆದರೆ ಮಂತ್ರಿಗಳ ದೌರ್ಬಲ್ಯಗಳನ್ನು ಅಧಿಕಾರಶಾಹಿ ದುರುಪಯೋಗಪಡಿಸಿಕೊಳ್ಳುತ್ತಿರುವುದು ಕಂಡುಬಂದಿರುತ್ತದೆ. ಮಂತ್ರಿಗಳು ಈ ಅಧಿಕಾರಶಾಹಿಯನ್ನು ಹಿಡಿತದಲ್ಲಿಟ್ಟುಕೊಂಡು ಜನರ ಕೆಲಸಗಳನ್ನು ಮಾಡದಿದ್ದರೆ ಚುನಾವಣೆಯಲ್ಲಿ ಮತ್ತೆ ಅವರನ್ನು ಮನೆಗೆ ಕಳುಹಿಸುವುದು ಖಂಡಿತ. ಆದರೆ ಆವರೆಗೆ ಜನ ಇದನ್ನು ಪ್ರಶ್ನಿಸದೆ ಸಹಿಸುತ್ತಿರಬೇಕೆ ?

### ಮಂತ್ರಿಗಳ ಆಸ್ತಿ ವಿವರ

ಮಂತ್ರಿಗಳ ಆಸ್ತಿ ವಿವರ ಇನ್ನೂ ಚಿದಂಬರ ರಹಸ್ಯವಾಗಿಯೇ ಉಳಿದಿದೆ. ಭ್ರಷ್ಟಾಚಾರದ ನಿರ್ಮೂಲನದ ಸವಕಲು ಘೋಷಣೆಗಳನ್ನೇ ಮತ್ತೆ ಮುಂದಿಟ್ಟಿರುವ ಹಾಲಿ ಮುಖ್ಯ ಮಂತ್ರಿ ಎಸ್. ಎಂ. ಕೃಷ್ಣ ಸಹ ಆಸ್ತಿ ವಿವರ ಬಹಿರಂಗ ಪಡಿಸುವಂತೆ ಸಚಿವ ಸಹೋದ್ಯೋಗಿಗಳಿಗೆ ಸೂಚಿಸಿದ್ದಾರೆ. ಆದರೆ ಇದು ಕಾರ್ಯಗತವಾಗುವ ಭರವಸೆಯೇನೂ ಇಲ್ಲ. ಹಿಂದಿನ ಮುಖ್ಯಮಂತ್ರಿಗಳು ಇದೇ ರಾಗ ಹಾಡಿದ್ದರು. ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಹಾಕಲಾಗಿತ್ತು. ಆಗ ಲೋಕಾಯುಕ್ತ ಇಲಾಖೆ ಆಸ್ತಿ ವಿವರ ಸಲ್ಲಿಸದ ಸಚಿವರ ಪಟ್ಟಿಯನ್ನು ನ್ಯಾಯಾಲಯಕ್ಕೆ ಒಪ್ಪಿಸಿತು. ಅವರೇ ವಿವರಗಳನ್ನು ನೀಡದಿದ್ದರೆ ಸರ್ಕಾರವು ಅದನ್ನು ಬೇರೆ ಮೂಲಗಳಿಂದ ತಿಳಿದುಕೊಳ್ಳಲು ಸಾಧ್ಯವಿದೆ. ಕೆಲವು ಮಂತ್ರಿಗಳ ಹಾಗೂ ಅಧಿಕಾರಿಗಳ ಆಸ್ತಿ ತನಿಖೆ ನಡೆದಿದ್ದು ಅದರ ಪರಿಣಾಮ ಸೊನ್ನೆಯೇ ಆಗಿ ಉಳಿದಿದ್ದು ಸರ್ವವಿದಿತ.

ಈಗಲೂ ಇದು ಕೇವಲ ಅಗ್ಗದ ಜನಪ್ರಿಯತೆಯ ಘೋಷಣೆಯಾಗಿ ಕಾಲಗರ್ಭದಲ್ಲಿ ಹೂತು ಹೋಗುವುದೋ ಎಂದು ಕಾದು ನೋಡಬೇಕು. ಒಂದು ವೇಳೆ ಮಂತ್ರಿಮಾನ್ಯರು ವಿವರಗಳನ್ನು ಸಲ್ಲಿಸಿದರೂ ಅದರ ಸತ್ಯಾಸತ್ಯತೆ ಒಂದು ಗೂಢ ಪ್ರಶ್ನೆಯಾಗಿ ಉಳಿಯುವುದಂತೂ ಖಂಡಿತ. ಎಷ್ಟೋ ಸಚಿವರು ಈಗಾಗಲೇ ತಮ್ಮ ಆಸ್ತಿಪಾಸ್ತಿಗಳನ್ನು ಹತ್ತಿರದ ಸಂಬಂಧಿಕರ ಹೆಸರಿನಲ್ಲಿ ಬೇನಾಮಿಯಾಗಿ ಜೋಪಾನ ಮಾಡಿರುವುದು ಬಹಿರಂಗ ಸತ್ಯವಾಗಿದೆ.

ಸಾರ್ವಜನಿಕ ಬದುಕಿನಲ್ಲಿ ಮಂತ್ರಿಗಳು ತಮ್ಮ ಜವಾಬ್ದಾರಿ ಅರಿತು ಸಂಸದೀಯ ಮೌಲ್ಯಗಳನ್ನು ಕಾಪಾಡುವಲ್ಲಿ ಹಾಗೂ ರಾಜ್ಯದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಲೆಂದು ಆಶಿಸೋಣ.

ಎನ್. ಪಿ. ಜಗದೀಶ್.
ನಂ. ೩೦, ೩ನೇ ಮುಖ್ಯ ರಸ್ತೆ, ೨ನೇ ಕ್ರಾಸ್, ಕಲ್ಯಾಣನಗರ,
ನಾಗರಭಾವಿ ರಸ್ತೆ, ಬೆಂಗಳೂರು - ೫೬೦ ೦೭೨.

# ಟಿ. ವಿ. ಬ್ರಹ್ಮರಾಕ್ಷಸ

ಇಂದು ನಿಮ್ಮ ಮನೆ ತುಂಬಾ ಜನ ಬಂದಿದ್ದಾರೆ. ದಿವಾನಖಾನೆಯಲ್ಲಿ ಸ್ವಾರಸ್ಯಕರ ಮಾತುಕತೆಯಾಗುತ್ತಿದೆ. ಆದರೆ, ನಿಮ್ಮ ಮಕ್ಕಳಿಗೆ ಅದನ್ನು ಕೇಳಿಸಿಕೊಳ್ಳುವುದರಲ್ಲಿ ಆಸಕ್ತಿಯಿಲ್ಲ. ಅವರು ಯಾವುದೋ ಟಿವಿ ಕಾರ್ಯಕ್ರಮವನ್ನು ಬಹಳ ಗಮನವಿಟ್ಟು ನೋಡುತ್ತಿದ್ದಾರೆ. ಮನೆಗೆ ಬಂದವರೆಲ್ಲ ಹೋದಮೇಲೆ ಅವರೇನು ನೋಡುತ್ತಿದ್ದಾರೆಂಬುದರತ್ತ ಒಮ್ಮೆ ಕಣ್ಣು ಹಾಯಿಸಿ. ಆಕಸ್ಮಾತ್ತಾಗಿ ಅವರೂ ಬಂದು ದಿವಾನ ಖಾನೆಯಲ್ಲಿನ ಸಂಭಾಷಣೆಯನ್ನೇ ಕೇಳಿಸಿಕೊಳ್ಳುತ್ತಿದ್ದರೆ ಏನೇನೂ ಆಶ್ಚರ್ಯಪಡಬೇಕಿಲ್ಲ. ಇವತ್ತು ಟಿವಿ ಮಾಧ್ಯಮ ಮಕ್ಕಳ ಮೇಲೆ ಬೀರಿರುವ ಸಂಮೋಹಕ ಶಕ್ತಿ ಅಂತಹದ್ದು.

'ಹಾಗೆ ಹೇಳಲಾಗುವುದಿಲ್ಲ, ಅವರು ನೋಡುತ್ತಿರುವ ಕಾರ್ಯಕ್ರಮದಲ್ಲಿ ಜನಪ್ರಿಯ ನಟನಟಿಯರು ಭಾಗವಹಿಸುತ್ತಾರೆ, ಅಲ್ಲಿನ ಸಂಭಾಷಣೆ ಹೆಚ್ಚು ಕುತೂಹಲಕರವಾಗಿರುತ್ತದೆ,' ಎಂದೆಲ್ಲಾ ಹೇಳುವಿರಾ ? ನಿಮ್ಮ ಮಾತನ್ನು ಒಪ್ಪುವಂತಿದ್ದರೆ ಚೆನ್ನಾಗಿರುತ್ತಿತ್ತು. ಆದರೆ ವಾಸ್ತವ ಪರಿಸ್ಥಿತಿ ಅದಲ್ಲ. ಹಲವಾರು ಅಧ್ಯಯನಗಳು, ನೀವು-ನಾವೇ ಗಮನಿಸಿರುವ ಅನೇಕ ಅಂಶಗಳು ನಮ್ಮ ತಿಳುವಳಿಕೆಗೆ ತರುವ ವಿಷಯವೇ ಬೇರೆ. ಮಕ್ಕಳನ್ನು ತಮ್ಮೆದುರಿಗೆ ನಡೆಯುತ್ತಿರುವ ನಿಜಜೀವನದ ಸಂಗತಿಗಳಿಗಿಂತ ಟಿವಿ ಲೋಕದ ದೃಶ್ಯಾವಳಿಗಳೇ ಏಕೆ ಹೆಚ್ಚು ಸೆಳೆಯುತ್ತವೆಂಬುದಕ್ಕೆ ಬೇರೆಯೇ ಕಾರಣವಿದೆ. ನಿಜಜೀವನದ ಯಾವುದೇ ವಿದ್ಯಮಾನದಲ್ಲೂ ಒಂದು ರೀತಿಯ ಕೊಡುವ-ತೆಗದುಕೊಳ್ಳುವ ಪ್ರಕ್ರಿಯೆ ಯಿರುತ್ತದೆ. ದಿವಾನಖಾನೆಯಲ್ಲಿನ ಸಂಭಾಷಣೆಯಲ್ಲಿ ಭಾಗವಹಿಸಿದರೆ ಮಕ್ಕಳು ಬಂದವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳಬೇಕಾಗಬಹುದು, ಅವರೆದುರಿಗೆ ಸ್ವಲ್ಪ ಗಂಭೀರವಾಗಿ ಕುಳಿತುಕೊಳ್ಳಬೇಕಾಗಬಹುದು, ಅವರೆದುರಿಗೆ ಏನನ್ನೂ ತಿನ್ನದೆ ಸುಮ್ಮನೆ ಇರಬೇಕಾಗಬಹುದು, ಒಟ್ಟಿನಲ್ಲಿ ಮಕ್ಕಳು ಬಂದವರೆದುರಿಗೆ ಸಭ್ಯಸಮಾಜದ ಕೆಲವು ನಡಾವಳಿಗಳನ್ನು ಪರಿಪಾಲಿಸಬೇಕಾಗಬಹುದು.

ಆದರೆ, ಟಿವಿ ಅವರಿಂದ ಇದಾವುದನ್ನೂ ಅಪೇಕ್ಷಿಸುವುದಿಲ್ಲ. ಅದರೆದುರಿಗೆ ಅವರು ಮನಸ್ಸು ಬಂದಂತೆ ಇರಬಹುದು. ಕಾಲುಚಾಚಿ ಕುಳಿತುಕೊಂಡು, ಬಾಯಿಗೆ ಕುರುಕುಲು ತಿಂಡಿಗಳನ್ನು ಹಾಕಿಕೊಳ್ಳುತ್ತಾ ಹಾಗೆಯೇ ಹಗಲುಗನಸುಗಳನ್ನೂ ಕಾಣುತ್ತಿರಬಹುದು. ಟಿವಿ ಸಾಮ್ರಾಜ್ಯದಲ್ಲಿ ತಾವೇ ಸರ್ವಾಧಿಕಾರಿಗಳು. ಮನಸ್ಸಿಗೆ ಬಂದಂತೆ ಚಾನಲ್‌ಗಳನ್ನು ಬದಲಾಯಿಸುತ್ತಿದ್ದರೆ ಅದೇನೂ ಅಡ್ಡಿಪಡಿಸುವುದಿಲ್ಲ. ಏನನ್ನೋ ನೋಡುತ್ತ ಕುಳಿತಿರುವಂತೆಯೇ ಏನನ್ನೂ ನೋಡದೆಯೇ ಇರಬಹುದು. ಮನಸ್ಸನ್ನು ಇಷ್ಟಬಂದಂತೆ ಹರಿಬಿಡಬಹುದು ಅಥವಾ ಒಂದು ರೀತಿಯ ಶೂನ್ಯ ಸ್ಥಿತಿಯಲ್ಲಿಯೂ ಇರಿಸಿಕೊಂಡಿರಬಹುದು. ಹೇಳುವವರು ಕೇಳುವವರು ಯಾರೂ ಇರುವುದಿಲ್ಲ. ಅಂದಮೇಲೆ ಅಂಥ ಲೋಕದ ಒಂದು ವಿಲಕ್ಷಣ ಆಕರ್ಷಣೆಯಲ್ಲಿ ಆಶ್ಚರ್ಯವೇನಿದೆ.



ಆಕರ್ಷಣೆ ಸರಿಯೇ, ಆದರೆ ಆ ಆಕರ್ಷಣೆ ಕ್ರಮೇಣ ಮಕ್ಕಳ ಜಾಗೃತ ಮನಸ್ಸು, ಸುಪ್ತ ಮನಸ್ಸು ಎರಡರ ಮೇಲೆಯೂ ಯಾವ ರೀತಿಯ ಪ್ರಭಾವ ಬೀರುತ್ತದೆಂಬುದನ್ನು ಯೋಚಿಸಿದರೆ ಮಾತ್ರ ಈ ಟಿವಿ ಜಾಲಕ್ಕೆ ಎಂಥ ಸಮಾಜಘಾತುಕ ಶಕ್ತಿಯಿದೆಯೆಂಬ ಬಗ್ಗೆ ಭಯವೇ ಆಗುತ್ತದೆ. ಈ ಮಾತನ್ನು ಬರೆಯುವಾಗ ಟಿವಿಯ ಗುಣಾತ್ಮಕ ಪರಿಣಾಮಗಳನ್ನು ಕಡೆಗಣಿಸುತ್ತಿಲ್ಲ. ನಿಜ, ಅದು ಸಮಾಜದ ದೂರದೂರದ ಜನರನ್ನು ಪರಸ್ಪರ ಹತ್ತಿರಕ್ಕೆ ತರುತ್ತಿದೆ, ಅದರ ಎಷ್ಟೋ ಕಾರ್ಯಕ್ರಮಗಳು - ಉದಾಹರಣೆಗೆ, ನ್ಯಾಷನಲ್ ಜಿಯಾಗ್ರಫಿಕ್ ಮತ್ತು ಡಿಸ್ಕವರಿ ಚಾನಲ್‌ಗಳು, ನಮ್ಮದೇ ಯೂಜೀಸೀ ಕಾರ್ಯಕ್ರಮಗಳು - ತುಂಬಾ ಉಪಯುಕ್ತವಾಗಿರುತ್ತವೆ. ಇವತ್ತಿನ ಮಕ್ಕಳಿಗೆ ಹಿಂದಿನವರಿಗಿಂತ ಹೆಚ್ಚು ಜಾಗತಿಕ ತಿಳುವಳಿಕೆಯಿದೆ, ಎಲ್ಲವೂ ಒಪ್ಪಬೇಕಾದ್ದೇ. ಆದರೆ ಇನ್ನೂ ಹೆಚ್ಚಿನ ಕಟುಸತ್ಯವನ್ನು ಗಮನಕ್ಕೆ ತಂದುಕೊಳ್ಳುವುದಾದರೆ ಇವೆಲ್ಲಾ ಫ್ರಿಂಜ್ ಬೆನಿಫಿಟ್ಸ್ ಅಥವಾ ಮೇಲ್ಮೇಲಿನ ಪ್ರಯೋಜನಗಳು ಮಾತ್ರ. ಒಟ್ಟು ಸಂದರ್ಭದಲ್ಲಿ ನೋಡುವುದಾದರೆ ಟಿವಿ ಒಂದು ಸಕ್ಕರೆ ಲೇಪಿತ ಗುಳಿಗೆಯಂತೆ ಹೊರಗೆ ಮಧುರ; ಆದರೆ ಗುಳಿಗೆಯೊಳಗೆ ಆರೋಗ್ಯಕರ ಔಷಧವಿಲ್ಲ. ಅದರೊಳಗಿನ ಸತ್ವ ನಮ್ಮೆಲ್ಲರ ವೈಯಕ್ತಿಕ, ಸಾಂಸಾರಿಕ, ಸಾಮಾಜಿಕ ಜೀವನವನ್ನೇ ಏರುಪೇರು ಮಾಡಿ ಮತ್ತೆ ಸರಿಪಡಿಸಲಾಗದ ಸ್ಥಿತಿಗೆ ತರುವ ಶಕ್ತಿಯನ್ನು ಹೊಂದಿದೆಯೆಂಬುದರ ಬಗ್ಗೆ ಯಾವುದೇ ಅನುಮಾನವೂ ಬೇಕಿಲ್ಲ. ಬದಲಾಗುವ ಆ ಪರಿಸ್ಥಿತಿ ಒಳಿತಿನದೇ ಆಗಿರುತ್ತದೆಂಬ ಯಾವ ಆಶ್ವಾಸನೆಯೂ ಇಲ್ಲ. ಸದ್ಯದ ಅನುಭವವನ್ನು ತೆಗೆದುಕೊಳ್ಳುವುದಾದರೆ ಹದಗೆಡಿಸುವ ಸಂಭವವೇ ಹೆಚ್ಚು.

ತುಂಬಾ ಸಣ್ಣ, ಸ್ಪಷ್ಟ ಉದಾಹರಣೆಯನ್ನು ತೆಗೆದುಕೊಳ್ಳೋಣ. ಹಿಂದೆಲ್ಲ ನಮ್ಮಲ್ಲಿ ಸಂಜೆ ಹೊತ್ತು ಬಂಧುಮಿತ್ರರು ಪರಸ್ಪರ ಒಬ್ಬರೊಬ್ಬರ ಮನೆಗೆ ಹೋಗಿ ಸ್ವಲ್ಪಕಾಲ ಲಘು ಸಂಭಾಷಣೆಯಲ್ಲಿ ತೊಡಗಿ ಮರಳುವ ಪದ್ಧತಿಯಿತ್ತು. ಆದರೆ ಇಂದು ನೀವು ಸಂಜೆ ಯಾರ ಮನೆಗಾದರೂ ಹೋದಿರೆಂದುಕೊಳ್ಳಿ. ಅವರಿಗೆ ನಿಮ್ಮೊಡನೆ ಮಾತನಾಡುವುದರಲ್ಲಿ ಆಸಕ್ತಿ ಯಿರುವುದಿಲ್ಲ. ಯಾವುದೋ ಟಿವಿ ಚಿತ್ರವನ್ನು ನೋಡುತ್ತ ಉಪಚಾರಕ್ಕೆ ಮಾತ್ರ ಒಂದೊಂದು ಮಾತನ್ನು ಆಡುತ್ತಿರುತ್ತಾರೆ. ಅವರೊಂದಿಗೆ ನೀವೂ ಸ್ವಲ್ಪಹೊತ್ತು ಟಿವಿಯನ್ನು ನೋಡುತ್ತಿದ್ದು ವಾಪಾಸಾಗಬೇಕಾಗುತ್ತದೆ. ಇದರ ದೀರ್ಘಾವಧಿ ಪರಿಣಾಮದಲ್ಲಿ ಮಕ್ಕಳು ತಮಗರಿವಿಲ್ಲದಂತೆಯೇ ಬಂಧುಮಿತ್ರರ ಒಡನಾಟದಿಂದಲೇ ವಂಚಿತರಾಗುತ್ತಾರೆ. ಆ ಮಕ್ಕಳ ಆಸಕ್ತಿಯ ಕೇಂದ್ರವಾಗಿರುವ ಟಿವಿ ಕಲಾವಿದರಾಗಲೀ, ಜಾಹೀರಾತುದಾರರಾಗಲೀ ಅವರನ್ನು ಬಲ್ಲವರಾಗಿರುವುದಿಲ್ಲ, ಅವರ ಶ್ರೇಯೋಭಿವೃದ್ಧಿಯಲ್ಲಿ ಯಾವುದೇ ಆಸಕ್ತಿಯನ್ನೂ ಹೊಂದಿರುವವರಾಗಿರುವುದಿಲ್ಲ. ಹೀಗಾಗಿ ಕ್ರಮೇಣ ಅಂಥವರನ್ನು ಸುತ್ತಲ ನಿಜಜೀವನದ ಜಗತ್ತಿಗೆ ಸಂಬಂಧಿಸಿದಂತೆ ಪರಕೀಯ ಪ್ರಜ್ಞೆ ಆವರಿಸುತ್ತದೆ. ಇಂದು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಂತೂ ಇದೊಂದು ದೊಡ್ಡ ಸಾಮಾಜಿಕ ಸಮಸ್ಯೆಯೇ ಆಗಿದೆ. ಅಮೆರಿಕದಲ್ಲಿ ಇಂದು ದಿನಬೆಳಗಾದರೆ ನಾವು ಕೇಳುತ್ತಿರುವ ಸಮೂಹ ಹತ್ಯೆಗಳಿಗೆ ಮೂಲಕಾರಣ ಅಪರಾಧಿಗಳಿಗೆ ತಾನು ಯಾರಿಗೂ ಬೇಡದವ, ತನ್ನನ್ನು ಅರ್ಥಮಾಡಿಕೊಳ್ಳುವವರು ಈ ಜಗತ್ತಿನಲ್ಲಿ ಯಾರೂ ಇಲ್ಲ ಎಂಬ ನಿರಂತರ ಭಾವನೆಯೇ ಎಂಬುದನ್ನು ಮನಶ್ಶಾಸ್ತ್ರಜ್ಞರು ಒಪ್ಪಿಕೊಳ್ಳುತ್ತಾರೆ. ಆದರೆ ಪರಿಹಾರ ಮಾತ್ರ ಅವರ ಕೈಗೆಟುಕುವಂತಿಲ್ಲ. ಟಿವಿ ಬ್ರಹ್ಮರಾಕ್ಷಸ ಅವರನ್ನು ಮೀರಿ ಬೆಳೆದುಬಿಟ್ಟಿದ್ದಾನೆ. ಇಂದು ನಾವು ಗ್ಲೋಬಲ್ ವಿಲೇಜ್, ಅಂದರೆ ಇಡೀ ಪ್ರಪಂಚದ ಜನರೆಲ್ಲ ಒಬ್ಬರನ್ನೊಬ್ಬರು ಒಂದೇ ಹಳ್ಳಿಯ ಜನರಂತೆ ಬಲ್ಲವರಾಗಿರುವ ದಿನಗಳಲ್ಲಿ ಇದ್ದೇವೆ ಎಂಬ ಭ್ರಮೆಯನ್ನು ಸಮೂಹ ಮಾಧ್ಯಮವು ಬೆಳೆಸುತ್ತಿದೆ. ಆದರೆ, ವಿಚಿತ್ರವೆಂದರೆ ಈ ಗ್ಲೋಬಲ್ ವಿಲೇಜ್‌ನಲ್ಲಿ ಒಂದೇ ಕುಟುಂಬದ ಜನರಲ್ಲಿಯೇ, ಗಂಡ-ಹೆಂಡತಿ, ಅಪ್ಪ-ಮಗ, ತಾಯಿ-ಮಗಳು, ಸೋದರ-ಸೋದರಿ ಇವರಲ್ಲಿಯೇ ಪರಸ್ಪರ ಸಂವಹನ ಕ್ರಿಯೆ ಕಡಮೆಯಾಗುತ್ತಿದೆ ಎಂಬುದನ್ನು ಮಾತ್ರ ಪ್ರಜ್ಞಾವಂತರೆನಿಸಿಕೊಂಡಿರುವ ಜನ ಗಮನಕ್ಕೆ ತಂದುಕೊಂಡಿಲ್ಲ ಅಥವಾ ತಂದುಕೊಂಡೂ ಮರೆಮಾಚುತ್ತಿದ್ದಾರೆ. ಬಹುಶಃ ಇದಕ್ಕೆ ಕಾರಣ ಅವರೂ ಪಟ್ಟಭದ್ರ ಹಿತಾಸಕ್ತಿಗಳ

ಚಪ್ಪಲ್ಲಿ

ಮುಲಾಜಿನಲ್ಲಿ ಅಥವಾ ಕಪಿಮುಷ್ಟಿಯಲ್ಲಿ ಇರುವುದು.

ನಮ್ಮ ದೇಶದಲ್ಲೇ ಈಚಿನ ದಿನಗಳಲ್ಲಿ ಕೆಲವು ಮಕ್ಕಳು ಟಿವಿಯಲ್ಲಿನ ಸಾಹಸಗಳನ್ನು ನಿಜಜೀವನದಲ್ಲಿ ಅನುಕರಿಸಲೆತ್ನಿಸಿ ಅನಾಹುತಗಳನ್ನು ಮಾಡಿಕೊಂಡ ಪ್ರಸಂಗಗಳು ನಡೆದವು. ಅವು ಎಲ್ಲರಿಗೂ ತಿಳಿದವಾದ್ದರಿಂದ ಅವನ್ನು ಇಲ್ಲಿ ಪುನರುಲ್ಲೇಖಿಸಬೇಕಾಗಿಲ್ಲ. ಆದರೆ, ಟಿವಿ ಮಾತ್ರವಲ್ಲ ಅದರ ಪಿತಾಮಹನಾದ ಸಿನಿಮಾ ಸಹ ವೀಕ್ಷಕರ ಸುಪ್ತಮನಸ್ಸಿನ ಮೇಲೆ ಎಂಥ ಸೂಕ್ಷ್ಮ ಪರಿಣಾಮ ಬೀರುತ್ತದೆ ಎಂಬುದನ್ನು ನಿರ್ವಿವಾದವಾಗಿ ಋಜುವಾತು ಪಡಿಸುವ ಪ್ರಯೋಗವೊಂದು ಒಮ್ಮೆ ಅಮೆರಿಕದಲ್ಲಿ ನಡೆಯಿತು. ಅಲ್ಲಿನ ಕೆಲವು ಆಯ್ದ ಚಿತ್ರಮಂದಿರಗಳಲ್ಲಿ ಎರಡು ಬಗೆಯ ಪಾನೀಯಗಳನ್ನು ಮಾರಾಟಕ್ಕಿಟ್ಟು, ಕೆಲವು ಆಯ್ದ ದಿನಗಳಲ್ಲಿ ಯಾವುದಾದರೊಂದು ಪಾನೀಯದ ಜಾಹೀರಾತನ್ನು ಮಾತ್ರ ಸಿನಿಮಾ ಪ್ರದರ್ಶನ ವೇಳೆಯಲ್ಲಿ ಕ್ಷಣಾರ್ಧ ಕಾಲ ತೋರಿಸಲಾಗುತ್ತಿತ್ತು. ಅನಂತರ ಗಮನಿಸಿದಂತೆ, ಯಾವ್ಯಾವ ದಿನ ಯಾವ್ಯಾವ ಚಿತ್ರಮಂದಿರಗಳಲ್ಲಿ ಯಾವ್ಯಾವ ಪಾನೀಯದ ಜಾಹೀರಾತಿರುತ್ತಿತ್ತೋ ಅವು ಮಾತ್ರ ಹೆಚ್ಚು ಮಾರಾಟವಾಗುತ್ತಿದ್ದವು.

ಇದನ್ನು ಅರ್ಥ ಮಾಡಿಕೊಂಡಾಗ ನಮ್ಮ ಮಕ್ಕಳಿಗೆ ಇಂದು ತಮ್ಮ ಮನೆಗಳಲ್ಲಿನ ಮಾಮೂಲು ರುಚಿರುಚಿಯಾದ ತಿಂಡಿತೀರ್ಥಗಳಿಗಿಂತ ಟಿವಿಯಲ್ಲಿ ಜಾಹೀರುಪಡಿಸುವ - ಪಾಶ್ಚಿಮಾತ್ಯ ರಾಷ್ಟ್ರಗಳಲ್ಲೇ ಜಂಕ್ ಫುಡ್ ಅಥವಾ ಮುಗ್ಗಿದ ಆಹಾರ - ಎಂಬ ವರ್ಣನೆಗೆ ಗುರಿಯಾಗಿರುವ ಅನಾರೋಗ್ಯಕರ ಆಹಾರ ಪದಾರ್ಥಗಳು ಯಾಕೆ ಹೆಚ್ಚು ಇಷ್ಟವಾಗುತ್ತಿವೆ ಎಂಬುದು ಗೊತ್ತಾಗುತ್ತದೆ. ಹಾಗೆಯೇ ಸರಳ ಜೀವನ - ಉನ್ನತ ಚಿಂತನೆ ಎಂಬ ಧ್ಯೇಯದ ಸ್ಥಾನದಲ್ಲಿ ಇಂದು ಟಿವಿ ಜಾಹಿರಾತುಗಳಲ್ಲಿ ಅನವಶ್ಯಕ ಭೋಗವಸ್ತುಗಳ ಸಂಗ್ರಹವೇ ಏಕೆ ಜನತೆಗೆ ಬಾಲ್ಯಾವಸ್ಥೆಯಿಂದಲೇ ಪರಮಾದರ್ಶವಾಗುತ್ತಿದೆ ಎಂಬುದೂ ಅರ್ಥವಾಗುತ್ತದೆ. ಇದನ್ನೆಲ್ಲಾ ಕೇವಲ ಸಾಮಾನ್ಯೀಕರಿಸಿದ ಹೇಳಿಕೆಗಳು ಎಂದೇನೂ ತಳ್ಳಿಹಾಕುವಂತಿಲ್ಲ. ಒಂದು ಗುಟ್ಟನ್ನು ಬಹಳಷ್ಟು ಜನ ಗಮನಿಸಿಯೇ ಇರುವುದಿಲ್ಲ. ಅದೇಂದರೆ, ಯಾವುದೇ ಒಂದು ವಸ್ತುವನ್ನು ಅದು ನಿಜಜೀವನದಲ್ಲಿ ಇರುವುದಕ್ಕಿಂತ ಜಾಹೀರಾತಿನ ಚಿತ್ರಗಳಲ್ಲಿ ಹೆಚ್ಚು ಆಕರ್ಷಕವನ್ನಾಗಿ ಮಾಡಬಹುದು.

ಟಿವಿಯ ಒಳ್ಳೆಯ ಅಂಶಗಳ ಬಗ್ಗೆ ಹೇಳುತ್ತಾ ಕೆಲವರು ಅದರಲ್ಲಿ ತೋರುವ ಯೋಗ ಕಾರ್ಯಕ್ರಮಗಳು, ಆರೋಗ್ಯಕ್ಕೆ ಸಂಬಂಧಿಸಿದಂತೆ ಹೇಳುವ ವಿಷಯಗಳು ಜನಸಾಮಾನ್ಯರಿಗೆ ಒಳ್ಳೆಯ ತಿಳುವಳಿಕೆ ನೀಡುತ್ತವೆನ್ನುತ್ತಾರೆ. ಆದರೆ, ವಾಸ್ತವವಾಗಿ, ಅವನ್ನು ನೋಡುವವರು ಯಾವ ಪ್ರಮಾಣದ ಜನ, ಇನ್ನು ನೋಡಿಯೂ ಅನುಸರಿಸುವವರು ಅವರಲ್ಲೆಷ್ಟು ಮಂದಿ? ಇವತ್ತಿನ ಮಕ್ಕಳಿಗೆ ಕೊಡುವ ಆಹಾರಗಳಲ್ಲಿ ಟಿವಿ ಕಾರ್ಯಕ್ರಮಗಳ ಜಾಹಿರಾತುಗಳನ್ನಾಧರಿಸಿದ ಅಧಿಕ ಕೊಲೆಸ್ಟರಾಲಿನ, ರಾಸಾಯನಿಕ ಸಂರಕ್ಷಕಗಳನ್ನವಲಂಬಿಸಿದ, ಯಾವ ವಿಧದಲ್ಲಿಯೂ ದೇಹಕ್ಕೆ ಪೋಷಕ ಅಂಶಗಳನ್ನು ನೀಡದ ಎಷ್ಟೆಷ್ಟು ಆಹಾರಗಳನ್ನು ತಾವು ಕೊಡುತ್ತಿರುವರೆಂಬುದನ್ನು ಹಿರಿಯರು ಒಮ್ಮೆ ಯೋಚಿಸಿದಲ್ಲಿ ತಾವು ಮುಂದಿನ ಜನಾಂಗವನ್ನು ಹೇಗೆ ರೋಗಗ್ರಸ್ತ ಮಾಡುತ್ತಿರುವರೆಂಬ ಪರಿಜ್ಞಾನ ಬರುತ್ತದೆ. ಆದರೆ ಇವತ್ತಿನ ಜನ ಹಾಗೆ ಯೋಚಿಸುವ ಸಂಭವವೇ ಕಡಿಮೆ. ಏಕೆಂದರೆ ಅವರೂ ಟಿವಿ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಮನೆಯಲ್ಲಿ ಆರೋಗ್ಯಕರ, ರುಚಿಕರ, ಸ್ವಚ್ಛ ನಿಂಬೆಹಣ್ಣಿನ ಪಾನಕ ಮಾಡುವುದು ಸ್ವಲ್ಪ ಕಷ್ಟ. ಆದರೆ ಒಂದು ಬಾಟಲ್ ತೆಗೆದು ಅದರಲ್ಲಿನ ಸಕ್ಕರೆಭರಿತ, ಇಂಗಾಲಾಮ್ಲ ಮಿಶ್ರಣದ, ರಾಸಾಯನಿಕ ಸಂಯೋಜನೆಯ ದ್ರಾವಕವನ್ನು ಲೋಟಕ್ಕೆ ಸುರಿಯುವುದು ಬಹಳ ಸುಲಭ. ಇದರ ದೀರ್ಘಾವಧಿ ಪರಿಣಾಮ ಕುರಿತು ಯೋಚಿಸಲಾದರೂ ಎಲ್ಲಿ ಅವಕಾಶವಿರುತ್ತದೆ! ತಕ್ಷಣಕ್ಕೆ ನೋಡಲು, ಮಕ್ಕಳನ್ನು ತೊಂದರೆ ಕೊಡದಂತೆ ಸುಮ್ಮನಾಗಿಸಲು ಟಿವಿ ಕಾರ್ಯಕ್ರಮವಿರುತ್ತದಲ್ಲ.

ಹಾಗಾದರೆ ಮಾಡುವುದೇನಿದೆ? ಅದನ್ನು ಒಂದು ಸಣ್ಣ ಲೇಖನದಲ್ಲಿ ಪರ್ಯಾಲೋಚಿಸಲಾಗುವುದಿಲ್ಲ. ಮೊದಲು ಹಿರಿಯರು ತಮ್ಮ ಮುಂದೆ ಒಂದು ಭಯಂಕರ ಸಮಸ್ಯೆಯಿದೆಯೆಂಬುದನ್ನು ಪರಿಗಣನೆಗೆ ತಂದುಕೊಂಡರೆ ಸಾಕು. ಅನಂತರ ಪರಿಹಾರ ತನಗೆ ತಾನಾಗಿಯೇ ತೋರಿಬರುವುದು. ಉದಾಹರಣೆಗೆ, ಮೊದಲ ಸಾಮಾನ್ಯ ದಿನಗಳಲ್ಲೇ ಮಕ್ಕಳಿಗೆ ಒಂದು ಪುಟದಷ್ಟು ಪಠ್ಯಪುಸ್ತಕವನ್ನು ಸುಮಾರು ಅರ್ಧ ಗಂಟೆ ಕಾಲ ಓದುವಂತೆ ಮಾಡಲು, ಏಕಾಗ್ರತೆ ಬೆಳೆಸಲು ಕಷ್ಟವಾಗುತ್ತಿತ್ತು. ಆದರೆ ಇಂದು ಕೈಯಲ್ಲಿ ರಿಮೋಟ್ ಹಿಡಿದು ಕ್ಷಣಕ್ಷಣಕ್ಕೂ ಭಿನ್ನತರ ದೃಶ್ಯಾವಳಿಯನ್ನು ಬಯಸುವ ಮಕ್ಕಳಲ್ಲಿ ಏಕಾಗ್ರತೆಯೆನ್ನುವುದೇ ಒಂದು ಅಪೇಕ್ಷಣೀಯ ಅಂಶವಾಗುತ್ತಿದೆ ಎಂಬುದನ್ನು ಹಿರಿಯರು ಗಮನಿಸಬೇಕು.

ಹಾಗೆ ಕ್ಷಣಕ್ಷಣಕ್ಕೂ ಟಿವಿ ಪರದೆ ಮೇಲೆ ಪ್ರತ್ಯಕ್ಷರಾಗುವಂಥ ಮನುಷ್ಯರಾದರೂ ಎಂಥವರು? ಅವರಲ್ಲಿ ಬಹುತೇಕ ಜನರು ಇಂದು ನಿಮ್ಮ ಮನೆ ಬಾಗಿಲು ತಟ್ಟಿದರೆ ನೀವು ಬಾಗಿಲು ತೆರೆಯಲು ಹಿಂದೇಟು ಹಾಕಬಹುದಾದಂಥವರು. ನಿಮ್ಮ ದಿವಾನಖಾನೆಯನ್ನು ಪ್ರವೇಶಿಸಲು ಯೋಗ್ಯರಾದವರಲ್ಲವೆಂಬುದನ್ನು ನೀವಲ್ಲ ನಿಮ್ಮ ಮಕ್ಕಳೇ ಒಪ್ಪಿಕೊಳ್ಳಬಹುದಾದಂಥವರು. ಆದರೆ ಅವರು ಟಿವಿ ಮೂಲಕ ತೀರ ಸುಲಭವಾಗಿ ನಿಮ್ಮ ಮನೆಯ ಕೋಣೆ ಕೋಣೆಯೊಳಗೂ ನುಸುಳುತ್ತಾರೆ; ಮಕ್ಕಳ ಭವಿಷ್ಯದ ಮೇಲೆ ದಟ್ಟ ಪರಿಣಾಮ ಬೀರುತ್ತಾರೆ.

ಇನ್ನೊಂದು ಮಾತು ಹೇಳಿದರೆ ಅಪ್ರಿಯವೆನ್ನಿಸಬಹುದು. ಆದರೆ, ಅದರ ಹಿಂದಿನ ಕಟು ಸತ್ಯವನ್ನು ಎಲ್ಲರೂ ಗಮನಿಸಬಹುದು. ಇವತ್ತಿನ ಭಾರತದ ಅತ್ಯಂತ ಜನಪ್ರಿಯ ವ್ಯಕ್ತಿಗಳಲ್ಲೇ ಅಗ್ರಶ್ರೇಣಿಯಲ್ಲಿರುವ ತೆಂಡೂಲ್ಕರ್, ಶಾರುಖ್ ಖಾನ್ ಅವರು ತೀರ ಈಚೆಗೆ ಕೆಲವು ಬಹುರಾಷ್ಟ್ರೀಯ ಕಂಪೆನಿಗಳ ಉತ್ಪನ್ನಗಳ ಜಾಹಿರಾತುಗಳಿಗೆ ರೂಪದರ್ಶಿಗಳಾಗಿ ಕಾಣಿಸಿಕೊಂಡಿದ್ದುದನ್ನು ಎಲ್ಲರೂ ಗಮನಿಸಿಯೇ ಇರುತ್ತೀರಿ. ಅವರು ಈ ಕೆಲಸ ಮಾಡಿದುದು ಯಾವುದೇ ತಾತ್ವಿಕ ಬದ್ಧತೆಯಿಂದಲ್ಲ, ಕೇವಲ ಹಣಕ್ಕಾಗಿ ಎಂಬುದನ್ನು ಮಾತ್ರ ಎಲ್ಲರೂ ಗಮನಕ್ಕೆ ತಂದುಕೊಂಡಿರುವುದಿಲ್ಲ. ಆದರೆ, ಅವರ ಜಾಹಿರಾತಿನ ಪರಿಣಾಮ ಮಾತ್ರ ಅಪಾರ ಪ್ರಮಾಣದಲ್ಲೆ ಇರುತ್ತದೆ. ತಮಗೇ ನಂಬಿಕೆಯಿರಬೇಕಿಲ್ಲದ ಉತ್ಪನ್ನಗಳನ್ನು ರೂಪದರ್ಶಿಗಳು ಬೇರೆಯವರಿಗೆ ಶಿಫಾರಸ್ಸು ಮಾಡುತ್ತಾರೆ; ಆ ಬೇರೆಯವರು, ಅಂದರೆ ಬಹುತೇಕವಾಗಿ ಮಕ್ಕಳು, ಯುವಜನಾಂಗದವರು, ಅವರ ಮಾತಿನ ಮೋಡಿಯಿಂದಾಗಿ ಅವನ್ನು ಕೊಳ್ಳುತ್ತಾರೆ. ಹಾಗಾಗಿ ಜನತೆಗೆ ನಿಜಕ್ಕೂ ಅಗತ್ಯವೇ ಇಲ್ಲದ ವಸ್ತುಗಳ ಅಪಾರ ಉತ್ಪಾದನೆ. ಇದನ್ನು ಅವಲಂಬಿಸಿದ ಆರ್ಥಿಕ ವ್ಯವಸ್ಥೆಯ ಬೆಳವಣಿಗೆ. ದೀರ್ಘಕಾಲದಲ್ಲಿ ಇದು ದೇಶದ ಮೇಲೆ ಎಂಥ ದುಷ್ಪರಿಣಾಮ ಬೀರಬಹುದು ಎಂಬುದು ದುರದೃಷ್ಟವಶಾತ್ ಅಂಕಿಅಂಶ ತಜ್ಞರ ಕೈಗೆ ನಿಲುಕುವಂಥದಲ್ಲ.

ಇನ್ನೊಂದು ಉದಾಹರಣೆ. ಯಾರೇ ಆದರೂ ತಮಗೆ ಒಗ್ಗದ ವಸ್ತುವನ್ನು ಸಣ್ಣ ಪ್ರಮಾಣದಲ್ಲಿ ದಿನದಿನವೂ ತೆಗೆದುಕೊಳ್ಳುತ್ತಾ ಬಂದಲ್ಲಿ ಕ್ರಮೇಣ ಅದು ದೇಹಕ್ಕೆ ಒಗ್ಗಿಕೊಳ್ಳುವುದಷ್ಟೇ ಅಲ್ಲ ಅದನ್ನು ದೇಹ ಇನ್ನಷ್ಟು ಮತ್ತಷ್ಟು ಹೆಚ್ಚು ಬಯಸುವಂತೆ ಮಾಡುತ್ತದೆಂಬುದು ಎಲ್ಲರೂ ತಿಳಿದಿರುವ ವಿಷಯ. ಟಿವಿಯಲ್ಲಿ ನಾವು ಅನುದಿನವೂ ಕಾಣುವ ಹಿಂಸೆ ಮತ್ತು ಅತಿಲೈಂಗಿಕತೆ ಇಂಥ ವರ್ಗಕ್ಕೆ ಸೇರಿದುದು. ಒಂದು ಕಾಲದಲ್ಲಿ ಚುಂಬನ ಮತ್ತು ಒಂದೆರಡೇಟಿನ ಹಿಂಸೆಯೇ ಸಾಕೆನಿಸುವಂತಿತ್ತು. ಇದರ ಪ್ರಮಾಣ ಬೆಳೆದಂತೆಲ್ಲ ಇನ್ನಷ್ಟು ಲೈಂಗಿಕ ದೃಶ್ಯಗಳು ಮತ್ತು ವಿಕೃತ ಹಿಂಸೆಗೆ ಎಡೆಕೊಟ್ಟವು. ಇದೀಗತಾನೇ ವಿಕೃತ ಲೈಂಗಿಕತೆಯನ್ನು ಸಮರ್ಥಿಸುವ ಸಿನಿಮಾವೊಂದು ಬಂದಿದೆ. ನಾಳೆ ಟಿವಿಯಲ್ಲೂ ಕಾಣಿಸಿಕೊಳ್ಳಬಹುದು. ಅಲ್ಲಿಗೇ ಇದು ನಿಲ್ಲುವುದೇ? ವಿಕೃತಿಯೇ ಸಹಜವೆನ್ನುವಂಥ ಒಂದು ಧೋರಣೆಯೇ ಬೆಳೆಯಬಹುದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹಾಗಾಗಿರುವುದೂ ನಿಜವೇ. ಕಲೆ, ಪ್ರಗತಿ, ವ್ಯಕ್ತಿಸ್ವಾತಂತ್ರ್ಯದ ಹೆಸರಿನಲ್ಲಿ ಇದನ್ನು ಒಂದು ವರ್ಗದ ಬುದ್ಧಿಜೀವಿಗಳು ಬೆಂಬಲಿಸಲೂಬಹುದು. ಯಾವುದು ವಿಕಾಸ? ಅದನ್ನು ನಿರ್ಧರಿಸುವವರು ಯಾರು? ಒಬ್ಬನಿಗೆ ವಿಕೃತಿಯೆನಿಸುವುದು ಮತ್ತೊಬ್ಬನಿಗೆ ಸಹಜ ಎಂಬ ವಾದದ ಪ್ರಭಾವ ಬೀರಬಹುದು. ಅದು ಅಪೇಕ್ಷಣೀಯವೆ? ಇದು ನಾವು ಪ್ರಜ್ಞಾಪೂರ್ವಕವಾಗಿ ಆರಿಸಿಕೊಳ್ಳುತ್ತಿರುವ ಮಾರ್ಗವೆ? ಇದನ್ನು ವಿಚಾರಶೀಲರು ಯೋಚಿಸಬೇಕು.

ಪಿ. ಸೀತಾರಾಮ್
'ಶ್ರೀ ಲಕ್ಷ್ಮಿ' ೧೧೧೬, ೯ನೇ ಕ್ರಾಸ್, ೪ನೇ ಮೇನ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಸಿಯಾಟಲ್ ವಿದ್ಯಮಾನ - ಪ್ರವೀ ಬೆಂಡ

ವಿಶ್ವ ವ್ಯಾಪಾರಿ ಸಂಸ್ಥೆಯ ಆಶ್ರಯದಲ್ಲಿ ಅಮೆರಿಕದ ಸಿಯಾಟಲ್ ನಗರದಲ್ಲಿ ಇತ್ತೀಚೆಗೆ ಜರುಗಿದ ಸದಸ್ಯ ರಾಷ್ಟ್ರಗಳ ವಾಣಿಜ್ಯ ಸಚಿವರ ಸಮ್ಮೇಳನ ಯಾವುದೇ ನಿರ್ದಿಷ್ಟ ತೀರ್ಮಾನಗಳಿಗೆ ಬಾರದೆ ಗೊಂದಲದಲ್ಲಿ ಮುಗಿದಿದ್ದು ಆಶ್ಚರ್ಯವೇನಲ್ಲ. ಹೀಗಾದದ್ದು ಶ್ರೀಮಂತ ರಾಷ್ಟ್ರಗಳು ನಡೆಸಿದ ಪೂರ್ವ ನಿಯೋಜಿತ ಸಂಚು ಎಂಬ ಗುಮಾನಿ ಇದ್ದರೆ ಅತಿಶಯವೇನಲ್ಲ. ಅದು ತಲೆ ಕೆಡಿಸಿಕೊಳ್ಳಬೇಕಾದ ವಿಷಯವೂ ಅಲ್ಲ. ಆದರೆ ಅಭಿವೃದ್ಧಿಶೀಲ ದೇಶಗಳು ಸಿಯಾಟಲ್‌ನಲ್ಲಿ ಏನೋ ಸಾಧಿಸಿಬಿಟ್ಟಿದ್ದೇವೆ, ಅಮೆರಿಕ ಹಾಗೂ ಇತರ ಶ್ರೀಮಂತ ರಾಷ್ಟ್ರಗಳು ಹೊರಿಸಬೇಕೆಂದಿದ್ದ ಕಾರ್ಮಿಕ ಶಾಸನ ಮತ್ತು ಪರಿಸರಕ್ಕೆ ಸಂಬಂಧಿಸಿದ ವಿಷಯವನ್ನು ಹಿಮ್ಮೆಟ್ಟಿಸಿದ್ದೇವೆ ಎಂದು ಭಾವಿಸಿಕೊಂಡರೆ ಅದು ಆತ್ಮವಂಚನೆಯಾಗುತ್ತದೆ. ಏಕೆಂದರೆ, ಶ್ರೀಮಂತ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕ, ತಮಗೆ ಬೇಕೆನಿಸಿದಾಗ ವಿಷಯಾಂತರ ಮಾಡಲು ವ್ಯಾಪಾರ ವಹಿವಾಟಿಗೆ ನೇರವಾಗಿ ಸಂಬಂಧವಿಲ್ಲದ ವಿಷಯಗಳನ್ನು ಮುಂದೊಡ್ಡುವುದು ಹೊಸದೇನಲ್ಲ. ಅಭಿವೃದ್ಧಿಶೀಲ ದೇಶಗಳನ್ನು ಬಾಧಿಸುತ್ತಿರುವ ವಿಷಯಗಳಲ್ಲಿ ಮುಖ್ಯವಾದವು ಪೇಟೆಂಟ್ ಹಾವಳಿ, ಮಾರುಕಟ್ಟೆಯಲ್ಲಿ ಪಾಶ್ಚಾತ್ಯ ದೇಶಗಳ ಸರಕುಗಳ ಸುರಿಮಳೆ, ಮುಕ್ತ ಮಾರುಕಟ್ಟೆಗೆ ಶ್ರೀಮಂತ ರಾಷ್ಟ್ರಗಳು ವಿಧಿಸುವ ಅಡ್ಡಿ ಆತಂಕಗಳು. ಇವುಗಳನ್ನು ಮೂಲೆಗೊತ್ತಿ ಪರಸ್ಪರ ಅನುಕೂಲಕರ ವಾಣಿಜ್ಯ ವ್ಯವಹಾರಗಳಿಗೆ ನೇರವಾಗಿ ಸಂಬಂಧವಿಲ್ಲದ ವಿಷಯಗಳನ್ನು ತಂದು ಶ್ರೀಮಂತ ರಾಷ್ಟ್ರಗಳು ತಮ್ಮ ಉದ್ದೇಶ ಸಾಧಿಸಿಕೊಂಡಿವೆ. ತತ್ಕಾಲಕ್ಕೆ ಕಾರ್ಮಿಕ ಶಾಸನ, ಪರಿಸರ ವಿಚಾರ ಮುಂದೆ ಹೋಗಿದ್ದರೂ, ಮತ್ತೆ ಜಿನೀವಾದಲ್ಲಿ ಪ್ರಸ್ತಾಪಕ್ಕೆ ಬರುವುದಂತೂ ಖಚಿತ. ಅಭಿವೃದ್ಧಿಶೀಲ ದೇಶಗಳು ಇದನ್ನು ಅರಿತುಕೊಂಡು ಮುಂದಿನ ಸವಾಲುಗಳನ್ನು ಎದುರಿಸಲು ಸಿದ್ಧವಾಗಬೇಕು.

ಅಂತರರಾಷ್ಟ್ರೀಯ ಹಣಕಾಸು ನಿಧಿ (ಐಎಂಎಫ್) ಮತ್ತು ವಿಶ್ವ ಬ್ಯಾಂಕ್‌ನಂತೆ ವಿಶ್ವ ವ್ಯಾಪಾರಿ ಸಂಸ್ಥೆ (ಡಬ್ಲ್ಯೂಟಿಓ) ಕೂಡ ನವ ವಸಾಹತುಶಾಹಿಗಳು ಬೀಸಿರುವ ಬಲೆ. ಆರ್ಥಿಕ ಉದಾರೀಕರಣ, ಜಾಗತೀಕರಣಗಳ ಮೋಹದ ಬಲೆಯಲ್ಲಿ ಬಿದ್ದಿರುವ ಭಾರತ ಹಾಗೂ ಇತರ ವಿಕಾಸಶೀಲ ದೇಶಗಳು ವಿಶ್ವ ವ್ಯಾಪಾರೀ ಸಂಸ್ಥೆಯ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳುವುದು ಸುಲಭವಲ್ಲ. ಈ ಘೋಷಣೆಗಳು ಬಹುರಾಷ್ಟ್ರೀಯ ಸಂಸ್ಥೆಗಳಿಗೆ ದಿಡ್ಡಿ ಬಾಗಿಲು ತೆರೆದಿವೆ. ಈ ಸಂಸ್ಥೆಗಳು ಆರ್ಥಿಕ ಕ್ಷೇತ್ರದ ಮೇಲೆ ತಮ್ಮ ಹಿಡಿತವನ್ನು ಬಿಗಿಗೊಳಿಸುವ ಕಾಲ ದೂರವಿಲ್ಲ. ಇತಿಹಾಸವನ್ನು ಅವಲೋಕಿಸಿದರೆ ಇದು ಸ್ಪಷ್ಟವಾಗುತ್ತದೆ.

ಪಶ್ಚಿಮ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕ, ತಮಗೆ ಬೇಕೆನಿಸಿದಾಗ ಅನುಕೂಲಕ್ಕೆ ತಕ್ಕಂತೆ ಮಾನವ ಹಕ್ಕುಗಳು, ಪ್ರಜಾಪ್ರಭುತ್ವ, ಬಾಲ ಕಾರ್ಮಿಕರು, ಪರಿಸರ, ಕಾರ್ಮಿಕ ಶಾಸನಗಳು ಮೊದಲಾದವನ್ನು ತಮ್ಮ ವಿದೇಶೀ ನೀತಿಯ, ವಾಣಿಜ್ಯ ವ್ಯವಹಾರಗಳ ಸಾಧನವಾಗಿ ಬಳಸಿಕೊಳ್ಳುತ್ತಿವೆ. ಅಭಿವೃದ್ಧಿಶೀಲ ರಾಷ್ಟ್ರಗಳ ವಿಶಿಷ್ಟ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಳ್ಳದೆ ಅವುಗಳ ಆರ್ಥಿಕ ದುರ್ಬಲತೆಯನ್ನು ಬಳಸಿಕೊಂಡು ಶ್ರೀಮಂತ ರಾಷ್ಟ್ರಗಳು ಅಸಮಾನ ಷರತ್ತುಗಳನ್ನು ವಾಣಿಜ್ಯ ವ್ಯವಹಾರಗಳಲ್ಲಿ ವಿಧಿಸುತ್ತವೆ. ವಿಶ್ವ ವ್ಯಾಪಾರೀ ಸಂಸ್ಥೆ ನಿಷ್ಪಕ್ಷಪಾತವಾಗಿ ಎಲ್ಲ ಸದಸ್ಯ ರಾಷ್ಟ್ರಗಳನ್ನು ಸಮಾನವಾಗಿ ಪರಿಗಣಿಸುತ್ತದೆ ಎಂದು ಹೇಳಿಕೊಂಡರೂ ಅದು ಶ್ರೀಮಂತ ರಾಷ್ಟ್ರಗಳ ಹಿತಾಸಕ್ತಿಗಳಿಗೆ ವಿರೋಧವಾಗಿ ಹೋಗುವುದಿಲ್ಲ. ತಮ್ಮ ಆರ್ಥಿಕ ಪ್ರಾಬಲ್ಯವನ್ನು ಉಪಯೋಗಿಸಿಕೊಂಡು ಈ ರಾಷ್ಟ್ರಗಳು ತಮಗೆ ಬೇಕಾದಂತೆ ಈ ಅಂತರರಾಷ್ಟ್ರೀಯ ಸಂಸ್ಥೆಯನ್ನು ನಿರ್ದೇಶಿಸುತ್ತವೆ. ಸಿಯಾಟಲ್ ಸಮ್ಮೇಳನದಲ್ಲಿ ನಡೆದದ್ದೂ ಅದೇ.

ಸುಮಾರು 36,000 ಪುಟಗಳಷ್ಟು ದೀರ್ಘವಾದ ನಿಯಮಾವಳಿ ಹೊಂದಿರುವ ವಿಶ್ವ ವ್ಯಾಪಾರಿ ಸಂಸ್ಥೆ ಜಾಗತಿಕ ವ್ಯಾಪಾರ ವಹಿವಾಟನ್ನು ನಿರ್ದೇಶಿಸುತ್ತದೆ. ಅದು ಮೇಲ್ವಿಚಾರಕ ಹಾಗೂ ತೀರ್ಪುಗಾರ. ನೂರ ಮೂವತ್ತೈದು ಸದಸ್ಯ ರಾಷ್ಟ್ರಗಳನ್ನು ಹೊಂದಿರುವ ಈ ಸಂಸ್ಥೆ ತೋರಿಕೆಗೆ ನಿಷ್ಪಕ್ಷಪಾತಿ ಎನಿಸಿದರೂ ಒಲವು ಅಭಿವೃದ್ಧಿ ಹೊಂದಿರುವ ಶ್ರೀಮಂತ ರಾಷ್ಟ್ರಗಳ ಕಡೆಗೇ. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳೂ ಕೂಡ ಒಂದು ಕಾಲದಲ್ಲಿ ಬಾಲಕಾರ್ಮಿಕರ ಶೋಷಣೆಯಲ್ಲಿ ತೊಡಗಿದ್ದವು, ಪರಿಸರ ಮಾಲಿನ್ಯವನ್ನು ಲೆಕ್ಕಿಸದೆ ಔದ್ಯೋಗಿಕರಣವನ್ನು ಸಾಧಿಸಿಕೊಂಡವು ಎಂಬುದನ್ನು ಮರೆಯಲಾಗದು. ಈಗಲೂ ಬಹ್ವಂಶ ಪರಿಸರ ಮಾಲಿನ್ಯಕ್ಕೆ ಶ್ರೀಮಂತ ರಾಷ್ಟ್ರಗಳೇ ಹೊಣೆ. ಆದರೂ ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಈ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ನಿರ್ಬಂಧಗಳನ್ನು ಹೊರಿಸಲು ಪ್ರಯತ್ನಿಸುತ್ತಿವೆ. ಇದೂ ಕೂಡ ಸಾಮ್ರಾಜ್ಯಶಾಹಿಯ ಶೋಷಣೆಯ ಇನ್ನೊಂದು ಮುಖ. ಅಭಿವೃದ್ಧಿಶೀಲ ದೇಶಗಳು ಒಂದುಗೂಡಿ ಏಕಮುಖದ ಪ್ರತಿಭಟನೆ ಒಡ್ಡಿದರೆ ಮಾತ್ರ ನವವಸಾಹತುಶಾಹಿಯನ್ನು ಎದುರಿಸಲು ಸಾಧ್ಯ. ಮುಂದಿನ ದಿನಗಳಲ್ಲಿ ಅಂಥ ಐಕ್ಯತೆ ಮೂಡಿಬಂದರೆ ಸಾರ್ಥಕವಾದೀತು.



ಸಿಯಾಟಲ್‌ನಲ್ಲಿ ವಿಶ್ವವ್ಯಾಪಾರಿ ಸಂಸ್ಥೆ (ಡಬ್ಲು ಟಿ ಒ) ವಿರುದ್ಧ ನಡೆದ ಭಾರೀ ಪ್ರದರ್ಶನ ದೊಡ್ಡ ಸುದ್ದಿ. ಅದು ಯಾರ ಪ್ರಯೋಜನಕ್ಕಾಗಿ? (ಚಿತ್ರ ಕೃಪೆ : ಫ್ರಂಟ್‌ಲೈನ್)

## ಅಮಾನವೀಯ ಆರ್ಥಿಕ ದಿಗ್ಬಂಧನ

ಮಾನವ ಹಕ್ಕುಗಳು, ಮಾನವೀಯತೆ, ಪ್ರಜಾತಂತ್ರ ಇವೇ ಮೊದಲಾದ ಮಂತ್ರಗಳನ್ನು ಉಚ್ಚರಿಸುವಲ್ಲಿ ಅಮೆರಿಕ ಎಂದೂ ಹಿಂದೆ ಬಿದ್ದಿಲ್ಲ. ಆದರೆ ಇವೆಲ್ಲ ಬಾಯಿ ಚಪಲಕ್ಕೆ ಮಾತ್ರವೇ. ಆಚರಣೆಯಲ್ಲಿ ಮಾತ್ರ ಅದು ತದ್ವಿರುದ್ಧ. ತಮ್ಮ ದೇಶದಲ್ಲೇ ಆಫ್ರಿಕನ್ ಅಮೆರಿಕನ್ನರು ಎಂದು ಕರೆಯುವ ಕರಿಯ ಜನಾಂಗಕ್ಕೆ ಮಾನವ ಹಕ್ಕುಗಳು, ಸಮಾನಾವಕಾಶ ನೀಡದಿದ್ದರೂ ಇತರ ದೇಶಗಳ ಕಡೆಗೆ ಬೊಟ್ಟು ಮಾಡುವುದು ಬೇಕೆನಿಸಿದಾಗ ಆರ್ಥಿಕ ದಿಗ್ಬಂಧನದ ಅಸ್ತ್ರ ಪ್ರಯೋಗಿಸಿ ಅಮಾನವೀಯವಾಗಿ ನಡೆದುಕೊಳ್ಳುವುದು, ಸರ್ವಾಧಿಕಾರಿ ಆಡಳಿತಗಳಿಗೆ ಬೆಂಬಲ ನೀಡುವುದು, ಅಮೆರಿಕಾಗೆ

(೩೩ನೇ ಪುಟ ನೋಡಿ)

# ಅಂತರರಾಷ್ಟ್ರೀಯ
# ಪ್ರಸಿದ್ಧ ಪತ್ರಕರ್ತೆ


ಅನಿತಾ ಪ್ರತಾಪ್

ಪತ್ರಿಕೋದ್ಯಮದಲ್ಲಿ ಇಂದು ಬಹಳಷ್ಟು ಮಹಿಳೆಯರಿದ್ದಾರೆ. ಆದರೆ ಮಹಿಳೆಯರೆಂದೊಡನೆ ಅವರು 'ಫೀಲ್ಡ್ ವರ್ಕ್'ಗೆ ಹೋಗಲಾರರು, ಹೊತ್ತಲ್ಲದ ಹೊತ್ತಿನಲ್ಲಿ ಹೊರಗೆ ಹೋಗಿ ವರದಿ ಮಾಡಲಾರರು, ರಾಜಕೀಯ ಗಲಭೆ, ಗಲಾಟೆಗಳ ಜಾಗಗಳಲ್ಲಿ ನಿಭಾಯಿಸಲಾರರು; ಅವರೇನಿದ್ದರೂ ಮೇಜಿನ ಕೆಲಸಕ್ಕೆ ಲಾಯಕ್ಕು, ಇಲ್ಲ ಕೇವಲ ನಿರಪಾಯದ ಸಭೆ, ಸಮಾರಂಭ, ಮಹಿಳಾ ಕಾರ್ಯಕ್ರಮ ಇಷ್ಟನ್ನು ವರದಿ ಮಾಡಬಲ್ಲರು ಎಂಬ ನಂಬಿಕೆ ಇದೆ. ಇಂಥಾ ಕುರುಡು ನಂಬಿಕೆಗೆ ಉತ್ತರದಂತಿದ್ದಾರೆ ಭಾರತದ ಪ್ರಸಿದ್ಧ ಪತ್ರಕರ್ತೆ ಅನಿತಾ ಪ್ರತಾಪ್. ತಮ್ಮ ಎರಡು ದಶಕಗಳ ಪತ್ರಿಕೋದ್ಯಮದ ದೀರ್ಘ ಅನುಭವದಲ್ಲಿ ಇವರು ಯುದ್ಧ, ಗಲಭೆ, ಪ್ರವಾಹ, ಭೂಕಂಪ ಎಲ್ಲೆಡೆಯೂ ನುಗ್ಗಿ ಸುದ್ದಿ ಸಂಗ್ರಹಿಸಿ ಬಂದವರು. 'ಇಂಡಿಯನ್ ಎಕ್ಸ್‌ಪ್ರೆಸ್'ನಿಂದ ಆರಂಭಿಸಿ, 'ಸಂಡೆ', 'ಇಂಡಿಯಾ ಟುಡೆ', 'ಟೈಮ್ಸ್'ನಲ್ಲಿ ದುಡಿದ ಈಕೆ. ನಂತರ ಅಮೆರಿಕಾದ 'ಸಿ.ಎನ್.ಎನ್.'ನ ಭಾರತದ ಬ್ಯೂರೋ ಮುಖ್ಯಸ್ಥರಾಗಿದ್ದರು. ಅಂತರರಾಷ್ಟ್ರೀಯ ಪ್ರಶಸ್ತಿ ಪುರಸ್ಕಾರ ಪಡೆದ ಮುಂಚೂಣಿಯ ಪತ್ರಿಕೋದ್ಯಮಿ ಅನಿತಾ ಪ್ರತಾಪ್. ಇವರಿಗೆ ಅತ್ಯುತ್ತಮ ಟಿವಿ ವರದಿಗೆ ನೀಡುವ 'ಜಾರ್ಜ್ ಪೋಲ್ಕ್ ಪ್ರಶಸ್ತಿ' ದೊರೆತಿದೆ. ಕಾಬೂಲ್ ನಗರ ತಾಲಿಬಾನ್ ಕೈವಶವಾದ ಸಮಯದಲ್ಲಿ ಆಫ್ಘಾನಿಸ್ತಾನದಲ್ಲಿ ನಿಂತು ಮಾಡಿದ ಇವರ ವರದಿಗೆ ಈ ಪುರಸ್ಕಾರ ದೊರೆಯಿತು. ಸುಮಾರು ಐವತ್ತು ವರ್ಷಗಳಿಂದ ಇರುವ ಈ ಪ್ರಶಸ್ತಿ, ಮೊಟ್ಟ ಮೊದಲಿಗೆ ಭಾರತಕ್ಕೆ ಲಭಿಸಿದ್ದು ಅನಿತಾ ಪ್ರತಾಪರಿಂದ.

ವಿವಾಹ, ವಿಚ್ಛೇದನ, ಪತ್ರಿಕೋದ್ಯಮ ರಂಗದ ವಿಪರೀತ ಒತ್ತಡಗಳ ನಡುವೆಯೂ ಏಕಾಂಗಿಯಾಗಿ ಮಗನನ್ನು ಬೆಳೆಸಿದ ಅನಿತಾರ ಮಾತುಗಳಲ್ಲಿ, ಮನಸ್ಸಿನಲ್ಲಿ ಯಾರ ವಿರುದ್ಧವೂ ಕಹಿ ಇಲ್ಲ. ಮುಖದ ತುಂಬಾ ನಗು. ಅದುಮಿಡದ ಅದಮ್ಯ ಉತ್ಸಾಹದ ವ್ಯಕ್ತಿತ್ವ ಅನಿತಾ ಪ್ರತಾಪರದು. ಮೊದಲ ಭೇಟಿಯಲ್ಲಿಯೇ ಬಾಯಿ ತುಂಬಾ ಮಾತನಾಡಿ, ತಟ್ಟನೆ ಆತ್ಮೀಯರಾದ ಈ ಅಗಾಧ ಸಾಧನೆಯ ಮಹಿಳೆ ನನ್ನನ್ನು ಆಕರ್ಷಿಸಿದರು. ಅವರ ಮನೆಗೆ ಆಹ್ವಾನಿಸಿದರು. ಸ್ನೇಹಿತಳಂತೆ ಹೋಗಿ ಗಂಟೆ ಗಂಟೆಗಳು ಅವರೊಡನೆ ಕಳೆದಾಗ, ಅವರ ರಂಗದ, ಅವರ ದಶಕಗಳ ಅನುಭವಗಳ ಅದ್ಭುತ ಇಣುಕು ನೋಟ ನನಗೆ ದಕ್ಕಿತು. ಅದನ್ನೇ ಸಣ್ಣ ಸಂದರ್ಶನದ ರೂಪದಲ್ಲಿ ಇಲ್ಲಿ ಕೊಡುತ್ತಿದ್ದೇನೆ.

***ನೇಮಿ*** : ನೀವು ಪತ್ರಿಕೋದ್ಯಮಕ್ಕೆ ಬಂದದ್ದೇಗೆ?

***ಅನಿತಾ*** : ನಾನು ಪತ್ರಿಕೋದ್ಯಮಕ್ಕೆ ಒಂದು ನಿರ್ದಿಷ್ಟ ಉದ್ದೇಶ ಇಟ್ಟುಕೊಂಡು ಬಂದವಳಲ್ಲ. ಎಂ.ಎ. ಮಾಡಿ ಲೆಕ್ಚರರ್ ಆಗುವುದರಲ್ಲಿ ನನಗೆ ಆಸಕ್ತಿ ಇರಲಿಲ್ಲ, ಹಾಗಾಗಿ ಪತ್ರಿಕೋದ್ಯಮ ಏಕಾಗಬಾರದು ಎಂದು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎರಡು ವರ್ಷಗಳ 'ಜರ್ನಲಿಸಂ' ಮಾಡಿದೆ. ದಿಲ್ಲಿಯ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಗೆ ಉಮೇದುವಾರಳಾಗಿ ಸೇರಿಕೊಂಡೆ. ಆಗ ಅರುಣ್ ಶೌರಿ ಸಂಪಾದಕರಾಗಿದ್ದರು. ಮೆಲ್ಲನೆ ನನಗೆ ಪತ್ರಿಕೋದ್ಯಮ ಅತ್ಯಂತ ಖುಷಿಯ ಕೆಲಸವಾಗಿ ಕಂಡು, ಎಲ್ಲಿಲ್ಲದ ಆಸಕ್ತಿ ಮೂಡಿತು. ಇದೇ ನನ್ನ ರಂಗ ಎನಿಸಿತು. ವರದಿ ಮಾಡುವುದು, ಬರೆಯುವುದು ನನಗೆ ಅತ್ಯಂತ ಸಂತಸ ತಂದ ಕೆಲಸಗಳು. ನಂತರ 'ಇಂಡಿಯನ್ ಎಕ್ಸ್‌ಪ್ರೆಸ್'ನಲ್ಲಿಯೇ ನನಗೆ 500 ರೂಪಾಯಿ ಸಂಬಳದ ಮೇಲೆ ಕೆಲಸ ಸಿಕ್ಕಿತು. ನನ್ನ ಜರ್ನಲಿಸಂ ಬದುಕು ಹೀಗೆ ಆರಂಭವಾಯಿತು.

***ನೇಮಿ*** : ಪತ್ರಿಕೋದ್ಯಮದಲ್ಲಿ ಬಹಳಷ್ಟು ಮಹಿಳೆಯರಿದ್ದಾರೆ. ಆದರೆ ಬಹಳ ಬಾರಿ ಅವರಿಗೆ ಮೇಜಿನ ಕೆಲಸ ಕೊಡುತ್ತಾರೆ. ಇಲ್ಲ ಸಭೆ ಸಮಾರಂಭಗಳ ರಿಪೋರ್ಟಿಂಗ್ ನೀಡಿ ಸುಮ್ಮನಾಗುತ್ತಾರೆ. ರಾಜಕೀಯ ವರದಿಗೆ, ಯುದ್ಧ ಗಲಭೆ ಇಂಥಾ ವರದಿಗಳಿಗೆ ಮಹಿಳೆಯರನ್ನು ಕಳುಹಿಸುವುದು ಅಪರೂಪ. ನಿಮಗೂ ನಿಮ್ಮ ರಂಗದಲ್ಲಿ ಲಿಂಗ ತಾರತಮ್ಯದ ಅನುಭವವಾಯಿತೆ?

***ಅನಿತಾ*** : ಸಾಮಾನ್ಯವಾಗಿ ಪತ್ರಿಕೋದ್ಯಮಕ್ಕೆ ಹೆಜ್ಜೆ ಇಟ್ಟ ಮಹಿಳೆ ಸೂಕ್ಷ್ಮಸ್ತರದ ಲಿಂಗ ತಾರತಮ್ಯವನ್ನು ಕಾಣುತ್ತಾಳೆ. ರಾಜಕೀಯದ ಸುದ್ದಿಗೆ ಸಾಕಷ್ಟು ವರ್ಷಗಳ ಅನುಭವವಿರುವ ಪುರುಷರನ್ನೇ ಕಳುಹಿಸುವುದು. ಗಲಭೆ ಗಲಾಟೆಗಳಿಗೂ ಪುರುಷರಿಗೇ ಆದ್ಯತೆ. ಅಪಾಯವಿಲ್ಲದ ಯಾವುದೋ ಸಮ್ಮೇಳನ, ಮಹಿಳಾ ಕಾರ್ಯಕ್ರಮಗಳಿಗೆ ಮಹಿಳೆಯರನ್ನು ಕಳುಹಿಸುವ... ದುಂಟು. ಆದರೆ ಇದು ಎರಡು ಬಗೆಯಲ್ಲಿ ಕೆಲಸ ಮಾಡುತ್ತದೆ. ಈ ರಂಗದಲ್ಲಿ ಪತ್ರಿಕೋದ್ಯಮಿಗಳಾಗಿ ನಮ್ಮನ್ನು ನಾವು ಸಾಬೀತು ಮಾಡಿಕೊಳ್ಳಬೇಕು. 'ನಾ ಸಂಜೆ ಬೇ... ಮನೆಗೆ ಹೋಗಬೇಕು, ರಾತ್ರಿ ಶಿಫ್ಟ್ ಮಾಡಲಾರೆ. ಗಲಾಟೆ ಜಾಗಗಳಿಗೆ ಹೋಗಲಾರೆ' ಎಂದು ಹುಡುಗಿಯರು ಕೆಲಸದೊಡನೆ ರಾಜಿ ಮಾಡಿಕೊಂಡು ಹಿಂಜರಿದರೆ, ಅವರಿಗೆ ಅಂಥಹುದೇ ಕೆಲಸಗಳನ್ನು ಕೊಡುತ್ತಾರೆ. ಒಂದು ಕಡೆ ಮಹಿಳೆಯಾಗಿ ನನಗೆ ಲಾಭಗಳು ಬೇಕು, ಇನ್ನೊಂದು ಕಡೆ ಉದ್ಯೋಗದಲ್ಲಿ ಮೇಲೇರಲೂ ಬೇಕು ಎಂದು ಬಯಸಿದರೆ ಅದು ಸಾಧ್ಯವಿಲ್ಲ. ನಾನು ಮಹಿಳೆಯಾಗಿ ಯಾವ ರಿಯಾಯಿತಿಯನ್ನೂ ಬಯಸಲಿಲ್ಲ. 'ಈ ರಿಪೋರ್ಟಿಂಗ್‌ಗೆ ನಾನು ಹೋಗುತ್ತೇನೆ' ಎಂದು ಜಗಳ ಮಾಡಿಯಾದರೂ ಹೋಗುತ್ತಿದ್ದೆ. ಒಮ್ಮೆ ಅವರಿಗೆ ನನ್ನ ಮೇಲೆ, ನನ್ನ ಕೆಲಸದ ಮೇಲೆ ಭರವಸೆ ಮೂಡಿದಾಗ, ಮತ್ತೆ ಹೋರಾಡ ಬೇಕಿರಲಿಲ್ಲ. ಅವರು ನನಗೆ ಹೇಳದಿದ್ದರೂ, ಅಸೈನಮೆಂಟ್ ನೀಡದಿದ್ದರೂ, ಸ್ವತಃ ಆಸಕ್ತಿಯಿಂದ 'ಇದು ವರದಿ ಮಾಡಲೇಬೇಕಾದ ವಿಷಯ, ಇದು ತಿಳಿಸಬೇಕಾದ ಕತೆ' ಎಂದು ಕಛೇರಿಯ ಕೆಲಸದ ನಂತರ ನನ್ನ ಸಮಯ, ನನ್ನ ಹಣ ಹಾಕಿಕೊಂಡು ನಗರದ ಮೂಲೆಮೂಲೆಗೆ ಹೋಗಿ ಸುದ್ದಿ ಸಂಗ್ರಹಿಸುತ್ತಿದ್ದೆ. ಉದ್ದೇಶಪೂರ್ವಕವಾಗಿ ಪತ್ರಿಕೋದ್ಯಮಕ್ಕೆ ಪ್ರವೇಶಿಸದಿದ್ದರೂ, ಒಮ್ಮೆ ಈ ರಂಗವನ್ನು ಹೊಕ್ಕ ಮೇಲೆ, ನನ್ನ ಉದ್ಯೋಗಕ್ಕೆ ನಾನು ಅತ್ಯಂತ ನಿಷ್ಠಳಾದೆ. ನನ್ನ ಕೆಲಸಕ್ಕೆ ನನ್ನೆಲ್ಲವನ್ನೂ ನೀಡಿದೆ. ಬದುಕಿನಲ್ಲಿ ಬಹಳಷ್ಟು ಆಯ್ಕೆಗಳಿದ್ದವು. ಅನೇಕ ಬಾ... ಯಾವುದೋ ಕುಟುಂಬದ ಸಮಾರಂಭಕ್ಕೆ ಹೋಗದೆ, ನನ್ನ ಉದ್ಯೋಗಕ್ಕೆ ಆದ್ಯ... ನೀಡಿದ್ದುಂಟು: ಆಯ್ಕೆ ಕಷ್ಟದ್ದು, ಆದರೆ ಆಯ್ಕೆ ಅನಿವಾರ್ಯ.


ಅನಿತಾ ಪ್ರತಾ...

***ನೇಮಿ*** : ಅನಿತಾ ಅವರೆ, ತಾಲಿಬಾನ್ ನಾಡಿಗೆ ಮಹಿಳೆಯಾಗಿ, ಪಾಕಿಸ್ತಾನದ ಬೆಂಬಲ... ಆಫ್ಘಾನಿಸ್ತಾನದಲ್ಲಿ ಭಾರತೀಯ ಮಹಿಳೆಯಾಗಿ, ಅದರಲ್ಲೂ ಅಮೆರಿಕಾದ ಸಿ.ಎನ್.ಎನ್... ಪ್ರತಿನಿಧಿಯಾಗಿ ಅಲ್ಲಿ ಹೋಗಿದ್ದಿರಿ. ಮಹಿಳೆಯರ ವಿದ್ಯಾಭ್ಯಾಸ, ಉದ್ಯೋಗ ಇರಲಿ, ಅವ... ಬೀದಿಗೆ ಬರುವುದನ್ನೂ ತಡೆದಿರುವ ತಾಲಿಬಾನ್ ನಾಡಿನಲ್ಲಿ ಮಹಿಳಾ ವರದಿಗಾರಳಾಗಿ ನಿ... ಅನುಭವಗಳು ಹೇಗಿದ್ದವು? ಇದು ಸಾಕಷ್ಟು ಅಪಾಯಕಾರಿ ಕೆಲಸವಾಗಿತ್ತಲ್ಲವೆ?

***ಅನಿತಾ*** : ಹೌದು. ನನ್ನನ್ನು ನಾನು ಪೂರ್ತಿ ಬುರ್ಕಾದಲ್ಲಿ ಮುಚ್ಚಿಕೊಂಡು ನ... ತಂಡದೊಡನೆ ಸುತ್ತುತ್ತಿದ್ದೆ. 1996ರಲ್ಲಿ ತಾಲಿಬಾನ್ ಯುದ್ಧದ ನಡುವೆ ನುಗ್ಗಿ, ಕಾಬೂ... ತಾಲಿಬಾನರ ಕೈವಶವಾದದ್ದನ್ನು ದಾಖಲಿಸಿದೆ. ಎರಡೂ ಪಕ್ಷಗಳ ನಡುವೆ ಅಸ್ತ್ರಶಸ್ತ್ರಗಳ ಘೋ... ಯುದ್ಧ ನಡೆದಿತ್ತು. ನಿಜಕ್ಕೂ ಯುದ್ಧ ಭಯಂಕರವಿತ್ತು. ಗಲ್ಲಿ ಗಲ್ಲಿಗೆ ನುಗ್ಗಿ ಜನ... ಅಭಿಪ್ರಾಯವನ್ನು ಸಂಗ್ರಹಿಸುತ್ತಿದ್ದೆ. ಟಿವಿಗೆ ಮುಖಕೊಟ್ಟು ನಾನು ಅಲ್ಲಿಯ ಪರಿಸ್ಥಿತಿಯ ಬ... ನಾಲ್ಕು ಸಾಲು ಹೇಳುತ್ತಿದ್ದಂತೆ, ಆ ತುದಿಯಿಂದ ನುಗ್ಗಿ ಬರುವ, ತಟ್ಟನೆ ಎಲ್ಲಿಂದಲೋ ಪ್ರತ್ಯಕ್ಷವಾಗುವ ತಾಲಿಬಾನರನ್ನು ನೋಡಿಯೂ, ನನ್ನ ಆತಂಕವನ್ನು ತಡೆದುಕೊಂಡು ಮುಖಭಾವ, ದನಿ ಎಲ್ಲವನ್ನೂ

ಸಂದರ್ಶ...

# ...ಪುರಸ್ಕಾರ ಪಡೆದ ...ನಿತಾ ಪ್ರತಾಪ್

ನಿಯಂತ್ರಣದಲ್ಲಿ ಇಟ್ಟುಕೊಂಡು, ಹೇಳುವುದನ್ನು ಕ್ಯಾಮೆರಾಗೆ ಹೇಳಿ ಮುಗಿಸಿ, ತಂಡದೊಡನೆ ಅಲ್ಲಿಂದ ಓಟ ಕೀಳುತ್ತಿದ್ದೆ. ಸ್ವರ ನಡುಗಿಸದೆ, ಬಡಬಡಿಸದೆ ನಿಯಂತ್ರಣದಲ್ಲಿ ಇಟ್ಟುಕೊಂಡು ಕ್ಯಾಮೆರಾ ...ುರಿಸುವುದು ಸುಲಭವಿರಲಿಲ್ಲ. ಅಪಾಯದ ಅಂಚಿನಲ್ಲಿಯೇ ನಮ್ಮ ಕೆಲಸವಿತ್ತು.

... ಒಮ್ಮೆ ಟ್ಯಾಂಕ್ ಒಂದರಿಂದ ಶೆಲ್ಲಿಂಗ್ ನಡೆಯುತ್ತಿತ್ತು. ಅದನ್ನು ಹತ್ತಿರದಿಂದ, ಮತ್ತಷ್ಟು ...ರದಿಂದ ಕ್ಯಾಮೆರಾದಲ್ಲಿ ಹಿಡಿಯುತ್ತಾ ನನ್ನ ತಂಡ ಮೈಮರೆತಾಗ, ಅದೆಷ್ಟೋ ಯುದ್ಧ ...ಭೆಯ ನಡುವೆ ಸುದ್ದಿ ಸಂಗ್ರಹಿಸಿದ್ದ ನನಗೆ ಟ್ಯಾಂಕ್ ಒಂದೇ ಜಾಗದಲ್ಲಿ 'ಸಿಟ್ಟಿಂಗ್ ಡಕ್' ...ಹ ಗುಂಡು ಹಾರಿಸುತ್ತಿದೆ, ಇದೀಗ ಅದಕ್ಕೆ ಪ್ರತ್ಯುತ್ತರ ಬರುವುದು ಖಂಡಿತ ಎನಿಸಿತು. ತಟ್ಟನೆ ...್ಯಕ್ ಅಪ್, ಈಗ ಓಡೋಣ' ಎಂದು ಕೂಗಿದೆ. 'ಮೇಡಂ, ಲಾಸ್ಟ್ ಶಾಟ್' ಎಂದ ...ಯಾಗ್ರಾಹಕನ ಮೇಲೆ ಗುಡುಗಿ, ಅವರೆಲ್ಲರನ್ನೂ ಎಬ್ಬಿಸಿ ಓಡಿಸಿಕೊಂಡು ಈಚೆಗೆ ಬಂದ ...ುಕ್ಷಣ ಟ್ಯಾಂಕ್ ಮೇಲೆ ಪ್ರತಿ ತಂಡದ ಗುಂಡೆರಗಿ ಟ್ಯಾಂಕ್ ಬೆಂಕಿಯ ಉಂಡೆಯಾಗಿತ್ತು. ಇನ್ನರೆ ಕ್ಷಣ ನನ್ನ ತಂಡ ಅಲ್ಲಿದ್ದರೂ ನಾವು ಹಿಂತಿರುಗುತ್ತಿರಲಿಲ್ಲ. ಇಂಥಾ ಎಷ್ಟೋ ಘಟನೆಗಳು ನಡೆದಿವೆ. ವರ್ಷ ವರ್ಷಗಳ ಅನುಭವ, ನಾನು ಹೋಗುವ ತಾಣ, ಅವರ ಯುದ್ಧತಂತ್ರ ಎಲ್ಲದರ ಬಗ್ಗೆಯ ನನ್ನ ಅಧ್ಯಯನ ನನಗೆ ಬಹಳಷ್ಟು ಬಾರಿ ಸಮಯಕ್ಕೆ ಒದಗಿಬಂದಿದೆ, ಅಪಾಯದಿಂದ ರಕ್ಷಿಸಿದೆ. ಬೆಂಕಿ, ಬಾಂಬು ಇರಲಿ, ಒಮ್ಮೆ ಆಕಸ್ಮಾತ್ ನನ್ನ ತಲೆಯ ಮೇಲಿಂದ ಸೆರಗು ಜಾರಿ ಕೂದಲು ಕಂಡಾಗ, ಓರ್ವ ತಾಲಿಬಾನ್ ನೇರ ನನ್ನೆಡೆಗೆ ಬಂದು ಸಿಡಿಕೋಪದಲ್ಲಿ ಗುಡುಗಿದ್ದ. ತಟ್ಟನೆ ಬಟ್ಟೆಯಿಂದ ತಲೆ ಮುಚ್ಚಿಕೊಂಡು ಬಚಾವಾಗಿದ್ದೆ.

...ಬಿನ್ ಒಡನೆ



**ನೇಮಿ** : ಎಲ್.ಟಿ.ಟಿ.ಇ. ಮುಖಂಡ ...ಾಕರನ್ ಅವರ ಮೊಟ್ಟ ಮೊದಲ ಸಂದರ್ಶನ ಪಡೆದ ಪತ್ರಿಕೋದ್ಯಮಿ ಎಂಬ ಕೀರ್ತಿ ...ಗಿದೆ. ಎಲ್.ಟಿ.ಟಿ.ಇ. ಕುರಿತು ಬಹಳಷ್ಟು ವರದಿ ಮಾಡಿರುವವರು ನೀವು. ನಿಮ್ಮ ಜಾಫ್ನಾದ ...ುಭವಗಳನ್ನು ಹಂಚಿಕೊಳ್ಳುತ್ತೀರಾ?

**ಅನಿತಾ** : ನನ್ನ ಮೊಟ್ಟಮೊದಲ ಅಂತರರಾಷ್ಟ್ರೀಯ ಅಸೈನ್‌ಮೆಂಟ್ ಶ್ರೀಲಂಕಾದ ...ಭೆಯನ್ನು ವರದಿ ಮಾಡುವುದಾಗಿತ್ತು. ಅದು ನಿಜಕ್ಕೂ ನನ್ನನ್ನು ಪತ್ರಿಕೋದ್ಯಮಿಯಾಗಿ ...ಪಿಸಿತು. 1983, ನಾನಾಗ 'ಸಂಡೆ' ಪತ್ರಿಕೆಗೆ ಕೆಲಸ ಮಾಡುತ್ತಿದ್ದೆ. ಕೊಲಂಬೋದಲ್ಲಿ ಗಲಭೆ ...ಂಭವಾಗಿತ್ತು, ಜನ ದಿಕ್ಕೆಟ್ಟು ಓಡುತ್ತಿದ್ದರು. ಈ ಸಮಯದಲ್ಲಿ ಕೊಲಂಬೋ ತಲುಪಿದ ...ಟ್ಟಮೊದಲ ಭಾರತೀಯ ಪತ್ರಿಕೋದ್ಯಮಿ ನಾನಾಗಿದ್ದೆ. ಮಹಿಳೆಯಾದದ್ದು ನನ್ನ ಕೆಲಸಕ್ಕೆ ...ಚಣೆಯಾಗಿರಲಿಲ್ಲ. ಎಷ್ಟೋ ಬಾರಿ ಪುರುಷ ಪತ್ರಿಕೋದ್ಯಮಿಗಳಿಗೆ ಪ್ರವೇಶ ಸಿಗದ ಕಡೆ ...ು ಸಾಧಾರಣ ಗೃಹಿಣಿಯಂತೆಯೋ, ಅಮಾಯಕ ಹಳ್ಳಿಯ ಹೆಂಗಸಿನಂತೆಯೋ ಉಡುಪು ... ಪ್ರವೇಶ ಗಿಟ್ಟಿಸಿದ್ದೆ. ಅಲ್ಲಿಂದ ಆರಂಭವಾಯಿತು ಎಲ್.ಟಿ.ಟಿ.ಇ. ಕುರಿತ ನನ್ನ ವರದಿಗಳು.

**ನೇಮಿ** : ಎಲ್.ಟಿ.ಟಿ.ಇ. ಕುರಿತು ನಿಮ್ಮ ಅವಿಸ್ಮರಣೀಯ ಅನುಭವಗಳ ಬಗ್ಗೆ ಹೇಳಿ.

**ಅನಿತಾ** : ವರ್ಷ ವರ್ಷಗಳು ನಾನು ಎಲ್.ಟಿ.ಟಿ.ಇ. ಬಗ್ಗೆ ವರದಿ ಮಾಡಿದ್ದೇನೆ. ಒಮ್ಮೆ ಜಾಫ್ನಾದ ಕಾಡುಗಳಲ್ಲಿ ನಾವು ನಮ್ಮದೇ ರಿಸ್ಕ್‌ನಲ್ಲಿ ನುಗ್ಗಿದ ಸಮಯ. ದಟ್ಟ ಕಾಡು, ಸಂಪೂರ್ಣ ನಿಶ್ಶಬ್ದ. ನಿರ್ಜನವಾಗಿ ಕಂಡು ಮನುಷ್ಯನ ಸುಳಿವೇ ಇಲ್ಲ ಎಂಬ ಭ್ರಮೆ ಹುಟ್ಟಿಸಿತ್ತು. ಆ ನೆಲದಲ್ಲಿ ಎಲ್ಲೆಲ್ಲೂ ಮೈನ್ ನೆಟ್ಟಿದ್ದಾರೆ ಎಂದು ತಿಳಿದಿತ್ತು. ವರ್ಷ ವರ್ಷಗಳ ಎಲ್.ಟಿ.ಟಿ.ಇ.ಯನ್ನು ನಿಕಟವಾಗಿ ಅವಲೋಕಿಸಿ, ಅವರ ಯುದ್ಧ ತಂತ್ರಗಳ ಬಗ್ಗೆ ಅರಿತುಕೊಂಡಿದ್ದ ನಾನು ಅತ್ಯಂತ ಜಾಗರೂಕವಾಗಿ, ತುಂಬಾ ನಿಧಾನವಾಗಿ ಕಾರು ನಡೆಸುವಂತೆ ಹೇಳಿದೆ. ತಟ್ಟನೆ ಅಷ್ಟು ದೂರದಲ್ಲಿ ನೆಲ ನೋಡಿದೆ, 'ನಿಲ್ಲಿ' ಎಂದು ಚೀರಿ ಹೇಳಿದೆ. ನೆಲದ ಮೇಲೆ ಹಾದ ಸಣ್ಣನೆಯ ದಾರ ನನ್ನ ಕಣ್ಣಿಗೆ ಬಿದ್ದಿತ್ತು. ಕಾರು ನಿಲ್ಲಿಸಿದೊಡನೆ ಅದೆಲ್ಲಿಂದಲೋ ಮರಗಿಡಗಳ ಮೇಲಿಂದ ನೆಲಕ್ಕಿಳಿದ ಗೆರಿಲ್ಲಾ ಸಮೂಹ ತಟ್ಟನೆ ನಮ್ಮನ್ನು ಸುತ್ತುವರೆಯಿತು. ಅವರ ಕ್ಯಾಮೊಫ್ಲೇಜ್ ತಂತ್ರಕ್ಕೆ ಬೆರಗಾದೆ. ಮೆಲ್ಲನೆ ಒಬ್ಬಾತ ಮುಂದೆ ಬಂದು ನೆಲದ ಮೇಲಿಂದ ಮೈನ್ ತೆಗೆದ.

**ನೇಮಿ** : ಇಂಥೆಲ್ಲ ಕೆಲಸಗಳಿಗೆ ನುಗ್ಗಲು ನಿಜಕ್ಕೂ ದಿಟ್ಟೆದೆ ಬೇಕಲ್ಲವೆ?

**ಅನಿತಾ** : ಧೈರ್ಯ, ದಿಟ್ಟತನ ಲಿಂಗಾಧಾರಿತವಾದದ್ದಲ್ಲ. ಒಮ್ಮೆ ಜೊತೆಯಲ್ಲಿದ್ದ ಛಾಯಾಚಿತ್ರಗಾರ ನಡುಗಿ ತಡವರಿಸಿದಾಗ, ಆತನನ್ನು ಸಂಭಾಳಿಸಿ ತಂದದ್ದಿದೆ. ಅಂಥಾ ಎಷ್ಟೋ ಅನುಭವಗಳಿವೆ. ಅದೇ ಜಾಫ್ನಾದಲ್ಲಿ ಒಳ ಕಾಡುಗಳಿಗೆ ಕಾರಿನಲ್ಲಿ ನುಗ್ಗಿದ್ದ ಮತ್ತೊಂದು ಪ್ರಸಂಗ. ದಟ್ಟಕಾಡಿನ ಮಧ್ಯೆ ನಮ್ಮನ್ನು ಬಂದು ಬಳಸಿದ ಎಲ್.ಟಿ.ಟಿ.ಇ. ತಂಡ 'ಕೊಡು ಕಾರು?' ಎಂದು ಜಬರಿಸಿತು. ಆ ಕಾಡಿನ ಮಧ್ಯೆ ನಾನು ಕಾರು ಬಿಟ್ಟುಕೊಟ್ಟಿದ್ದರೆ, ಹಿಂತಿರುಗುವ ವ್ಯವಸ್ಥೆಯೇ ಇರಲಿಲ್ಲ. ಕಾರು ನನ್ನದಲ್ಲ, ಹೋಟಲಿನಾತನಿಗೆ ಏನು ಹೇಳುವುದು? ಬಂದೂಕು ನನ್ನತ್ತ ಗುರಿ ಹಿಡಿದು ಜಬರಿಸಿದ ಆತನಿಗೆ 'ಈ ಕಾರು ನಮ್ಮದು, ನೀವು ಹೀಗೆ ತೆಗೆದುಕೊಳ್ಳುವಂತಿಲ್ಲ. ನಾನು ಕಾರು ಕೊಡುವುದಿಲ್ಲ, ನಿಮಗೆ ಕಾರು ಏಕೆ ಬೇಕು ಹೇಳಿ?, ಎಂದು ಗಟ್ಟಿಯಾಗಿ ಕೇಳಿದೆ. ಅವರಲ್ಲಿ ಒಬ್ಬ 'ನಮ್ಮ ಸಂಗಾತಿಗೆ ಗುಂಡು ತಾಗಿ ಗಾಯವಾಗಿದೆ, ತಕ್ಷಣ ವೈದ್ಯರಲ್ಲಿಗೆ ಸಾಗಿಸಬೇಕು' ಎಂದ. 'ಅಷ್ಟು ಹೇಳಿ, ಕರೆತನ್ನಿ ನಿಮ್ಮ ಸಂಗಾತಿಯನ್ನು, ನಾವು ಕರೆದೊಯ್ಯುತ್ತೇವೆ' ಎಂದು ಆತನನ್ನು, ಜೊತೆಯವರನ್ನು ಕರೆದುಕೊಂಡು ಅವರು ಬಯಸಿದ ಜಾಗದಲ್ಲಿ ಬಿಟ್ಟೆವು.

**ನೇಮಿ** : ಪ್ರಭಾಕರನ್ ಅವರನ್ನು ಭೆಟ್ಟಿಯಾದ ನಿಮ್ಮ ಅನುಭವವನ್ನು ಹೇಳಿ.

**ಅನಿತಾ** : ಬಹಳಷ್ಟು ಪ್ರಯತ್ನದ ನಂತರ ನನಗೆ ಆತನನ್ನು ಭೆಟ್ಟಿಯಾಗುವ ಅವಕಾಶ ಸಿಕ್ಕಿತು. ಎಲ್.ಟಿ.ಟಿ.ಇ.ಯವರು ನನ್ನನ್ನು ವಾಹನದಲ್ಲಿ ಅದೆಷ್ಟೋ ಜಾಗಗಳಲ್ಲಿ ಸುತ್ತಿಸಿ, ಸುತ್ತಿಸಿ ಕರೆದೊಯ್ದರು. ಕಡೆಗೂ ನಾ ತಲುಪಿದ್ದು ಒಂದು ದೊಡ್ಡ ಕೋಣೆಗೆ. ನನ್ನನ್ನು ಕೂಡಿಸಿದ ಆ ಕೋಣೆಯಲ್ಲಿ ದೊಡ್ಡ ಪರದೆ ಇತ್ತು. ಪರದೆಯ ಮೇಲೆ ಪ್ರಭಾಕರ್ ಅವರ ವೀಡಿಯೋ ಚಿತ್ರಗಳು ಓಡುತ್ತಿದ್ದವು. 'ಲಾರ್ಜರ್ ದ್ಯಾನ್ ಲೈಫ್' ಅನ್ನುತ್ತಾರಲ್ಲ ಹಾಗೆ, ನಿಜ ಜೀವನಕ್ಕಿಂತ ಬಲು ಭವ್ಯವಾಗಿ ಅಷ್ಟೆತ್ತರಕ್ಕೆ ಏರಿ ನಿಂತ ಪ್ರಭಾಕರನ್ ಅವರನ್ನು ಆ ಚಿತ್ರಗಳಲ್ಲಿ ಬಿತ್ತರಿಸಲಾಗಿತ್ತು. ಮಿಲಿಟರಿ ಉಡುಗೆಯಲ್ಲಿಯ ಕಟ್ಟುಮಸ್ತಾದ ದೇಹದ ಆತನ ಚಿತ್ರಗಳನ್ನು ನೋಡುತ್ತಿದ್ದಂತೆ ಅವರನ್ನು ಕುರಿತು ಅದ್ಭುತ ಚಿತ್ರ ಮನಸ್ಸಲ್ಲಿ ಮೂಡಿತ್ತು. ಅದು ಯಾವಾಗಲೋ ಸಾಧಾರಣ ಬುಷ್‌ಶರ್ಟಿನಲ್ಲಿ ಹೆಚ್ಚು ಎತ್ತರವಿಲ್ಲದ ಪ್ರಭಾಕರ್ ನನ್ನ ಎದುರು ಬಂದು ಕುಳಿತಾಗ, ಕ್ಷಣ ಗುರುತಿಸುವುದೇ ನನಗೆ ಕಷ್ಟವಾಗಿತ್ತು. ಆದರೆ ಆತ ತನ್ನ ಹೋರಾಟದಲ್ಲಿ ಎಷ್ಟು ದೃಢವಾಗಿದ್ದಾರೆ, ಆತನ ತಂಡದವರು ಹೋರಾಟಕ್ಕಾಗಿ ದೇಹಕ್ಕೆ ಆಸ್ಫೋಟಕವನ್ನು ಸುತ್ತಿಕೊಂಡು ಸಾಯಲು ಸಿದ್ಧವಿದ್ದಾರೆ ಎಂದು ತಿಳಿದುಬಂದಿತ್ತು. ಎಪ್ಪತ್ತರ ದಶಕದಲ್ಲಿ ನಿಜಕ್ಕೂ ಶ್ರೀಲಂಕಾದಲ್ಲಿ ತಮಿಳರ ವಿರುದ್ಧ ಸಾಕಷ್ಟು ತಾರತಮ್ಯ ಇತ್ತು. ಎಲ್.ಟಿ.ಟಿ.ಇ. ತಂಡ ತಮಿಳರ ಹಕ್ಕುಗಳಿಗಾಗಿ ದುಡಿಯಿತು. ಆದರೆ ಇಂದು ತಾರತಮ್ಯವಿಲ್ಲದ ಸಮಾಜದಲ್ಲಿ ಶಾಂತಿಗೆ ಅವಕಾಶ ನೀಡುತ್ತಿಲ್ಲ. 'ತಮಿಳ್‌ಈಳಮ್'ಗಿಂತ ಕಡಮೆಯಾದ

ಪುಟ್ಟ ಮಗನಿಂದ ಮುತ್ತು



...ಮಿಚಂದ್ರ

ಯಾವುದನ್ನೂ ಒಪ್ಪಲು ಸಿದ್ಧವಿಲ್ಲ.

**ನೇಮಿ** : ನೀವು 'ಪ್ರಿಂಟ್' ಮಾಧ್ಯಮ, 'ಟಿವಿ' ಮಾಧ್ಯಮ ಎರಡನ್ನೂ ಕಂಡಿದ್ದೀರಿ. ಇವುಗಳಲ್ಲಿ ಮುಖ್ಯ ವ್ಯತ್ಯಾಸವೇನನ್ನು ಕಂಡಿರಿ?

**ಅನಿತಾ** : ಪುಸ್ತಕ, ಪತ್ರಿಕೆ ಎತ್ತಿಕೊಂಡವರು ಮಧ್ಯೆ ಬೋರ್ ಆದರೆ ಕೆಳಗಿಡುತ್ತಾರೆ. ಮತ್ತೆ ಯಾವಾಗಲೋ ಎತ್ತಿಕೊಳ್ಳುತ್ತಾರೆ, ಓದುತ್ತಾರೆ. ಟಿವಿ ಮಾಧ್ಯಮ ಹಾಗಲ್ಲ. ಪ್ರೇಕ್ಷಕರನ್ನು ಪ್ರತಿಕ್ಷಣ ಹಿಡಿದಿಡುವಂತೆ ನಮ್ಮ ಕಾರ್ಯಕ್ರಮವಿರಬೇಕು. ಇಲ್ಲಿ ಅರೆಕ್ಷಣ ನಾವು ನಿಧಾನಿಸಿದರೂ, ಹಿಂಜರಿದರೂ, ಕೈಯಲ್ಲಿ 'ರಿಮೋಟ್' ಹಿಡಿದ ಪ್ರೇಕ್ಷಕ, ಕ್ಷಣ ಬೇಸರವಾಗಲಿಕ್ಕಿಲ್ಲ 'ಬಟನ್' ಒತ್ತುತ್ತಾನೆ, ನಮಗೆ ಕೈತಪ್ಪಿ ಹೋಗುತ್ತಾನೆ. ಇದೇ ಮುಖ್ಯ ವ್ಯತ್ಯಾಸ.

**ನೇಮಿ** : ಪ್ರಿಂಟ್ ಮಾಧ್ಯಮ ಬಿಟ್ಟು ನೀವು ದೃಶ್ಯ ಮಾಧ್ಯಮಕ್ಕೆ, ಟಿವಿಗೆ ಹೋದದ್ದೇಕೆ?

**ಅನಿತಾ** : ನನ್ನದು ಚಡಪಡಿಕೆಯ ಸೃಜನಶೀಲತೆ. ಇಲ್ಲಿ ಕಲಿತದ್ದೆಲ್ಲ ಮುಗಿಯಿತು ಎಂದಾಗ, ಹೊಸ ಸವಾಲುಗಳನ್ನು ಹುಡುಕಿ ಹೊರಡುತ್ತೇನೆ. ಮುದ್ರಣ ಮಾಧ್ಯಮದಲ್ಲಿ ಎಲ್ಲವನ್ನೂ ಕಂಡದ್ದಾಯ್ತು ಎನಿಸಿದಾಗ, ಟಿವಿ ಮಾಧ್ಯಮಕ್ಕೆ ಹೋದೆ. ಇದೀಗ ಇಪ್ಪತ್ತು ವರ್ಷಗಳ ಕಾಲ ಓರ್ವ ಪತ್ರಿಕೋದ್ಯಮಿಯಾಗಿ ಸವಾಲೆನಿಸಿದ ವರದಿಗಳನ್ನೆಲ್ಲ ಮಾಡಿದ್ದೇನೆ. ಇಲ್ಲಿ ನೋಡಬೇಕಾದ್ದೆಲ್ಲ, ಮಾಡಬೇಕಾದ್ದೆಲ್ಲ ಮಾಡಿದೆ ಎನಿಸಿತು. ಹಾಗೆಂದೇ ಭಾರತದಲ್ಲಿ ಕುಳಿತಂತೆ ಅಮೆರಿಕಾದ ಸಂಬಳ ಬರುತ್ತಿದ್ದ ಹೇರಳ ಹಣದ ಸಿ.ಎನ್.ಎನ್. ಕೆಲಸವನ್ನು ಬಿಟ್ಟೆ, ಇದೀಗ 'ಫ್ರೀಲ್ಯಾನ್ಸ್' ಡಾಕ್ಯುಮೆಂಟರಿ ಫಿಲ್ಮ್ ಮೇಕರ್ ಆಗಿದ್ದೇನೆ.

**ನೇಮಿ** : ಎಂಥಾ ಡಾಕ್ಯುಮೆಂಟರಿ ಮಾಡಲು ನೀವು ಬಯಸುತ್ತೀರಿ?

**ಅನಿತಾ** : ಒಳ್ಳೆಯ ಚಿತ್ರಗಳನ್ನು, ಭರವಸೆಯ ಚಿತ್ರಗಳನ್ನು ಮಾಡಲು ಬಯಸುತ್ತೇನೆ. ಮಾಧ್ಯಮದಲ್ಲಿ ಕೆಟ್ಟ ಸುದ್ದಿಗಳು ಮಾತ್ರ ಕತೆಯಾಗುತ್ತವೆ. ಒಳ್ಳೆಯ ಸುದ್ದಿಗಳನ್ನು ವರದಿ ಮಾಡುವವರು ಕಡಿಮೆ. ನಮ್ಮ ಸುತ್ತ ಬಹಳಷ್ಟು ಒಳ್ಳೆಯ ಕೆಲಸಗಳು ನಡೆಯುತ್ತಿವೆ. ಆದರೆ ಅವು ರೋಚಕವಾಗಿ ಕಾಣದ ಕಾರಣ ವರದಿಯಾಗೋಲ್ಲ. ಸದಾ ಕೆಟ್ಟ ಸುದ್ದಿಗಳತ್ತಲೇ ಮಾಧ್ಯಮಗಳು ತಿರುಗಿರುತ್ತವೆ. ಮಿಜೋರಮ್ ನೋಡಿ, ಅಲ್ಲಿ ಹಿಂಸೆ, ಗಲಭೆ ನಡೆದ ಕಾಲದಲ್ಲಿ ಸದಾ ಸುದ್ದಿಯಲ್ಲಿತ್ತು. ಇದೀಗ ಮಿಜೋರಂ ಅತ್ಯಂತ ಶಾಂತವಾದ ಆದರ್ಶ ರಾಜ್ಯವಾಗಿದೆ. ಅದರ ಸುದ್ದಿಯೇ ಇಲ್ಲ. ಭರವಸೆಯ ಕತೆಗಳನ್ನು, ಒಳ್ಳೆಯ ಸುದ್ದಿಗಳನ್ನು, ಜನರಲ್ಲಿ ಮಾನವೀಯತೆಯ ಬಗ್ಗೆ ನಂಬಿಕೆ ಉಳಿಯುವಂಥಾ ಚಿತ್ರಗಳನ್ನು ಮಾಡಲು ಬಯಸುತ್ತೇನೆ. ಹಾಗೆಂದೇ ಮಿಜೋರಂ ಬಗ್ಗೆ ಡಾಕ್ಯುಮೆಂಟರಿ ಮಾಡಿದೆ. ಹಿಂಸೆಯ ಬಿಸಿ ಕುಂಡದಲ್ಲಿ ಕುದಿದ ಈ ರಾಜ್ಯ ಇಂದು ಒಂದು ಮಾದರಿ ರಾಜ್ಯವಾದದ್ದು ಹೇಗೆ? ಅಲ್ಲಿ ಇಂಥಾ ಪರಿವರ್ತನೆ ಹೇಗೆ ಸಾಧ್ಯವಾಯಿತು? ಅದರಿಂದ ಕಲಿಯುವ ಬಹಳಷ್ಟು ಪಾಠಗಳಿವೆ ಅಲ್ಲವೆ? ಇದೇ ನನ್ನ ಚಿತ್ರದ ಸಂದೇಶ.

**ನೇಮಿ** : ಮಹಿಳೆಯರು ಒಂದು ಸುದ್ದಿ, ವರದಿಯನ್ನು ನೋಡುವ ರೀತಿಗೂ, ಪುರುಷರು ಅದಕ್ಕೆ ಸ್ಪಂದಿಸುವ ರೀತಿಗೂ ನಿಮಗೆ ವ್ಯತ್ಯಾಸ ಕಂಡಿದೆಯೆ?

**ಅನಿತಾ** : ಮಹಿಳೆಗೆ ಮುಖ್ಯವೆನಿಸಿದ್ದು ಅನೇಕ ಬಾರಿ ಪುರುಷರಿಗೆ ಅಮುಖ್ಯವೆನಿಸುತ್ತದೆ. ನಾವು ಎಮೋಷನಲ್ ಎಂದು ದೂರುವುದುಂಟು. ಆದರೆ ನಮ್ಮ ಭಾವನೆಗಳನ್ನು ತೋರಲು ನಾವು ಹಿಂಜರಿಯಬೇಕಿಲ್ಲ. 1987, ರೂಪ್ ಕನ್ವರ್ ಸತಿಯಾದ ಸಮಯ. ಅತ್ಯಂತ ಆಘಾತ ತಂದ ಸುದ್ದಿ ನನಗೆ. ಸ್ವತಂತ್ರ ಭಾರತದಲ್ಲಿ ಸತಿ ಪದ್ಧತಿಯನ್ನು ರದ್ದುಮಾಡಿದ ಇಷ್ಟು ವರ್ಷಗಳ ನಂತರ ಸತಿಯಾಗಿಸುವ, ಸತಿಯನ್ನು ವೈಭವೀಕರಿಸುವ ಈ ಸುದ್ದಿಯ ಬಗ್ಗೆ 'ಮುಖಪುಟ ಲೇಖನ' ಮೂಡಿ ಬರಬೇಕು ಎಂದು ನಾ ಹೇಳಿದೆ. ಆದರೆ ಪುರುಷರೇ ಇದ್ದ ಆ ಸಂಪಾದಕ ವರ್ಗದ ಮೀಟಿಂಗಿನಲ್ಲಿ 'ರಾಜಸ್ಥಾನದ ಯಾವುದೋ ಮೂಲೆಯಲ್ಲಿ ನಡೆದ ಸತಿ ಅಂಥಾ ದೊಡ್ಡ ಸುದ್ದಿ, ಕವರ್ ಸ್ಟೋರಿ ಮಾಡುವಂಥಾ ಸುದ್ದಿ' ಎಂದು ಅವರಿಗನಿಸಲಿಲ್ಲ. ನಾ ಸಾಕಷ್ಟು ಜೋರಿನಿಂದ ಉದ್ವೇಗದಿಂದ 'ಓರ್ವ ಹದಿನೆಂಟು ವರ್ಷದ ಬಾಲೆಯನ್ನು ಸತ್ತ ಗಂಡನ ಜೊತೆ ಸುಟ್ಟಿದ್ದಾರೆ. ಅದು ನಿಮಗೆ ದೊಡ್ಡ ವಿಷಯವಲ್ಲವೆ, ನಿಮ್ಮ ಮಗಳಿಗೆ ಹೀಗಾಗಿದ್ದರೆ ಸುಮ್ಮನೆ ಇರುತ್ತಿದ್ದಿರಾ?' ಎಂದು ಕೂಗಾಡಿದೆ. 'ನೀವು ಮಹಿಳೆಯರು ತುಂಬಾ ಎಮೋಷನಲ್ ಆಗುತ್ತೀರ' ಎಂದು ಟೀಕಿಸಿದರು. ನಮ್ಮ ಎಮೋಷನ್ಸ್ ನಮ್ಮ ಕೊರತೆ ಅಲ್ಲ, ಮಿತಿಯಲ್ಲ, ಅವು ನಮ್ಮ ಶಕ್ತಿ. ಎಮೋಷನ್ಸ್ ಇಲ್ಲದ ಮನುಷ್ಯನಿಗೂ ಮರಕ್ಕೂ ಏನು ವ್ಯತ್ಯಾಸ? ಅಂತೂ ವಾದಿಸಿ, ಪ್ರತಿವಾದಿಸಿ, 'ಸತಿ' ಮುಖಪುಟ ಲೇಖನವಾಗುವಂತೆ ಮಾಡಿದೆ. ಆ ಬಾರಿ ಪತ್ರಿಕೆಯ ಪ್ರತಿಗಳು ಎಂದಿಗಿಂತಲೂ ಅತ್ಯಧಿಕ ಸಂಖ್ಯೆಯಲ್ಲಿ ಮಾರಾಟವಾಗಿದ್ದವು. ಜನ ಈ ಕತೆಗೆ ಸ್ಪಂದಿಸಿದ್ದರು. 'ಸತಿ'ಯತ್ತ ಜನರ, ರಾಜಕಾರಣಿಗಳ ಗಮನ ಸೆಳೆಯಲು ಸಾಧ್ಯವಾಯಿತು.

**ನೇಮಿ** : ನಿಮ್ಮದು ಹತ್ತರಿಂದ ಐದು ಗಂಟೆಯವರೆಗೂ ಮಾಡುವ ಕಛೇರಿ ಕೆಲಸವಲ್ಲ, ಹೊತ್ತಲ್ಲದ ಹೊತ್ತಿನ ಒತ್ತಡದ ಈ ಕೆಲಸಕ್ಕೆ ನಿಮಗೆ ಕುಟುಂಬದ ಬೆಂಬಲವಿತ್ತೆ? ನಿಮ್ಮ ಪತಿಯ ಸಹಕಾರವಿತ್ತೆ?

**ಅನಿತಾ** : ನೇಮಿಚಂದ್ರ, ನೀವು ನಿನ್ನೆ ಮಾತನಾಡುವಾಗ ಮಹಿಳಾ ವಿಜ್ಞಾನಿಗಳ ಬಗ್ಗೆ ಒಂದು ಮಾತು ಹೇಳಿದ್ರಿ ನೆನಪಿದೆಯೆ? 'ಯಶಸ್ವಿಯಾದ ಈ ಮಹಿಳಾ ವಿಜ್ಞಾನಿಗಳಲ್ಲಿ ಬಹಳಷ್ಟು ಜನ ಅವಿವಾಹಿತರು, ಇನ್ನಷ್ಟು ಜನಕ್ಕೆ ಅತ್ಯಂತ ಸಹೃದಯ ಹಾಗೂ ಸಹಕರಿಸುವ ಪತಿ ಇದ್ದರು' ಅಂದಿದ್ದಿರಿ. ಉದ್ಯೋಗಸ್ಥ ಮಹಿಳೆಗೆ, ಅದರಲ್ಲೂ ನನ್ನಂಥಾ ರಂಗದ ಮಹಿಳೆಗೆ, ಅರ್ಥ ಮಾಡಿಕೊಳ್ಳುವ ಕುಟುಂಬ ತುಂಬಾ ಅಗತ್ಯ. ನಾನು ಮದುವೆಯಾದದ್ದು ನನ್ನ ಸಹೋದ್ಯೋಗಿಯನ್ನೇ. ನನ್ನದೇ ರಂಗದ ವ್ಯಕ್ತಿಗೆ ನನ್ನ ವೃತ್ತಿ ಸಂಬಂಧದ ಒತ್ತಡಗಳು ಅರ್ಥವಾಗುತ್ತವೆ ಎಂದುಕೊಂಡೆ. ಆದರೆ ಮದುವೆ ಬಲು ಬೇಗನೆ ಮುರಿದುಬಿದ್ದಿತು. ಇಪ್ಪತ್ತು ವರ್ಷಗಳ ಹಿಂದೆ ನಮ್ಮ ವಿವಾಹವಾಯಿತು. ನನಗಾಗ ಕೇವಲ 21 ವರ್ಷ. ಆತ ನನಗಿಂತ ಸೀನಿಯರ್, ಆತನಿಗೆ ಕೆಲಸದಲ್ಲಿ ಒಳ್ಳೆಯ ಹೆಸರಿತ್ತು. ಆದರೆ ಆತ ಯಾವ ಕೆಲಸದಲ್ಲೂ ಹೆಚ್ಚು ದಿನ ಉಳಿಯುತ್ತಿರಲಿಲ್ಲ. ಇದು ನಮ್ಮ ವಿವಾಹದಲ್ಲಿ ದೊಡ್ಡ ಸಮಸ್ಯೆಯಾಯಿತು. ಆತ ನಾನೆಂದೂ ಪತ್ರಿಕೋದ್ಯಮಿ ಆಗೋಲ್ಲ ಎಂದು ನಂಬಿದ್ದ. 'ಜರ್ನಲಿಸಂ ನಿನ್ನ ರಂಗವಲ್ಲ, ನೀನೆಂದೂ ಒಳ್ಳೆ ಜರ್ನಲಿಸ್ಟ್ ಆಗೋಲ್ಲ' ಎಂದು ಸದಾ ಹೇಳುತ್ತಾ, ನನ್ನ ಕೆಲಸವನ್ನು ತೆಗಳುತ್ತಾ, ತುಂಬಾ ನಿರುತ್ಸಾಹದ ಮಾತುಗಳನ್ನಾಡುತ್ತಿದ್ದ. ಆದರೆ ಬಲು ಬೇಗನೆ ನಾನು ಜರ್ನಲಿಸ್ಟ್ ಆಗಿ ಹೆಸರು ಮಾಡಿದ್ದು ನಮ್ಮ ಸಂಸಾರದ ಬಿರುಕನ್ನು ಹಿಗ್ಗಿಸಿತು. ನನ್ನ ಯಶಸ್ಸನ್ನು ಆತ ಸ್ವೀಕರಿಸದಾದ. ಹಗಲು ರಾತ್ರಿಯೆನ್ನದೆ ನನ್ನ ಕೆಲಸಕ್ಕಾಗಿ ದುಡಿವ ನನ್ನನ್ನು ಅಪಾರ್ಥ ಮಾಡಿಕೊಂಡ, ಅನುಮಾನದಿಂದ ನೋಡತೊಡಗಿದ. ಅಲ್ಲಿಗೆ ಮದುವೆ ಮುರಿಯಿತು.

**ನೇಮಿ**: ಮರು ವಿವಾಹದ ಬಗ್ಗೆ ನೀವು ಯೋಚಿಸಿದ್ದಿರಾ?

**ಅನಿತಾ**: ಆಗ ಯೋಚಿಸಿರಲಿಲ್ಲ. ನನ್ನ ಮೇಲೆ ಮಗುವಿನ ಜವಾಬ್ದಾರಿ ಇತ್ತು. ನನ್ನ ಕೆಲಸದ ಅಖಂಡ ಉದ್ದೇಶವಿತ್ತು. ಆದರೆ ಇದೀಗ ನಾನು ಓರ್ವ ಜರ್ನಲಿಸ್ಟ್ ಆಗಿ ನೋಡಬೇಕಾದದ್ದನ್ನೆಲ್ಲ ನೋಡಿದ್ದೇನೆ, ಮಾಡಬೇಕಾದದ್ದೆಲ್ಲ ಮಾಡಿದ್ದೇನೆ. ನನಗೀಗ ಬದುಕಿನ ಸಂತಸದತ್ತ ಜೀವನದ ಒಳ್ಳೆಯ ಮುಖಗಳತ್ತ ಬೊಟ್ಟು ಮಾಡಿ ತೋರಿಸುವ ಆಸೆ. ನನ್ನದೇ ಗತಿಯಲ್ಲಿ ಡಾಕ್ಯುಮೆಂಟರಿ ಚಿತ್ರಗಳನ್ನು ಮಾಡುತ್ತಿದ್ದೇನೆ. ಇದೀಗ ನನ್ನ ಮಗ ಬೆಳೆದು ದೊಡ್ಡವನಾಗಿದ್ದಾನೆ. ಆತನಿಗೀಗ ಹದಿನೆಂಟು ವರ್ಷ. ಬೆಂಗಳೂರಿನಲ್ಲಿ ನ್ಯಾಷನಲ್ ಲಾ ಸ್ಕೂಲ್ ಸೇರಿದ್ದಾನೆ. ತಟ್ಟನೆ ನನಗೆ ಮನೆ, ಮನ ಖಾಲಿಯಾದಂತೆ ಅನಿಸುತ್ತಿದೆ. ಇದೀಗ ಬದುಕಿನ ಈ ಹಂತದಲ್ಲಿ ಓರ್ವ ಸಂಗಾತಿ ಬೇಕು ಅನಿಸುವುದುಂಟು. ಅಂಥಾ ವ್ಯಕ್ತಿ ಎದುರಾದರೆ ಖಂಡಿತಾ ವಿವಾಹವಾಗುತ್ತೇನೆ.

* * *

*ಈ ಸಂದರ್ಶನ ನೀಡಿ ಕೆಲವೇ ತಿಂಗಳುಗಳಾಗಿದೆ, ಇದೀಗ ಅನಿತಾ ತಮ್ಮ ವೈಯಕ್ತಿಕ ಬದುಕಿನಲ್ಲಿ ಹೊಸ ಘಟ್ಟವನ್ನು ತಲುಪಿದ್ದಾರೆ. ಭಾರತಕ್ಕೆ ನಾರ್ವೆಯ ರಾಯಭಾರಿಯಾಗಿ ಬಂದ ಅರ್ನ್ ವಾಲ್ಥರ್ ಅವರನ್ನು ಅನಿತಾ ವಿವಾಹವಾಗಲಿದ್ದಾರೆ.*

ನೇಮಿಚಂದ್ರ
ನಂ. ೪೦೧, ವಿಜಯ ಟವರ್ಸ್, ೨ನೇ ಮೈನ್, ಆರ್. ಪಿ. ಸಿ. ಲೇ ಔಟ್, ವಿಜಯನಗರ ೨ನೇ ಹಂತ, ಬೆಂಗಳೂರು - ೪೦

## ನುಂಗಣ್ಣ ಹೇಳಿದ್ದು

*ನೀವು ಮಾಡುವಿರೇಕೆ ತಕರಾರು*
*ದಿಟ, ಕೊಂಡಿಹೆನು ಬಂಗಲೆ ನಾಕು, ಎರಡು ಮೂರು ಕಾರು*
*ನುಂಗಿದೆನು ನಾನು ? ಸುಳ್ಳಿದು ಕೇಳಿ, ದೇವರು,*
*ಬೇಕಿದ್ದರೆ ಕೊಟ್ಟು ನೋಡಿ ಜಾಪಾಳ ಎರಡು ಮೂರು ॥೧॥*

-ಸಿ. ಎಸ್. ಗೋವಿಂದರಾವ್

## ಸ್ವಾತಂತ್ರ್ಯಯೋಧರ ಗಾಥೆ

# ಶಕುಂತಲಾ ದಾಬಡೆ

### - ಒಬ್ಬ ಅಪೂರ್ವ ಮಹಿಳೆ

**ಲ**ಕ್ಷಾಂತರ ಜನ ಸ್ವಾತಂತ್ರ್ಯ ಯೋಧರು ಭೂಗತರಾಗಿ, ಜೈಲು ಶಿಕ್ಷೆ ಅನುಭವಿಸಿ ಹೋರಾಡಿದರು. ಆದರೆ ಆ ಸಂದರ್ಭದಲ್ಲಿ ಅವರ ಹೆಂಡರು ಮಕ್ಕಳು ಪಟ್ಟ ಪಾಡು ಮಾತ್ರ ಕರುಣಾಜನಕವಾಗಿತ್ತು. ಸ್ವತಂತ್ರ ಹೋರಾಟಗಾರ ಸ್ಥಿತಿವಂತನಾಗಿದ್ದರೆ ಸರಿ. ಇಲ್ಲವಾದರೆ ಅವರ ಹೆಂಡತಿ ಸ್ಥಿತಿ ನಾಯಿಪಾಡು ಆಗಿಹೋಗಿದೆ. ನರಸಿಂಹ ದಾಬಡೆಯವರ ಹೆಂಡತಿ ಶಕುಂತಲಾ ದಾಬಡೆ ಪಟ್ಟ ಪಾಡು ಯಾವ ಸ್ವಾತಂತ್ರ್ಯ ಹೋರಾಟಗಾರನನ್ನೂ ನಾಚಿಸುವಂತಿದೆ.

ಧಾರವಾಡದ ಭೀಮರಾವ್ ದಾನಿ ಎಂಬವರ ಮಗಳಾದ **ಶಕುಂತಲಾ** 1-3-1921ರಲ್ಲಿ ಧಾರವಾಡದಲ್ಲಿ ಹುಟ್ಟಿದರು. ಮುಲ್ಕೀ ಪರೀಕ್ಷೆ ಪಾಸಾದವರು. 1939ರಲ್ಲಿ ನರಸಿಂಹ ದಾಬಡೆಯವರನ್ನು ಮದುವೆಯಾದ ಮೇಲೆ ಸ್ವಾತಂತ್ರ್ಯ ಸಿಗುವವರೆಗೂ ಮುಳ್ಳಿನ ಹಾಸಿಗೆ ಮೇಲೆ ಜೀವನ ನಡೆಸಿದರು. ದಾಬಡೆ ಮದುವೆಯಾದಾಗಲೇ ಕಾಂಗ್ರೆಸ್ ಕಾರ್ಯಕರ್ತ. ನಿತ್ಯ ಅಲೆದಾಟ. 1941ರ ಚಳವಳಿಯಲ್ಲಿ ಜೈಲು ಸೇರಿದರು. ನಂತರ ವರ್ಷಗಟ್ಟಲೆ ಭೂಗತರಾಗಿ ಮನೆ ಬಿಟ್ಟುಹೋದರು. ಬೆನ್ನಲ್ಲೇ ಮತ್ತೆರಡು ವರ್ಷ ಜೈಲು ಸೇರಿದರು. ಇಂಥ ಸ್ಥಿತಿಯಲ್ಲಿ 20 ವರ್ಷದ ಯುವತಿ ಶಕುಂತಲಾ ಕಳೆದ ಜೀವನ ಭಯಂಕರವಾದದ್ದು. ಗಂಡ ಜೈಲಿಗೆ ಹೋದಾಗ ನೆಲೆಯಿಲ್ಲದೆ, ಸಂಸಾರ ನಿರ್ವಹಣೆಗೆ ದುಡ್ಡಿಲ್ಲದೆ ದಿನಕ್ಕೊಬ್ಬರ ಮನೆವಾಸ. ಅಂಥಾದ್ದರಲ್ಲಿಯೇ ಮೊದಲ ಮಗುವಿನ ಅನಾರೋಗ್ಯ, ಕೊನೆಗೂ ಮಗುವಿನ ಸಾವು. ಎರಡನೇ ಬಾರಿ ಗರ್ಭವತಿಯಾದಾಗ ಹೋದ ಗಂಡ ಮತ್ತೆ ಸಿಕ್ಕಿದ್ದು ಮಗಳು ಹುಟ್ಟಿದ ಐದು ತಿಂಗಳ ಮೇಲೆ. ಅದೂ ಕತ್ತಲೆಯಲ್ಲಿ ಪೊಲೀಸರ ಕಣ್ಣು ತಪ್ಪಿಸಿ. ಗಂಡ ಭೂಗತನಾಗಿದ್ದಾಗ ಬ್ರಿಟಿಷರ ಗುಂಡೇಟಿನಿಂದ ಸತ್ತವರ ಸುದ್ದಿ ಕೇಳಿ ಪ್ರತಿನಿತ್ಯ ಆತಂಕದ ಬದುಕು. ಪ್ರತಿ ಮುಂಜಾನೆ ಪತ್ರಿಕೆ ನೋಡಿ ಮುತ್ತೈದೆ ಭಾಗ್ಯ ಪಡೆಯುವದು. ಇಷ್ಟಕ್ಕೂ ಸುತ್ತಲಿನ ಜನ ಇವರಿಗೆ ಕೊಟ್ಟ ಬಹುಮಾನವೆಂದರೆ "ಇವರ ಗಂಡ್ರು ಜೇಲಿನಾಗಿದ್ದರ ಇವರು ಯಾರ್‍ಯಾರ್ದೋ ಜೋಡಿ ಮಜಾಮಾಡ್ತಾರಾ" ಎಂಬ ಹೊಲಸು ಮಾತುಗಳು. ಇದನ್ನೆಲ್ಲ ತಾಳಲಾರದೆ ಶಕುಂತಲಾ ದಾಬಡೆಯವರು ಭೂಗತನಿದ್ದಾಗಲೇ ಭೆಟ್ಟಿ ಆದ ಗಂಡನೆದುರು ತಮ್ಮ ನೋವನ್ನು ಹೇಳಿಕೊಳ್ಳುತ್ತಾರೆ. ಆಗ ನರಸಿಂಹ ದಾಬಡೆ ಹೇಳಿದ್ದು ನೀನೂ ಚಳುವಳಿ ಮಾಡಿ ಜೈಲು ಸೇರಿಬಿಡು ಅಂತ. ಪರಿಣಾಮ 1943 ಆಗಷ್ಟ 11ನೇ ತಾರೀಖು ಸಂಜೆ 5 ಘಂಟೆಗೆ ಶಕುಂತಲಾ ದಾಬಡೆ, ಶಾಂತಿಬಾಯಿ, ಬುರ್ಲಿ ಪದ್ದಕ್ಕ ಸೇರಿ ಧಾರವಾಡದ ಗಾಂಧೀಚೌಕಿಗೆ ಹೋದರು. ಅಲ್ಲಿ ಮೊದಲೇ ಸಿದ್ಧಪಡಿಸಿದ್ದ ಬ್ರಿಟಿಷರ ವಿರೋಧೀ, ಯುದ್ಧ ವಿರೋಧೀ ಭಾಷಣವನ್ನು ಶಕುಂತಲಾ ಜೋರಾಗಿ ಓದಿದರು. ಅದರ ಪ್ರತಿಗಳನ್ನು



ಶಾಂತಾಬಾಯಿ ಹಾಗೂ ಬುರ್ಲಿ ಪದ್ದಕ್ಕ ಜನರಿಗೆ ಹಂಚಿದರು. ತಕ್ಷಣವೇ ಈ ಮೂವರನ್ನೂ ಹಾಗೂ ಶಕುಂತಲಾರ ಮಗುವನ್ನೆತ್ತಿಕೊಂಡು ನಿಂತ ಅವರ ತಾಯಿ ಗಂಗಾಬಾಯಿಯವರನ್ನೂ ಪೊಲೀಸರು ಬಂಧಿಸಿದರು. ಧಾರವಾಡದ ನ್ಯಾಯಾಲಯದಲ್ಲಿ 16-8-43ರಂದು ಖಟ್ಲೆ ನಡೆದು ಶಕುಂತಲಾ ದಾಬಡೆ ಹಾಗೂ ಶಾಂತಾಬಾಯಿಯವರಿಗೆ ನಾಲ್ಕು ತಿಂಗಳ ಶಿಕ್ಷೆ ವಿಧಿಸಲಾಯಿತು. ಪುಟ್ಟಮಗು ಭಾರತಿಯೊಂದಿಗೇ ಶಕುಂತಲಾ ಬೆಳಗಾವಿಯ ಹಿಂಡಲಗಾ ಜೈಲು ಸೇರಿದರು. ಆಗ ಅವರಿಗೆ 22 ವರ್ಷ. ಜೈಲಿನಲ್ಲಿ ಇಂಥವರೇ ಆದ ಸುತಗೆಟ್ಟ ಬಸಮ್ಮ, ಪದ್ಮಾಬಾಯಿ ಬಿದರಿ, ಲೀನಾತಾಯಿ ಮಾಗಡಿ ಮುಂತಾದ ಸುಮಾರು 50 ಜನ ಮಹಿಳೆಯರಿದ್ದರು. ಭಾರತಿಯಂಥ 23 ಪುಟ್ಟ ಮಕ್ಕಳಿದ್ದರು.

ಶಕುಂತಲಾ ದಾಬಡೆ ನಿಶ್ಚಿಂತೆಯಿಂದ, ದೇಶ ಸೇವಾ ಮನೋಭಾವದ ತೃಪ್ತಿಯಿಂದ, ಸಮಾನ ಮನಸ್ಕರ ಜೊತೆ ನೆಮ್ಮದಿಯಿಂದ ದಿನಕಳೆದದ್ದು ಆ ಜೈಲಿನಲ್ಲಿಯೇ. ಆಗ ದಾಬಡೆ ಭೂಗತರಾಗಿದ್ದರು. ನಾಲ್ಕು ತಿಂಗಳ ಶಿಕ್ಷೆ ಪೂರೈಸಿಕೊಂಡು ಶಕುಂತಲಾ ಹೊರಬಂದ ನಂತರ ನರಸಿಂಹ ದಾಬಡೆಯವರನ್ನು ಬಂಧಿಸಿ ವಿಸಾಪೂರ ಜೈಲಿಗೆ ಕಳುಹಿಸಲಾಯಿತು. ಇಂಥ ಗಂಡನನ್ನೂ, ಇಂಥ ಪರಿಸ್ಥಿತಿಯನ್ನೂ ಅನುಭವಿಸಿ ಸ್ವತಂತ್ರಯೋಧನ ಪತ್ನಿಯಾಗಿ, ಸ್ವತಃ ಹೋರಾಟಗಾರ್ತಿಯಾಗಿ ಜೀವನ ನಡೆಸಿದ ಶಕುಂತಲಾ 4-4-1967ರಂದು ನಿಧನರಾದರು. ಇಂಥ ಮಹಾನ್ ಮಾತೆಯರು ನಮ್ಮ ಸ್ವತಂತ್ರ ಹೋರಾಟದಲ್ಲಿ ಲಕ್ಷಾಂತರ ಜನರಿದ್ದರು.

ಡಾ|| ಸಿದ್ದನಗೌಡ ಪಾಟೀಲ
ಪಟ್ಟಣಶೆಟ್ಟಿ ಬಿಲ್ಡಿಂಗ್, ಶ್ರೀನಗರ, ಧಾರವಾಡ - ೫೮೦ ೦೦೩

---

(೨೯ನೇ ಪುಟದಿಂದ)

ಮೈಗೂಡಿಹೋಗಿದೆ. ತನಗೆ ಅನುಕೂಲವೆನಿಸಿದಾಗ ಈ ಅಸ್ತ್ರಗಳನ್ನು ಬಳಸುತ್ತದೆ. ಪಿನೋಶೆಯಂತಹ ಭಂಟನ ವಿಷಯ ಬಂದಾಗ ಮಾನವ ಹಕ್ಕುಗಳ ಮಾತೇ ಅಮೆರಿಕಾಕ್ಕೆ ರುಚಿಸುವುದಿಲ್ಲ.

ಎರಡನೇ ಮಹಾಯುದ್ಧದನಂತರ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವ ಅಮೆರಿಕ ಈ ಎರಡೂ ಅಸ್ತ್ರಗಳನ್ನು ಪ್ರಯೋಗಿಸುತ್ತಿದೆ. ಅವನ್ನು ಪಟ್ಟಿಮಾಡಲು ಹೊರಟರೆ ಅದೇ ಒಂದು ಲೇಖನದ ಸಾಮಗ್ರಿಯಾಗುತ್ತದೆ. ತಾನು ಸಶಸ್ತ್ರ ಹಸ್ತಕ್ಷೇಪ ನಡೆಸಿದ ಒಂದೊಂದು ದೇಶದ ಮೇಲೂ ಅಮೆರಿಕ ಆರ್ಥಿಕ ದಿಗ್ಬಂಧನವನ್ನು ಹೇರಿದೆ. ದಕ್ಷಿಣ ಆಫ್ರಿಕದ ಅಮಾನುಷವಾದ ಅಪಾರ್ಥಿಡ್ ನೀತಿಯ ವಿರುದ್ಧ ಕಟ್ಟುನಿಟ್ಟಾದ ಆರ್ಥಿಕ ದಿಗ್ಬಂಧನವನ್ನು ಹೊರಿಸದೇ ಇದ್ದ ಅಮೆರಿಕ ತಾನು ವಿರೋಧಿ ಎಂದು ಬಗೆದ ದೇಶಗಳ ಮೇಲೆ ಎಲ್ಲ ಮಾನವೀಯ ಮೌಲ್ಯಗಳನ್ನೂ ದೂರವಿರಿಸಿ ಆರ್ಥಿಕ ದಿಗ್ಬಂಧನ ಹೊರಿಸಿದೆ. ಇತರ ಪಶ್ಚಿಮ ರಾಷ್ಟ್ರಗಳೂ ಅದೇ ನೀತಿಯನ್ನು ಅನುಸರಿಸುವಂತೆ ಮಾಡಿದೆ. ವಿಶ್ವಸಂಸ್ಥೆಯಲ್ಲಿ ತನ್ನ ಪ್ರಾಧಾನ್ಯತೆಯನ್ನು ಬಳಸಿಕೊಂಡು ಜಾಗತಿಕ ಆರ್ಥಿಕ ದಿಗ್ಬಂಧನ ಹೊರಿಸುವುದರಲ್ಲೂ ಸಫಲಗೊಂಡಿದೆ. ಇರಾಕ್ ಅಂಥ ದೇಶಗಳಲ್ಲಿ ಒಂದು.

ಅಮೆರಿಕ ಆರ್ಥಿಕ ದಿಗ್ಬಂಧನ ಹೊರಿಸಿದ ದೇಶಗಳು ಒಂದೇ ಎರಡೇ. 20 ವರ್ಷಗಳ ಕಾಲ ನಾಪಾಮ್ ಬಾಂಬು, ಎಲೆ ಉದಿರಿಸಿ ಬೆಂಗಾಡಾಗಿಸುವ ರಾಸಾಯನಿಕ ವಸ್ತುಗಳನ್ನು ಸಿಂಪಡಿಸಿದ ವಿಯೆಟ್ನಾಮ್‌ನಿಂದ ಹಿಡಿದು, ಕ್ಯೂಬಾ, ಉತ್ತರ ಕೊರಿಯಾ ಮೊದಲಾದವುಗಳ ಜೊತೆಗೆ ಇರಾಕ್ ಸೇರಿದೆ. ವಿಯೆಟ್ನಾಮ್‌ನ ಮೇಲೆ ಹೊರಿಸಿದ್ದ ದಿಗ್ಬಂಧನವನ್ನು ಈಚೆಗೆ ತೆಗೆದುಹಾಕಲಾಯಿತು ಎನ್ನಿ. ಆದರೂ ಆರ್ಥಿಕ ದಿಗ್ಬಂಧನದ ಪರಿಣಾಮ ಅತ್ಯಂತ ಕ್ರೂರವಾದದ್ದಾಗಿದೆ.

ಇರಾಕಿನಲ್ಲಿ ಅದರ ದುಷ್ಪರಿಣಾಮ ಅತ್ಯಂತ ತೀವ್ರವಾಗಿದೆ. ಜನಸಾಮಾನ್ಯರ ಸ್ಥಿತಿ ನಿಜಕ್ಕೂ ಚಿಂತಾಜನಕವಾಗಿದೆ. ಆಹಾರ ಸಾಮಗ್ರಿಗಳ ಕೊರತೆ, ಜೀವನಾವಶ್ಯಕ ಔಷಧಿಗಳ ಅಭಾವದಿಂದ ಸಹಸ್ರಾರು ಮಕ್ಕಳು ಅಸು ನೀಗುತ್ತಿವೆ. ಇರಾಕ ಆಡಳಿತ ಎಡವಿದ ತಪ್ಪಿಗೆ ಜನತೆ ಈಗಲೇ ಸಾಕಷ್ಟು ಕಷ್ಟನಷ್ಟಗಳನ್ನು ಅನುಭವಿಸಿದೆ. ಆದರೆ ವರ್ಷಗಟ್ಟಳೆ ಮುಂದುವರೆಯುತ್ತಿರುವ ದಿಗ್ಬಂಧನದಿಂದಾಗಿ ಇಂದು ಪರಿತಪಿಸುತ್ತಿರುವುದು ಸಾಮಾನ್ಯ ಜನ. ಮಾನವೀಯ ದೃಷ್ಟಿಯಿಂದಲಾದರೂ ಇರಾಕಿನ ಜನತೆ ಆಹಾರ ಸಾಮಗ್ರಿ ಮತ್ತು ಔಷಧಿಗಳನ್ನು ಪಡೆಯುವುದು ಅಗತ್ಯ. ಆದರೆ ಅಮೆರಿಕ ತನ್ನ ಕಡುವೈರಿ ಸದ್ದಾಮ್ ಹುಸೇನನನ್ನು ಮಣಿಸುವ ಹಠದಿಂದಾಗಿ ಸಾಮಾನ್ಯ ಜನ ಆಹುತಿಯಾಗುತ್ತಿದ್ದಾರೆ. ಇದೆಂಥ ಅಮಾನವೀಯತೆ ! ಮುಂದಿನ ಶತಮಾನಕ್ಕೆ ಕಾಲಿರಿಸುತ್ತಿರುವ ಈ ಸಂದರ್ಭದಲ್ಲಾದರೂ ಮಾನವೀಯತೆಯಲ್ಲಿ ವಿಶ್ವಾಸವಿರುವ ಎಲ್ಲ ದೇಶಗಳೂ ಅಮೆರಿಕದ ಮೇಲೆ ಒತ್ತಾಯ ತಂದು ಇರಾಕಿನ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನ ಕೊನೆಗೊಳ್ಳುವಂತೆ ಮಾಡುವುದು ಅಗತ್ಯ. ವಿಶ್ವಸಂಸ್ಥೆಯ ಭದ್ರತಾ ಮಂಡಲಿ ಇನ್ನೆಷ್ಟು ಕಾಲ ಅಮೆರಿಕಾದ ದಾಳವಾಗಿ ಉಳಿಯಬೇಕು?

ಪೀಯಾರ್ಕೆ
೭೮೯, ೬ನೇ ಕ್ರಾಸ್, ೧೧ನೇ ಮೇನ್, ಬನಶಂಕರಿ ೩ನೇ ಹಂತದ
೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಕೃಷಿಯೆಂಬ ಮಾಯಾಲೋಕ

ಇದೊಂದು ವಿಪರ್ಯಾಸ. ಹಳ್ಳಿಗಳಲ್ಲಿ ಹಸಿರಿರಬೇಕೆಂಬುದು ಎಲ್ಲರ ಸಾಮಾನ್ಯ ಆಶಯ. ಹಳ್ಳಿಗಳಲ್ಲಿ ಹಸಿರಿಲ್ಲದಿದ್ದರೆ ಪಟ್ಟಣಗಳ ಕಾಂಕ್ರೀಟ್ ಮೇಲೆ ಹಸಿರಿರಲು ಸಾಧ್ಯವೇ ಎಂಬುದು ಎಲ್ಲರ ಭಾವನೆ. ಆದರೆ ನಿಜಸ್ಥಿತಿಯೇ ಇದಕ್ಕೆ ತದ್ವಿರುದ್ಧ. ಇಂದು ಬಹುಶಃ ಬೆಂಗಳೂರಿನಲ್ಲಿರುವಷ್ಟು ಹಸಿರಿನ ಹೊದಿಕೆ ಯಾವ ಹಳ್ಳಿಗಳಲ್ಲೂ ಇಲ್ಲ. ಮಲೆನಾಡು ಸಹ ಬೆಂಗಾಡಾಗತೊಡಗಿದೆ. ಬೆಂಗಳೂರಿನಲ್ಲಿ ಹಸಿರಿರಲು ಕಾರಣಗಳೇನೇ ಇರಲಿ, ಆದರೆ ಹಳ್ಳಿಗಳಲ್ಲಿ ಹಸಿರೇಕಿಲ್ಲ ಎಂಬುದಕ್ಕೆ ಯಾವ ಬಲವಾದ ಕಾರಣಗಳೂ ಇಲ್ಲ. ಏನಾದರೂ ಕಾರಣವಿದ್ದರೆ, ಅದು ಕೇವಲ ಹಳ್ಳಿಗರ ದುರಾಸೆ.

ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಮೈಲಿಗಟ್ಟಲೆ ಪ್ರಯಾಣಿಸಿದರೂ ಮರಗಳೇ ಕಾಣಸಿಗುವುದಿಲ್ಲ. ರೈತರು ಹೊಲಗಳಲ್ಲಿ ಮರಗಳನ್ನು ನೆಡುವ ಮಾತಿರಲಿ, ತಮಗೆ ತಾವೇ ನೈಸರ್ಗಿಕವಾಗಿ ಬೆಳೆದುಬರುವ ಎಷ್ಟೋ ಸಸಿಗಳನ್ನು ಕಡಿದುಹಾಕುವುದು ಸಾಮಾನ್ಯ. ಇದರ ಪರಿಣಾಮವಾಗಿ ವರ್ಷದಿಂದ ವರ್ಷಕ್ಕೆ ಕೃಷಿ ಬದುಕು ಅಸ್ತವ್ಯಸ್ತವಾಗುತ್ತಿದೆ. ರಾಯಚೂರು, ಗುಲ್ಬರ್ಗಾ ಜಿಲ್ಲೆಗಳಲ್ಲಿ ತಾಳಲಾರದ ಸೆಖೆ(ಕಾವು) ಇರುವುದೂ ಕೂಡ ಮರಗಳ ಕೊರತೆಯಿಂದಲೇ. ಇತರ ಜಿಲ್ಲೆಗಳಲ್ಲಿ ಪರಿಸ್ಥಿತಿ ಇಷ್ಟು ಕೆಟ್ಟಿಲ್ಲವಾದರೂ ತುಂಬಾ ಆಶಾದಾಯಕವಾಗೇನೂ ಇಲ್ಲ. ಈ ಪರಿಸ್ಥಿತಿಗೆ ಕಾರಣಗಳನ್ನು ಹೀಗೆ ಗುರುತಿಸಬಹುದೇನೋ:

ಕಾಡನ್ನು ಕಡಿದೇ ಕೃಷಿ ಮಾಡುತ್ತಿರುವುದು ಸರಿಯಷ್ಟೆ. ರೈತನ ಮನಸ್ಸಿನ ಯಾವುದೋ ಮೂಲೆಯಲ್ಲಿ ಬಹುಶಃ ಕಾಡು ಮತ್ತು ಕೃಷಿ ಒಟ್ಟಿಗೆ ಇರಲಾರವೆಂಬ ಭಾವನೆ ಮೂಡಿಬಿಟ್ಟಿರಬೇಕು. ಆದರೆ ಪ್ರತಿ ಜಮೀನಿನಲ್ಲಿ ಎಕರೆಗೆ ಸುಮಾರು 250 ಮರಗಳಿಲ್ಲದಿದ್ದರೆ ಕೃಷಿ ಸಾಧ್ಯವಾಗುವುದಿಲ್ಲ ಎಂಬ ಸತ್ಯ ಅರಿವಾಗಲು ತುಂಬಾ ವರ್ಷಗಳೇನೂ ಕಾಯಬೇಕಾಗಿಲ್ಲ.

ಎರಡನೆಯದು ಬಹುಶಃ ಪ್ರಬಲ ಕಾರಣ. ನಮ್ಮ ಕೃಷಿ ವಿಜ್ಞಾನಿಗಳು ಮರಗಳ ಬಗ್ಗೆ ತಳೆದಿದ್ದ ದಿವ್ಯ ನಿರ್ಲಕ್ಷ್ಯ. ಮರಗಳ ನೆರಳಿನಲ್ಲಿ ಬೆಳೆ ಬರುವುದಿಲ್ಲ, ಮರದ ಎರಚಲಿಗೆ ಬೆಳೆ ಬರುವುದಿಲ್ಲ, ನೀಲಗಿರಿ ಮರದ ಬುಡದಲ್ಲಿ ಬೆಳೆ ಬರುವುದಿಲ್ಲ ಎಂಬ ಆಧಾರ ರಹಿತ ಸುಳ್ಳುಗಳನ್ನು ಅನೇಕ ವರ್ಷಗಳಿಂದ ವ್ಯವಸ್ಥಿತವಾಗಿ ಹರಡುತ್ತಿರುವ ಕೃಷಿ ವಿಜ್ಞಾನಿಗಳು ಬಹುಶಃ ಇಂದಿನ ಮರರಹಿತ ಕೃಷಿ ಪದ್ಧತಿಗೆ ಬಹುತೇಕ ಕಾರಣ.

ಮರ ಆಧಾರಿತ ಕೃಷಿ ಪದ್ಧತಿಯ ಮೂಲ ಪಾಠಗಳನ್ನು ಇಂದು ನಮ್ಮ ಎಲ್ಲ ಕೃಷಿ ಪಂಡಿತರು ಮೊದಲಿನಿಂದಲೇ ಕಲಿಯಬೇಕಿದೆ. ಕೃಷಿ ಉತ್ಪನ್ನವಾದ 'ಆಹಾರ ಶಕ್ತಿ' ಅಗಾಧ ಪ್ರಮಾಣದಲ್ಲಿ ಭೂಮಿಯನ್ನು ಪ್ರತಿ ಗಳಿಗೆಯೂ ಅಪ್ಪಳಿಸುತ್ತಿರುವ ಸೂರ್ಯಶಕ್ತಿಯ ಮತ್ತೊಂದು ರೂಪ ಎಂಬ ಸತ್ಯವನ್ನು ಅರಿಯಲು ಯಾವುದೇ ಪಿಎಚ್.ಡಿ. ಪದವಿಗಳ ಅವಶ್ಯಕತೆಯೂ ಇಲ್ಲ. ಈ ಸೂರ್ಯಶಕ್ತಿಯನ್ನು ಸೂಕ್ಷ್ಮವಾಗಿ ಸಂಗ್ರಹಿಸಿ ಪರಿಣಾಮಕರವಾಗಿ ಕೃಷಿಯಲ್ಲಿ ಬಳಸಬೇಕಾದರೆ ಮರಗಳ ಮಾಧ್ಯಮ ಕೃಷಿಗೆ ಅವಶ್ಯಕ.

ರೈತನ ಜಮೀನಿನಲ್ಲಿ ಪ್ರತಿ 20 ಮೀಟರ್‌ಗೊಂದರಂತೆ ಬದುಗಳನ್ನು ಮಾಡಿ ಪ್ರತಿ ಬದುವಿನ ಮೇಲೆ ಮೀಟರಿಗೊಂದರಂತೆ ಎಲ್ಲಾಜಾತಿಯ ಮರಗಳನ್ನು ನೆಟ್ಟರೆ ಒಂದು ಹೆಕ್ಟೇರ್ ಪ್ರದೇಶದಲ್ಲಿ ಸುಮಾರು 1000 ಮರಗಳನ್ನು ನೆಡಬಹುದು. ರೈತನಿಗೆ ಇದೇ ಮುಖ್ಯ ಬೆಳೆಯೂ ಹೌದು, ಅಂತರ ಬೆಳೆಯೂ ಹೌದು. ಆಯಾ ಪ್ರದೇಶಕ್ಕೆ ಅನುಗುಣವಾಗಿ ಎಲ್ಲಾ ಬೆಳೆಗಳನ್ನು ಈ ಮರಗಳ ಮಧ್ಯೆಯೇ ಬೆಳೆಯಬಹುದು. ಪ್ರತಿವರ್ಷ ಬೆಳೆಗೆ ಮೊದಲು ಮರದ ಕೊಂಬೆಗಳನ್ನು ಸವರಿ ಎಲ್ಲಾ ಎಲೆಗಳನ್ನು ಭೂಮಿಯಲ್ಲಿ ಸೇರಿಸುವುದರಿಂದ ಭೂಮಿಯ ಫಲವತ್ತತೆ ಹೆಚ್ಚಾಗಿ ಬೆಳೆಗಳ ಇಳುವರಿಯೂ ಹೆಚ್ಚಾಗುವುದು. ಭೂಮಿಯ ಆಳದ ಪದರಗಳಿಂದ ಖನಿಜ, ತೇವಾಂಶಗಳನ್ನು ಹೀರಿ ಮರ ಬೆಳೆಯುವುದರಿಂದ ಬೆಳೆಗಳಿಗೆ ಯಾವುದೇ ತೊಂದರೆ ಇಲ್ಲ. ಅಷ್ಟೇ ಅಲ್ಲ ಎಲೆಗಳು ಉದುರಿ ಭೂಮಿಯ ಮೇಲೆ ಮತ್ತೆ ಮಣ್ಣಾಗುವುದರಿಂದ ಸಾಮಾನ್ಯವಾಗಿ ಬೆಳೆಗೆ ಸಿಗಲಾರದಂತಹ ಭೂಮಿಯ ಆಳದ ಪೌಷ್ಟಿಕಾಂಶಗಳು ಈಗ ಸಿಗತೊಡಗುತ್ತವೆ. ಹಾಗೆಯೇ ಪ್ರತಿಯೊಂದು ಮರವೂ ಒಂದೊಂದು ನೀರಿನ ಉಗ್ರಾಣವೇ ಹೌದು. ಮಳೆಯ ನೀರನ್ನು ಶೇಖರಿಸಲು ಅತಿ ಸುಲಭದ, ನೈಸರ್ಗಿಕ ವಿಧಾನವೆಂದರೆ ಮರಗಳು. ಬೆಳೆಗಳಿಲ್ಲದ ಸಮಯದಲ್ಲಿ ಬಂದ ಮಳೆ ನೀರು, ಮತ್ತು ಬೆಳೆಗಳಿಗೆ ಹೆಚ್ಚಾದ ಮಳೆ ನೀರನ್ನು ಬಳಸಿಕೊಳ್ಳಲು ಹೊಲದ ತುಂಬಾ ಮರಗಳಿರುವುದು ಅವಶ್ಯ. ಮರದ ಎಲೆಗಳಿಂದ ಬಾಷ್ಪೀಕರಣದ ಮೂಲಕ ಹೊರಬರುವ ನೀರು ಹವೆಯನ್ನು ತಂಪಾಗಿಸಿ, ಮಳೆ ಅಭಾವ ಪರಿಸ್ಥಿತಿಯಲ್ಲಿ ಬೆಳೆ ಒಣಗುವುದನ್ನು ತಪ್ಪಿಸುತ್ತದೆ. ಆದರೆ ನಮ್ಮ ಘನ ಕೃಷಿ ವಿಜ್ಞಾನಿಗಳು ತಾವು ಬೆಳೆದ 10-15 ಮರಗಳ ಸುತ್ತ (ಅದೂ ಯಾವುದೋ ಒಂದು ಜಾತಿಯ ಮರಗಳ ಸುತ್ತ) ಒಂದಷ್ಟು ಕಾಳು ಚೆಲ್ಲಿ ಮರ ಮತ್ತು ಬೆಳೆಯ ಮಧ್ಯೆ ಇರಬಹುದಾದ ವೈರುಧ್ಯಗಳನ್ನು ಅಭ್ಯಸಿಸಲು ಪ್ರಯತ್ನಿಸುತ್ತಾರೆ. ಪರಿಣಾಮವಾಗಿ ತಾವು ದಾರಿ ತಪ್ಪುವುದರೊಂದಿಗೆ ರೈತರನ್ನೂ ದಾರಿತಪ್ಪಿಸುತ್ತಾರೆ. ನಾವು ಮರಗಳ ಬಗ್ಗೆ ಮಾತನಾಡುವಾಗ ಯಾವುದೇ ಒಂದು ಜಾತಿಯ ಮರಗಳ ಬಗ್ಗೆ ಮಾತನಾಡುವುದು ಸರಿಯಲ್ಲ. ಪ್ರಕೃತಿಯಲ್ಲಿ ಎಲ್ಲೂ ಒಂದೇ ಜಾತಿಯ ಮರಗಳಿರುವುದಿಲ್ಲ; ಹಾಗೆಯೇ ಹೊಲದಲ್ಲಿಯೂ ಒಂದೇ ಜಾತಿಯ ಮರಗಳಿಗೆ ಅವಕಾಶ ಕೊಡುವ ಹಾಗಿಲ್ಲ. ಸ್ಥಳೀಯವಾಗಿ ಬೆಳೆಯುವ ಎಲ್ಲಾ ಮರಗಳ ಜೊತೆಗೆ ಸಣ್ಣ ಪೊದೆಗಳು, ಬಳ್ಳಿಗಳು, ಮುಳ್ಳು ಕಂಟಿಗಳು, ಗೆಣಸುಗಳು, ಇತ್ಯಾದಿಗಳೂ ಇರಬೇಕು. ಕೆಲವರಿಗೆ ಮರಗಳಲ್ಲೂ **'ಅಸ್ಪೃಶ್ಯರು'** ಕಾಣಿಸಿಬಿಡುತ್ತಾರೆ. **ನೀಲಗಿರಿ ನೀರು ಕುಡಿಯುತ್ತೆ**, **ಬಾಗೆ** ಮರ **ಆಗಿಬರುವುದಿಲ್ಲ**, ತಾಳೆ ಮರದಲ್ಲಿ **ಶನಿದೇವರ ಕಾಟ**, ಹೀಗೆ ಮರ ನೆಡದಿರಲು ಏನೇನೋ ಕುಂಟುನೆಪಗಳು. ಅಂತೂ ಇಂತೂ ರೈತನ ಹೊಲದಲ್ಲಿ ಮರಗಳಿಲ್ಲ ಎಂಬ ಪರಿಸ್ಥಿತಿ.



ಸರ್ಕಾರದ ಅನೇಕ ಯೋಜನೆಗಳಲ್ಲಿ ಬೆಳೆಸಿ ನೆಡಿಸಿದ ಮರಗಳೆಲ್ಲಿ, ಎಂಬ ಪ್ರಶ್ನೆಯೇ ಅಪ್ರಸ್ತುತವೇನೋ ಎನಿಸಿಬಿಡುತ್ತದೆ. ರೈತನ ಹೊಲದಲ್ಲಿ ಮರ ನೆಡಿಸಿ ಉಳಿಸಿಕೊಂಡುಹೋಗುವುದು ಅಷ್ಟು ಸುಲಭವಲ್ಲ ಎಂಬುದು ಹೌದಾದರೂ ಈ ಬಗ್ಗೆ ಪ್ರಯತ್ನಗಳೂ ಸಾಲದೆಂಬುದನ್ನು ಗಮನಿಸಬೇಕು.

ದೊಡ್ಡ ರೈತರೇನೋ ಸ್ವಲ್ಪ ನೆಡಬಹುದು. ಆದರೆ ಸಣ್ಣ ರೈತರು ಖಂಡಿತ ನೆಡಲು ಸಾಧ್ಯವಿಲ್ಲ ಎಂಬ ವಾದವೂ ಇದೆ. ಇದಕ್ಕಿಂತಲೂ ತಪ್ಪು ತಿಳುವಳಿಕೆಯೆಂದರೆ ಬೆಳೆ ಬೆಳೆಯುವ ಹೊಲಗಳಲ್ಲಿ ಮರ ಹಾಕಿಬಿಟ್ಟರೆ ನಮ್ಮ ಜನಸಂಖ್ಯೆಗೆ ಬೇಕಾದ ಆಹಾರಧಾನ್ಯದ ಕೊರತೆಯಾಗುವುದು ಎಂಬ ನಮ್ಮ ವಿಜ್ಞಾನಿಗಳ ಅಂಬೋಣ. ಈ ಕುರಿತು ಮುಂದಿನ ಸಂಚಿಕೆಗಳಲ್ಲಿ ಚಿಂತಿಸೋಣ.

ಡಾ|| ಜಿ. ಎನ್. ಎಸ್. ರೆಡ್ಡಿ
ಮುಖ್ಯ ಕಾರ್ಯಕ್ರಮ ಸಂಯೋಜಕ ಅಧಿಕಾರಿಗಳು,
ಗ್ರಾಮೀಣ ಅಭಿವೃದ್ಧಿ [illegible] (ರಿ) [illegible]ನು, [illegible]
ಶಾರದಾನಗರ, ತಿಪಟೂರು - [illegible]

## ಬಾಪು ಮತ್ತು ನಾವು



*ಸತ್ಯವೇನಿದ್ದರೂ ನೀನೊಬ್ಬನೇ ಬಳಸಿ,*
*ನಮಗೆ ಸುಳ್ಳನು ಮಾತ್ರ ಉಳಿಸಿ ಬಿಟ್ಟೆ*
*ಕೋಲು ನೀನೇ ಹಿಡಿದು, ಕರಟವನು ನಮಗಿತ್ತು*
*ಭಿಕ್ಷೆ ಬೇಡುವ ದೀಕ್ಷೆ ನಮಗೆ ಕೊಟ್ಟೆ*

*ಮಾತೆತ್ತಿದರೆ ನೀನು ಉಪವಾಸ ವ್ರತತೊಟ್ಟು*
*ಮೂಳೆ ಚಕ್ಕಳವಾಗಿ ಹೊರಟುಬಿಟ್ಟೆ*
*ಸಿಕ್ಕಿದ್ದ ತಿನ್ನಲಿಕೆ ಸ್ವಾತಂತ್ರ್ಯವನು ಗಳಿಸಿ*
*ನಾವು ಬೆಳೆಸಿದ್ದೇವೆ ಡೊಳ್ಳು ಹೊಟ್ಟೆ !*



*ಒಳ್ಳೆಯದು ಎಲ್ಲವನು ಗುಡಿಸಿ, ಸಾರಿಸಿ, ಒಪ್ಪ*
*ಮಾಡಿಕೊಂಡೆ ನಿನ್ನ ಸ್ವಂತ ಆಸ್ತಿ !*
*ಹೀಗಾಗಿ ನಾವೀಗ ಕೆಡಕನ್ನೆ ಒಳಿತೆಂದು*
*ಭ್ರಮಿಸಿ ನಡೆಸಿದ್ದೇವೆ ಜಂಗಿಕುಸ್ತಿ !*

*ನೀನು ಎತ್ತರ ಬೆಳೆದೆ ಓ ಬಾಪು ! ನಾವಂತು*
*ಕುಳ್ಳರಾಗಿದ್ದೇವೆ - ಸುಳ್ಳು ಹೇಳಿ*
*ನೀನು ಬೆಳಕಿನ ಕಡೆಗೆ ತಿರುಗಿ ಹೊರಟೇ ಬಿಟ್ಟೆ;*
*ನಮಗೋ ? - ಬೆಳಗಾಗಿಲ್ಲ, ಕೂಗಿ ಕೋಳಿ !*

**ಎನ್. ಶ್ರೀನಿವಾಸ ಉಡುಪ**
'ಪ್ರಾರ್ಥನಾ' ಎಂ.ಐ.ಜಿ. ೩೬೯,
ಕೆ.ಹೆಚ್.ಬಿ. ಎರಡನೇ ಹಂತ, ಕಲ್ಲಹಳ್ಳಿ
ವಿನೋಬ ನಗರ, ಶಿವಮೊಗ್ಗ - ೫೭೭ ೨೦೪

## ಆನೆಯ ಹಾಡು



*''ಆನೆ ಬಂತು ಆನೆ''*
*''ಯಾವ ಕಾಡು ಆನೆ ?''*
*''ಕಾಡೇ ಇಲ್ಲ ಈಗ.''*
*''ಮತ್ತೆ ಯಾವ ಆನೆ ?''*
*''ನಮ್ಮ ಗುಡಿಯ ಆನೆ''*
*''ಆನೆಗೇನು ಕೆಲಸ ?''*
*''ಭಿಕ್ಷೆ ಬೇಡೋ ಕೆಲಸ''*
*''ಯಾರಿಗಾಗಿ ಭಿಕ್ಷೆ ?''*
*''ಭಂಡಾರಿಗಾಗಿ ಭಿಕ್ಷೆ''*
*'ಆನೆ ಬಂತು ಆನೆ''*
*''ಗಂಡೋ ಹೆಣ್ಣೋ ಆನೆ ?''*
*''ಗಂಡೇ ಇಲ್ಲ ಈಗ''*
*''ಗಂಡು ಯಾಕೆ ಇಲ್ಲ ?''*
*''ದಂತಕಾಗಿ ಗುಂಡು''*
*''ಮುಂದೆ ಆನೆ ಸಂತತಿ ?''*
*''ಬಿಡು ಅದರ ಸಂಗತಿ''*
*''ಆನೆ ತಿರುಗಿ ಸಿಗುವುದೆ ?''*
*''ಟಿ.ವಿ.ಯಲ್ಲಿ ಮಾತ್ರ !''*

**ಹಾಲಾಡಿ ಮಾರುತಿರಾವ್**
ನಂ. ೩/೪, ಮಾಹ್ಯಾಸ ನಿವಾಸ, ಅಬ್ಬಿಗೆರೆ ಬಡಾವಣೆ,
ಚಿಕ್ಕಬಾಣಾವರ ರಸ್ತೆ, ಬೆಂಗಳೂರು-೯೦

## ನಿಮಗೆ ತಿಳಿದಿರಲಿ

- ಫ್ರಾನ್ಸ್‌ನ ಜೋಸೆಫ ಜಕಾರ್ಡ್ ಭಿನ್ನ ಮಾದರಿಗಳ ಬಟ್ಟೆ ನೇಯ್ಗೆ ಮಾಡುವ ಮಗ್ಗವನ್ನು 1801ರಲ್ಲಿ ನಿರ್ಮಿಸಿದ.
- ವ್ಹಿಟ್ಕಾಂಟ್ ಜುಡ್ಸನ್ 1890ರಲ್ಲಿ 'ಜಿಪ್'ಗಳನ್ನು ತಯಾರಿಸಿದ. ಬೂಟುಗಳಿಗೆ ಅದನ್ನು ಮೊದಲು ಉಪಯೋಗಿಸಲಾಯಿತು. ಅನಂತರ ಅಮೆರಿಕದ ನೌಕಾಸೇನೆ ಉಡುಪುಗಳಲ್ಲಿ ಗುಂಡಿಗಳಿಗೆ ಬದಲಾಗಿ ಬಳಸಿತು.
- ಲೀವೈ ಸ್ಟ್ರಾಸ್ 1850ರಲ್ಲಿ ಮೊದಲ ಜೀನ್ಸ್ ಪ್ಯಾಂಟ್ ತಯಾರಿಸಿದ. ಇಟಲಿಯ ಜಿನೋವಾದಲ್ಲಿ ಮೊದಲು ಅದು ತಯಾರಾದ್ದರಿಂದ ಅದಕ್ಕೆ ಜೀನ್ಸ್ ಎಂದು ಹೆಸರು ಬಂದಿತು.
- ಮೂರು ಸಾವಿರ ವರ್ಷಗಳ ಹಿಂದೆ ಈಜಿಪ್ಟಿನ ಕಲಾವಿದನೊಬ್ಬ ಬೈಸಿಕಲ್‌ನ ಚಿತ್ರ ರಚಿಸಿದ್ದ. ಆ ಚಿತ್ರವನ್ನು ಈಜಿಪ್ಟಿನ ಲಕ್ಸಾರ್ ದೇವಾಲಯದಲ್ಲಿ ಕಾಣಬಹುದು.
- ಗೂಬೆಗಳ ಕಿವಿಗಳು ಮನುಷ್ಯರ ಕಿವಿಗಳು ಕೇಳಿಸಿಕೊಳ್ಳಬಹುದಾದಂಥ ಸದ್ದಿಗಿಂತ ಹತ್ತು ಪಟ್ಟು ಹೆಚ್ಚು ಸೂಕ್ಷ್ಮವಾದ ಸದ್ದುಗಳನ್ನು ಕೇಳಿಸಿಕೊಳ್ಳಬಲ್ಲವು.
- ಆನೆಗಳು ಪ್ರತಿದಿನವೂ ಕಾಲು ಟನ್ನಿಗೂ ಹೆಚ್ಚು ಸಸ್ಯಾಹಾರ ಸೇವಿಸುತ್ತವೆ.

# ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| 1 | | | 2 | | 3 | | | 4 |
| | | | | | | | | |
| | | 5 | | | | 6 | | |
| 7 | | | 8 | | | | | |
| | | | | | | | | |
| 9 | | | | | | | | 10 |
| | | 11 | | 12 | | 13 | | |
| | | | | 14 | | | | |
| 15 | | | | | | | 16 | |

**ಎಡದಿಂದ ಬಲಕ್ಕೆ**

1. ಪೂರ್ವ ಕಾಲದಲ್ಲಿ ಮೊಟ್ಟ ಮೊದಲ ಕಬ್ಬಿಗ
3. ಗೋಕುಲದಾಸ್ ಮಾಕಂಜಿಯ ಪುತ್ರಿ
5. 'ಜಯ'ಕಾರದ ನಂತರ ಬಂದ ಇವರು ಭೂಗತ ಚಳುವಳಿ ಸಂಘಟಿಸಿದರು.
7. ಉದಾಹರಣೆಗೆ ಜಲಿಯನ್ ವಾಲಾಬಾಗ್‌ನಲ್ಲಾದ 'ಹಾನಿ' !
8. ನರೇಂದ್ರರ ಗುರು ರಾಮಕೃಷ್ಣ ಪರಮಹಂಸರಿದ್ದ ಸ್ಥಳ.
9. ಜರ್ಮನ್ ಕವಿ ಗಯಟೆಯ ಮಹಾನ್ ಕೃತಿ 'ಅದೃಷ್ಟ ಶಾಲಿ'ಯಾಗಿದೆ
11. ಏನೂ ತಿಳಿಯದ ಸ್ಥಿತಿಯಲ್ಲಿನ ವಿಸ್ಮಯ !
13. ಮರಳಿಬಾರದವ ಶಿವನಲ್ಲಿ ಲೀನನಾಗಿದ್ದಾನೆ.
14. ದೇಶ-ಪಂಗಡಕ್ಕೆ ಸೇರಿದ ಮಂದಿಯ ಸಮೂಹ
15. ಮೂರು ಸಮುದ್ರಗಳು ಸೇರುವ ಈ ಕ್ಷೇತ್ರದಲ್ಲೇ ಮೇಲಿನಿಂದ ಕೆಳಕ್ಕೆ 2ರಲ್ಲಿರುವವರ ಸ್ಮಾರಕವಿದೆ.
16. ಇತ್ತೀಚಿನ ಕಾರ್ಗಿಲ್‌ನಲ್ಲಿ ಸೈನಿಕರು ಇದನ್ನು ತ್ಯಾಗ ಮಾಡಿ ವೀರ ಮರಣ ಹೊಂದಿದರು.

**ಮೇಲಿನಿಂದ ಕೆಳಕ್ಕೆ**

1. 'ಐಕ್ಯ-ವಿಶ್ವಾಸ-ಬಲಿದಾನ' ಧ್ಯೇಯ ಹೊಂದಿದ್ದ ಈ ಸೇನೆ ಸುಭಾಷ್ ಚಂದ್ರ ಬೋಸರನ್ನು ನೆನಪಿಗೆ ತರುತ್ತದೆ.
2. ಬೆಳೆದು ದಕ್ಷಿಣ ಭಾರತದಲ್ಲಿ ನಿಂತ 'ನರೇಂದ್ರ'
3. ಭಾವನೆಯಲ್ಲಿರುವ 'ಮಿನುಗು ತಾರೆ'ಯಾಗಿದ್ದ ಕಲಾವಿದೆ.
4. ಹಬ್ಬದಲ್ಲಿ ಮುತ್ತೈದೆಯರು 'ಬಾಗಿ' ತೆಗೆದುಕೊಳ್ಳುವ ಕಾಣಿಕೆ.
6. ಶಿವಜ್ಯೋತಿಯ ಹನ್ನೆರಡು ಪ್ರತೀಕಗಳಲ್ಲೊಂದು ಪಾಕ್ ಜಲಸಂಧಿಯಲ್ಲಿದೆ.
10. ಒಂದೇ ತನ, ಒಮ್ಮನಸ್ಸು, ಏಕರೂಪತೆಯ ಸ್ಥಿತಿ
11. ಕತ್ತಲೆಯನ್ನು ಹೊಡೆದೋಡಿಸುವ ಈ ತೇಜಸ್ಸು ಜೀವನಕ್ಕೆ ಅತ್ಯಗತ್ಯ.
12. 'ಗುರಿ'ಯಿದ್ದರೆ ಹಳೆ ಕಚರಾ ಸಾಮಾನು ಮಾರಾಟ ಸ್ಥಳಕ್ಕೆ ಹೋಗಬಹುದು.

*(ಸರಿಯುತ್ತರ ಫೆಬ್ರವರಿ ಸಂಚಿಕೆಯಲ್ಲಿ)*

*- ಜಿ. ಮಲ್ಲಿಕಾರ್ಜುನ 'ಘಂಟಾಚಾರ್ಯ'*

# ಡಿಸೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

ಮೂರು ಜೊತೆ ದಂಪತಿಗಳನ್ನು (ಕ, ಖ), (ಟ, ಠ), (ತ, ಥ) ಎಂದು ಕರೆಯೋಣ. ಇಲ್ಲಿ 'ಕ' ನ ಪತ್ನಿ 'ಖ' ಇತ್ಯಾದಿ. ಇವರನ್ನು ನದಿಯ ಎಡದಂಡೆಯಿಂದ ಬಲದಂಡೆಗೆ ದೋಣಿಯಲ್ಲಿ (ಅಂಬಿಗನಿಲ್ಲ) ಕೆಳಕಂಡ ನಿಯಮಾನುಸಾರ ಸಾಗಿಸಬೇಕಾಗಿದೆ.

(ಅ) ದೋಣಿಯಲ್ಲಿ ಒಮ್ಮೆಗೆ ಇಬ್ಬರಿಗಿಂತ ಹೆಚ್ಚು ಮಂದಿ ಕೂರುವಂತಿಲ್ಲ.

(ಆ) ಪತಿ ಇಲ್ಲದಿರುವಾಗ ಪರಪುರುಷರಿರುವ ಗುಂಪಿನಲ್ಲಿ ಆತನ ಪತ್ನಿ ಇರುವಂತಿಲ್ಲ. (ಒಂದು ದಂಡೆಯಲ್ಲಿ ದೋಣಿ ಇದ್ದಾಗ ದೋಣಿಯಲ್ಲಿರುವವರು ಮತ್ತು ಆ ದಂಡೆಯಲ್ಲಿರುವವರನ್ನು ಒಂದೇ ಗುಂಪೆಂದು ಪರಿಗಣಿಸಬೇಕು). ಆರು ಮಂದಿಗೂ ದೋಣಿ ನಡೆಸಲು ಬರುತ್ತದೆ.

ಒಂದು ವೇಳೆ (ಅ) ಮಾತ್ರ ಅನ್ವಯವಾದರೆ, ಎಷ್ಟೇ ಮಂದಿ ಇದ್ದರೂ ಒಂದು ದಂಡೆಯಿಂದ ಎದುರು ದಂಡೆಗೆ ಮಾಡಬೇಕಾದ ಒಟ್ಟು ಪ್ರಯಾಣಗಳ ಸಂಖ್ಯೆ ಒಂದು ವಿಷಮ ಸಂಖ್ಯೆ ಎಂಬುದು ಸ್ಪಷ್ಟ. ಆರು ಮಂದಿ ಇದ್ದಾಗ ಬೇಕಾಗುವ ಕನಿಷ್ಠ ಪ್ರಯಾಣಗಳ ಸಂಖ್ಯೆ ೯ ಎಂದು ಸುಲಭದಲ್ಲಿ ತಿಳಿಯಬಹುದು. ನಿಯಮ (ಆ)ನೂ ಜೊತೆಗೂಡಿದರೆ ೯ರ ಮುಂದಿನ ವಿಷಮ ಸಂಖ್ಯೆಯಾದ ೧೧ ಪ್ರಯಾಣಗಳು ಬೇಕಾಗುತ್ತವೆ.

ದಂಪತಿಗಳನ್ನು (ಅ) ಮತ್ತು (ಆ) ನಿಯಮಗಳಿಗನುಸಾರವಾಗಿ ಸಾಗಿಸುವ ಯೋಜನೆಯ ಪಟ್ಟಿಯನ್ನು ಮುಂದೆ ಕೊಟ್ಟಿದ್ದೇವೆ. ಈ ಪಟ್ಟಿಯಲ್ಲಿ ತೋರಿಸಿರುವ ಬಾಣದ ಗುರುತಿನ ದಿಶೆಯಲ್ಲಿ ಆಯಾ ದೋಣಿ ಪ್ರಯಾಣಗಳನ್ನು ಮಾಡಬೇಕು. ಅಲ್ಲಿ ತೋರಿಸಿರುವ ಹನ್ನೊಂದು ಪ್ರಯಾಣಗಳಲ್ಲಿ ಯಾವುದನ್ನೂ 'ವ್ಯರ್ಥ'ವಾಗಿ ಕೈಗೊಂಡಿಲ್ಲವಾಗಿ ೧೧ 'ಕನಿಷ್ಠ' ಸಂಖ್ಯೆ ಎನ್ನುವುದು ಸ್ಪಷ್ಟ.

| ಪ್ರ.ಕ್ರಮ. ಸಂಖ್ಯೆ | ಎಡದಂಡೆ | ದೋಣಿ | ಬಲದಂಡೆ |
|---|---|---|---|
| ೧ | (ಕ, ಖ), (ಟ,ಠ). | (ತ,ಥ) → | ಯಾರೂ ಇಲ್ಲ. |
| ೨ | (ಕ, ಖ), (ಟ,ಠ). | ← (ತ) | (ಥ). |
| ೩ | (ಕ), (ಟ), (ತ). | (ಖ,ಠ) → | (ಥ). |
| ೪ | (ಕ), (ಟ), (ತ). | ← (ಖ) | (ಠ), (ಥ) |
| [illegible] | (ಕ,ಖ). | (ಟ,ತ) → | (ಠ), (ಥ). |
| ೬ | (ಕ,ಖ). | ← (ಟ,ಠ) | (ತ,ಥ). |
| ೭ | (ಖ), (ಠ). | (ಕ,ಟ) → | (ತ,ಥ). |
| ೮ | (ಖ), (ಠ). | ← (ಥ) | (ಕ),(ಟ),(ತ). |
| ೯ | (ಥ). | (ಖ,ಠ) → | (ಕ),(ಟ),(ತ). |
| ೧೦ | (ಥ). | ← (ತ) | (ಕ,ಖ),(ಟ,ಠ). |
| ೧೧ | ಯಾರೂ ಇಲ್ಲ | (ತ,ಥ) → | (ಕ,ಖ),(ಟ,ಠ). |

**ಗಮನಿಸಿ:**

(ಇ) ನಾವು ಕೊಟ್ಟಿರುವ ಉತ್ತರಕ್ಕಿಂತ ತೋರಿಕೆಗೆ 'ಬೇರೆ' ಎನಿಸುವ ಆದರೆ ತಾರ್ಕಿಕವಾಗಿ 'ಒಂದೇ' ಆಗಿರುವ ಉತ್ತರಗಳನ್ನು ಕೊಡಬಹುದು. ಉದಾ: ಪ್ರ.ಸಂಖ್ಯೆ ೧ರಲ್ಲಿ (ತ,ಥ)ಗಳನ್ನು ದೋಣಿಯಲ್ಲಿ ಕೂರಿಸುವ ಬದಲು ಉಳಿದ ಜೋಡಿಗಳಲ್ಲೊಂದನ್ನು ಕೂರಿಸಿ ಅದಕ್ಕೆ ಅನುಗುಣವಾಗಿ ಮುಂದುವರಿಯಬಹುದು.

(ಈ) ದೋಣಿ ನಡೆಸಲು ಆರು ಮಂದಿಗೂ ತಿಳಿದಿರಬೇಕೆಂದೇನಿಲ್ಲ.

(ಉ) ಪಟ್ಟಿಯಲ್ಲಿರುವ '೬'ನೇ ಪ್ರಯಾಣವು ಒಂದು ಸಂಕ್ರಮಣ ಸ್ಥಾನದಲ್ಲಿದೆ. ಅಲ್ಲಿ: ಎಡದಂಡೆ, ಬಲದಂಡೆ ಮತ್ತು ದೋಣಿಯಲ್ಲಿ ತಲಾ ಒಂದು ಜೊತೆ ಇದ್ದು ಮೂರು ಸ್ಥಾನಗಳ ತುಲನೆಯಲ್ಲಿ ಒಂದು ಸಮಪಾರ್ಶ್ವತೆ ಮೂಡಿದೆ. ದೋಣಿಯಲ್ಲಿರುವ ದಂಪತಿಗಳು '೬'ರಲ್ಲಿ ತೋರಿಸಿರುವಂತೆ ಪಯಣವನ್ನು ಮುಗಿಸಿದಾಗ, ದೋಣಿ ಜೊತೆಗೆ ಎರಡು ಜೊತೆ ದಂಪತಿಗಳು ಎಡದಂಡೆಯಲ್ಲೂ ಉಳಿದ ಜೋಡಿ ಬಲದಂಡೆಯಲ್ಲೂ ಇದ್ದು ನಾವು ಹೇಳಿದ ಸಮಪಾರ್ಶ್ವತೆಗೆ 'ಭಂಗ' ಬರುತ್ತದೆ. ಈ ರೀತಿ 'ಭಂಗ' ಮಾಡಿದ ನಂತರ ನಮ್ಮ ಯೋಜನೆಯನ್ನು ಪಟ್ಟಿಯಲ್ಲಿ ತೋರಿಸಿರುವಂತೆ ಮುಂದುವರಿಸಿದಾಗ ಬಂದ ಒಟ್ಟು ಫಲವನ್ನು ಗಮನಿಸಿದರೆ ಅದನ್ನು ಕೆಳಕಂಡ ಸಮಸ್ಯೆಗೆ ಪರಿಹಾರ ಎಂದು ವ್ಯಾಖ್ಯಾನಿಸಬಹುದು:

'ಒಂದು ದಂಡೆಯಲ್ಲಿ ದೋಣಿ ಹಾಗೂ ಎರಡು ಜೊತೆ ದಂಪತಿಗಳಿದ್ದು ಅದರ ಎದುರು ದಂಡೆಯಲ್ಲಿ ಈಗಾಗಲೇ ಇರುವ ಇನ್ನೊಂದು ಜೋಡಿಯೊಡನೆ ಒಂದುಗೂಡಿಸುವುದು ಹೇಗೆ?'

ಆದರೆ ಈ ಸಮಸ್ಯೆಗೆ ಪಟ್ಟಿಯ ಮೊದಲಿನ ಐದು ಪ್ರಯಾಣಗಳ ಯೋಜನೆಯಿಂದಲೇ ಉತ್ತರವನ್ನು ಊಹಿಸಿ ಪಡೆಯಬಹುದು! ಅದು ಹೇಗೆಂದರೆ: ನಾವು ಮೇಲೆ ವಿವರಿಸಿದ ಸಮಪಾರ್ಶ್ವತೆಯ ಭಂಗವನ್ನು ಅದರ ವಿರುದ್ಧ ದಿಕ್ಕಿನಲ್ಲಿ ಕೈಗೊಳ್ಳಬಹುದು. ಅಂದರೆ '೬'ನೇ ಪ್ರಯಾಣವನ್ನು ಅಲ್ಲಿ ತೋರಿಸಿರುವ ವಿರುದ್ಧ ದಿಕ್ಕಿನಲ್ಲಿ ಮಾಡಿದಾಗ ಬಲದಂಡೆಯಲ್ಲಿ ದೋಣಿಯೊಡನೆ ಎರಡು ಜೊತೆ ದಂಪತಿಗಳೂ ಅದರ ಎದುರು ದಂಡೆಯಲ್ಲಿ ಒಂದು ಜೊತೆ ದಂಪತಿಗಳೂ ಉಳಿಯುತ್ತಾರೆ. ಇದಾದನಂತರ ಕ್ರಮವಾಗಿ ೫,೪,೩,೨,೧ನೇ ಪ್ರಯಾಣಗಳನ್ನು ಅಲ್ಲಿ ತೋರಿಸಿರುವ ದಿಕ್ಕಿಗೆ ವಿರುದ್ಧವಾಗಿ ನಡೆಸಿದರೆ ಒಂದು ದಂಡೆಯಲ್ಲಿದ್ದ ಎರಡು ಜೊತೆ ದಂಪತಿಗಳನ್ನು ಅದರ ಎದುರು ಈಗಾಗಲೇ ಇರುವ ಒಂದು ಜೋಡಿಯೊಡನೆ ಸೇರಿಸಿದಂತಾಗುತ್ತದೆ ! ಹೀಗಾಗಿ ೭,೮,೯,೧೦,೧೧ನೇ ಪ್ರಯಾಣಗಳ ರೂಪವನ್ನು ಕ್ರಮವಾಗಿ ೫,೪,೩,೨,೧ರಿಂದ ತಾರ್ಕಿಕವಾಗಿ ಮೊದಲೇ ಊಹಿಸಿ ಪಡೆಯಬಹುದು.

ಒಂದು ಸಮಸ್ಯೆಯಲ್ಲಿ ಅಡಗಿರುವ ಸಮಪಾರ್ಶ್ವತಾ ತತ್ವಗಳನ್ನು ಗುರುತಿಸಲು ಸಾಧ್ಯವಾದಾಗ ಆ ಸಮಸ್ಯೆಯ ಪರಿಹಾರಕ್ಕೆ ಒಂದು ಪ್ರಮುಖ ಹೆಜ್ಜೆಯನ್ನಿಟ್ಟಂತೆ ಎಂಬುದು ಭೌತವಿಜ್ಞಾನಿಗಳ ಮತ್ತು ಗಣಿತಶಾಸ್ತ್ರಜ್ಞರ ಅನುಭವವಾಗಿದೆ. ಸಮಸ್ಯೆಗೆ ಕೊಟ್ಟ ಉತ್ತರವೂ ಸಮಪಾರ್ಶ್ವತಾ ತತ್ವಗಳನ್ನು ಹೊರಸೂಸಿದಾಗ, ಅಂತಹ ಉತ್ತರಗಳನ್ನು ಹೆಚ್ಚು 'ಪ್ರೌಢ'ವಾದುವೆಂದು ಪರಿಗಣಿಸಲಾಗುವುದು.

(ಊ) ನಾಲ್ಕು ಜೊತೆ ದಂಪತಿಗಳಿದ್ದಾಗ ಪ್ರಶ್ನೆಗೆ ಉತ್ತರ: ಈ ಬಾರಿ (ಅ) ಮತ್ತು (ಆ) ನಿಯಮಗಳಿಗನುಸಾರವಾಗಿ ನದಿ ದಾಟಿಸಲು ಸಾಧ್ಯವಿಲ್ಲ ! ಇದನ್ನು ತಿಳಿಯಲು, ನಾಲ್ಕನೆಯ ದಂಪತಿಗಳನ್ನು (ಗ, ಘ) ಎಂದು ಕರೆಯೋಣ. ಹೊಸ ಸೇರ್ಪಡೆಯಿಂದ ನಮ್ಮ ಪಟ್ಟಿಯಲ್ಲಿರುವ ಮೊದಲಿನ ನಾಲ್ಕು ಪ್ರಯಾಣಗಳ ಯೋಜನೆಯಲ್ಲಿ ಏನೂ ಬದಲಾವಣೆಗಳ ಅವಶ್ಯಕತೆ ಇಲ್ಲ. ಪ್ರಯಾಣ ಸಂಖ್ಯೆ '೫'ರಲ್ಲಿ ದೋಣಿಯಲ್ಲಿ ಕೂರುವವರಲ್ಲಿ (ಟ,ತ) ಬದಲು ಇನ್ನೊಂದು ಸಾಧ್ಯತೆ ಎಂದರೆ (ಘ,ಖ), ಈ ಕೊನೆಯ ಪ್ರಯಾಣ ಮುಗಿದ ಮೇಲೆ ಮುಂದಿನ ಹೆಜ್ಜೆಯೇನು? ಹಿಂದಿರುಗುವಾಗ ಇಬ್ಬರು ಪತ್ನಿಯರನ್ನು ಕರೆತರಬೇಕಾಗುತ್ತದೆ. ಆದರೆ ಎಡದಿಂದ ಬಲಕ್ಕೆ (ಘ,ಖ) ಕೊಂಡುಹೋದ ಮೇಲೆ ಮತ್ತೆ ಅದೇ ರೂಪದ ಪ್ರಯಾಣವನ್ನು ಹಿಂದಕ್ಕೆ ಮಾಡುವುದರಿಂದ ಯಾವುದೇ ಲಾಭವಿಲ್ಲದೆ ಸಮಸ್ಯೆಯ ಪರಿಹಾರವಿರುವುದಿಲ್ಲ. ಅದಿಲ್ಲದೆ ಎಂದಿನಂತೆ '೫'ರಲ್ಲಿ ಹೇಳಿರುವಂತೆ ಮುಂದುವರಿದಾಗ ಮುಂದಿನ ಹೆಜ್ಜೆಯಲ್ಲಿ ಎಡದಂಡೆಯಲ್ಲಿ ಮೂರು ಜೊತೆ ದಂಪತಿಗಳೂ (ದೋಣಿಯೊಡನೆ) ಬಲದಂಡೆಯಲ್ಲಿ ಒಂದು ಜೊತೆಯೂ ಇರುವ



# ಯಕ್ಷಗಾನ ಕವಿಗಳು ಕಂಡ ಹೆಣ್ಣು

ಊಳಿಗಮಾನ್ಯ ಪದ್ಧತಿಯ ಪರಿಸರದಲ್ಲಿ ಯಕ್ಷಗಾನ ಬೆಳೆದುಬಂದಿತು. ಶ್ರೇಣೀಕೃತವಾದ ಊಳಿಗಮಾನ್ಯ ವ್ಯವಸ್ಥೆಗೆ ಪುರಾಣದ ಮೌಲ್ಯಗಳು ಭದ್ರವಾದ ನೆಲೆಗಟ್ಟನ್ನು ಒದಗಿಸಿದ್ದುವು.

ಸಾಹಿತ್ಯ, ಕಲೆ, ಧರ್ಮ-ಎಲ್ಲವೂ ಈ ವ್ಯವಸ್ಥೆಯನ್ನು ಬಲಪಡಿಸುವ ಸಾಧನಗಳಾಗಿ ಬಳಸಲ್ಪಟ್ಟದ್ದು ಸಹಜವೇ ಆಗಿತ್ತು. ಸಮಾಜವನ್ನು ವಿವಿಧ ಶ್ರೇಣಿಗಳಲ್ಲಿ ಒಡೆದು, ಈ ಏಣಿಯ ತುದಿ ಮೆಟ್ಟಲುಗಳಲ್ಲಿದ್ದವರು ತಮಗಿಂತ ಕೆಳಗೆ ಉಳಿದ ವರ್ಗಗಳನ್ನು ತುಳಿದದ್ದಷ್ಟೇ ಅಲ್ಲದೆ ಜನಾಂಗದ ಒಂದರ್ಧವಾದ ಹೆಣ್ಣನ್ನೂ ಒಂದೆಡೆಯಿಂದ ಎಲ್ಲ ಹಕ್ಕುಗಳಿಂದ ವಂಚಿಸಿ ಕೇವಲ ಭೋಗದ ಸಾಧನವಾಗಿ ಮಾಡಿದ್ದು ಈ ವ್ಯವಸ್ಥೆಯ ವಿಪರ್ಯಾಸಗಳಲ್ಲಿ ಮುಖ್ಯವಾದ ಅಂಶವಾಗಿದೆ. ಇಂಥಹ ಒಂದು ವ್ಯವಸ್ಥೆಯ ಉಪಸೃಷ್ಟಿಯಾಗಿ ಬೆಳೆದ ಯಕ್ಷಗಾನ ಸಾಹಿತ್ಯ ಹೆಣ್ಣನ್ನು ಯಾವ ದೃಷ್ಟಿಯಿಂದ ನೋಡಿತು ಎಂಬುದು ತೀರ ಕುತೂಹಲವನ್ನು ಕೆರಳಿಸುವ ಅಧ್ಯಯನ ವಸ್ತುವಾಗಬಹುದು.



ಯಕ್ಷಗಾನ ಪ್ರೇರಕವಾಗಿದ್ದ ಮಧ್ಯಯುಗದ ಪ್ರೌಢ ಸಾಹಿತ್ಯ ಹೆಣ್ಣನ್ನು ನೋಡಿದುದು ಬಹುಮಟ್ಟಿಗೆ ಒಂದು ಭೋಗದ ವಸ್ತುವಾಗಿಯೇ. ಆದರ್ಶಸತೀತ್ವ, ಪಾತೀವ್ರತ್ಯ ಮುಂತಾದುವುಗಳ ವೈಭವೀಕರಣದ ಮರೆಯಲ್ಲಿ ಮುಖ್ಯವಾಗಿ ಹೆಣ್ಣು ಶೋಷಣೆಯ ಸಾಧನವಾಗಿಯೇ ಚಿತ್ರಿತಳಾದಳು. ಅವಳ ಅಂಗಾಂಗಳ ವರ್ಣನೆಯೇ ಕವಿಯ ಸೌಂದರ್ಯ ಪ್ರಜ್ಞೆಯ ಹೆಗ್ಗುರುತು ಎಂದು ಎಣಿಸಲ್ಪಟ್ಟಿತು. ಯಕ್ಷಗಾನ ಸಾಹಿತ್ಯವೂ ಈ ದೌರ್ಬಲ್ಯದಿಂದ ಪಾರಾಗಲಿಲ್ಲ. ರಾತ್ರಿಯಿಂದ ಬೆಳಗಾಗುವವರೆಗಿನ ದೀರ್ಘಾವಧಿಯಲ್ಲಿ ಹಳ್ಳಿಯ ಪ್ರೇಕ್ಷಕನಿಗೆ ರಂಜನೀಯವಾಗಬೇಕೆನ್ನುವ ಉದ್ದೇಶದಿಂದಲೋ ಏನೋ, ಯಕ್ಷಗಾನದಲ್ಲಿ ಹೆಣ್ಣಿನ ವರ್ಣನೆ ತುಸು ಹೆಚ್ಚಾಗಿಯೇ ಕಂಡುಬರುತ್ತಿದೆ. ಈಗ ಅದು ಪಟ್ಟಣವಾಸಿಗೂ ಲಭ್ಯವಿದೆ. ಹೆಣ್ಣನ್ನು ಕುರಿತು ಸಂಬೋಧಿಸುವಾಗಲೆಲ್ಲಾ ಆಕೆಯ ಅಂಗಾಂಗಳ ವರ್ಣನೆ ಅನಿವಾರ್ಯವೇನೋ ಎಂಬಂತೆ ಯಕ್ಷಗಾನ ಕವಿಗಳು ವರ್ಣಿಸುತ್ತಾರೆ. ಈ ಅಂಗಾಂಗಳ ವಿಶ್ಲೇಷಣೆ ಯಕ್ಷಗಾನ ಕವಿಗಳಿಗೆ ಎಷ್ಟೊಂದು ಚಟ ಆಗಿದೆ ಎಂದರೆ ಪೂಜ್ಯೆಯರಾದ ದೇವ-ದೇವತೆಯರನ್ನು ವರ್ಣಿಸುವಾಗಲೂ ಈ ಚಟವನ್ನು, ಚಾಪಲ್ಯವನ್ನು, ಅನೇಕ ವೇಳೆ ಅವರಿಗೆ ತಡೆಯಲಾಗುವುದಿಲ್ಲ.

''ಪಂಚವಟಿ''ಯಲ್ಲಿ ಕುತೂಹಲವಶನಾಗಿ ರಾವಣನು ಸೀತೆಯ ಕುರಿತು ಕೇಳುವ ''ಕಣ್ಣು''ಗಳೆಂತಿಹವು ಅವಳಮೈಯ ಬಣ್ಣವೆಂತಿಹುದು ರನ್ನ ಕೆತ್ತಿದ ನಡು ಸಣ್ಣವಾಗಿಹುದೇನೆ ''ಮನ್ಮಥನರಗಿಣಿಯಂತೆ ತೋರುವಳೇನೆ'' ಎನ್ನುವ ಮಾತುಗಳು ಸಪ್ಪೆಯಾಗಿ ಕಂಡುಬರುತ್ತವೆ.

ಸ್ತ್ರೀಯರ ಚಾರಿತ್ರ್ಯ ನಿರ್ಮಾಣದಲ್ಲಿಯೂ ಯಕ್ಷಗಾನ ಕವಿಗಳು ಅನುಸರಿಸಿದುದು ಗತಾನುಗತಿಕವಾದ ಸಂಪ್ರದಾಯದ ಜಾಡನ್ನೇ, ಪತಿ ನಡೆದ ಹಾದಿಯಲ್ಲಿ ವಸ್ತ್ರಾಪಹರಣ ಅವಮಾನ ವನವಾಸ-ಉಪವಾಸಗಳನ್ನು ಅಪ್ಪಿಕೊಂಡ ದ್ರೌಪದಿ, ಸೀತಾ, ಸಾವಿತ್ರಿ ದಮಯಂತಿಯರಂತಹ ಸಹಧರ್ಮಿಣಿ, ಸತಿಶಿರೋಮಣಿಗಳು ಹೆಪ್ಪುಗಟ್ಟಿದ ಹೃದಯ, ಮಂಜುಮುಸುಕಿದ ಕಣ್ಣುಗಳಿಂದ ಕರುಳಿನ ಕುಡಿಗಳನ್ನು ಸಾವಿನ ಕಣಕ್ಕೆ-ಯುದ್ಧರಂಗಕ್ಕೆ -ಬೀಳ್ಕೊಡುವ ಸುಭದ್ರೆ, ಸುಗರ್ಭೆಯರಂತಹ ವೀರಮಾತೆಯರು-ಇವರೇ ಯಕ್ಷಗಾನ ಕವಿಗಳ ಆದರ್ಶ ಸ್ತ್ರೀಪಾತ್ರಗಳು.

ಸಂಪ್ರದಾಯದ ಕಟ್ಟುಕಟ್ಟಳೆಗಳನ್ನು ಮೀರುವ ಅಂಬೆ- ಶೂರ್ಪನಖಿ ಯಂಥವರು ತಾವು ಹಾಳಾಗುವುದಲ್ಲದೆ, ಇಡಿಯ ಸಮುದಾಯವನ್ನೇ ದುರಂತದೆಡೆಗೆ ನೂಕುತ್ತಾರೆ. ಒಟ್ಟಿನಲ್ಲಿ ಯಕ್ಷಗಾನದ ಕವಿಗಳು ಸಂಪ್ರದಾಯಶೀಲತೆಯ ಶ್ಲಾಘನೆ ಮಾಡುತ್ತಾ ಅನೇಕ ವೇಳೆ ಹೆಣ್ಣಿನ ವ್ಯಕ್ತಿತ್ವವನ್ನು ಶೋಷಣೆಯ, ಭೋಗದ ಸಾಧನೆಗೊಳಪಡಿಸಿ ''ನಸ್ತ್ರೀ ಸ್ವಾತಂತ್ರ್ಯಮರ್ಹತಿ'' ಎಂದಿದ್ದಾರೆ.

ಟಿ. ಕೆ. ಗೋವಿಂದರಾಜು
ಲೇಖಕರು, ಊರುಕೆರೆ, ತುಮಕೂರು ಕಸಬ

---

*(ಹಿಂದಿನ ಪುಟದಿಂದ)*

ಘಟ್ಟವನ್ನು ತಲುಪುತ್ತೇವೆ. ಈ ಘಟ್ಟದಲ್ಲಿ ಉಪಯುಕ್ತವಾದ ಯಾವುದೇ ಹೆಜ್ಜೆಯನ್ನಿಡಲಾಗುವುದಿಲ್ಲ. (ಇದೇಕೆಂದು ಸುಲಭದಲ್ಲಿ ತಿಳಿಯಬಹುದು).

### ಇನ್ನು ಈ ತಿಂಗಳ ಹೊಸ ಪ್ರಶ್ನೆ

### ಪ್ರಶ್ನೆ : ೪

ವಾಚಸ್ಪತಿ ಮಿಶ್ರ ಮತ್ತು ಶಂಕರ ಮಿಶ್ರರು ಒಮ್ಮೆ ಅವರ ಗುರುಗಳೂ ತರ್ಕಶಾಸ್ತ್ರ ಪಂಡಿತರೂ ಆದ ಗಂಗೇಶರ ಆಶ್ರಮದಲ್ಲಿ ಸಂಧಿಸಿದರು. ಗಂಗೇಶರ ಶಿಷ್ಯರಿಬ್ಬರೂ ತರ್ಕಶಾಸ್ತ್ರ ಪಂಡಿತರಾಗಿದ್ದು ಆ ಶಾಸ್ತ್ರದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದರು. ಶಿಷ್ಯರಿಬ್ಬರಿಗೂ ಇನ್ನೊಬ್ಬರು ಎಷ್ಟು ಕೃತಿಗಳನ್ನು ರಚಿಸಿರಬಹುದು ಎಂಬ ಕುತೂಹಲ. ಇಬ್ಬರೂ ಬೇರೆಬೇರೆಯಾಗಿ ಗುರುಗಳನ್ನು ಸಂಧಿಸಿ ಈ ವಿಷಯ ಪ್ರಸ್ತಾಪಿಸಿದರು. ಗುರುಗಳಾದರೋ, ಶಿಷ್ಯರಿಬ್ಬರೂ ಈಗಾಗಲೇ ಉದ್ದಾಮ ಪಂಡಿತರೆನಿಸಿ ಕೊಂಡಿದ್ದರೂ ಅವರುಗಳನ್ನು ಪರೀಕ್ಷಿಸುವ ಹಳೆಯ ಅಭ್ಯಾಸಬಲ ಮತ್ತೊಮ್ಮೆ [illegible]ದರು! ಅಷ್ಟಕ್ಕೂ ಶಿಷ್ಯ[illegible] ಈ [illegible]ವನ್ನು ತಮ್ಮಲ್ಲೇ ಪರಿಹರಿಸಿಕೊಳ್ಳಬಹುದಾಗಿತ್ತಲ್ಲ? ಶಿಷ್ಯರಿಬ್ಬರನ್ನೂ ಒಂದುಗೂಡಿಸುವ ಉದ್ದೇಶ ಹೊಂದಿದ್ದ ಗುರುಗಳು ಇಬ್ಬರನ್ನೂ ಒಟ್ಟಿಗೆ ಕರೆದು ಹೇಳಿದರು :

''ನಿಮ್ಮಿಬ್ಬರ ಒಟ್ಟು ಕೃತಿಗಳ ಸಂಖ್ಯೆ ೯ ಅಥವಾ ೧೧ರಲ್ಲೊಂದು. ನೀವು ಒಬ್ಬರನ್ನೊಬ್ಬರು ಸಂಬೋಧಿಸಿ 'ಪಂಡಿತರೇ, ನೀವೆಷ್ಟು ಕೃತಿಗಳನ್ನು ರಚಿಸಿದ್ದೀರಿ?' ಎಂದು ಪ್ರಶ್ನಿಸಬಹುದು. ಆದರೆ ಯಾರೊಬ್ಬರೂ ಪ್ರಶ್ನೆಗೆ ಉತ್ತರ ಕೊಡುವಂತಿರಲಿಲ್ಲ. ನಾನು ಹೇಳಿದಂತೆ ಪ್ರಶ್ನಿಸುವುದು ಅಥವಾ ಮೌನವಾಗಿರುವುದಷ್ಟು ಸಧ್ಯಕ್ಕೆ ನಿಮಗೆ ನಾನು ಕೊಟ್ಟಿರುವ ಸ್ವಾತಂತ್ರ್ಯ.'' ಅಷ್ಟು ಹೇಳಿ ಅವರು ಅಲ್ಲಿಂದ ನಿರ್ಗಮಿಸಿದರು.

ಶಿಷ್ಯರಿಬ್ಬರೂ ಸ್ವಲ್ಪ ಹೊತ್ತು ಮೌನವಾಗಿ ಚಿಂತಿಸಿದರು. ನಂತರ ಮೊದಲು ವಾಚಸ್ಪತಿ ಮಿಶ್ರರು ಆರಂಭಿಸಿ ಗುರುಗಳು ಅಪ್ಪಣೆ ಕೊಡಿಸಿದ ವಾಕ್ಯಗಳಲ್ಲಿ ಶಂಕರ ಮಿಶ್ರರನ್ನು ಪ್ರಶ್ನಿಸಿದರು. ಶಂಕರ ಮಿಶ್ರರಾದರೋ, ಅವೇ ವಾಕ್ಯಗಳಲ್ಲಿ ಮರು ಪ್ರಶ್ನೆ ಹಾಕಿದರು !

ಶಿಷ್ಯರಿಬ್ಬರ ನಡುವಣ ಮೇಲಿನ ಸಂಭಾಷಣೆ (!)ಯು ಮುಂದುವರಿದು ಎರಡು, ಮೂರು ಮತ್ತು ನಾಲ್ಕನೆಯ ಬಾರಿ ಪುನರಾವರ್ತಿತವಾಯಿತು. ನಂತರ ಇಬ್ಬರೂ ಮೌನವಹಿಸಿದರು.

ತರ್ಕಪಂಡಿತರಿಗೆ ಪ್ರಶ್ನೆಗಳೇ ಉತ್ತರವಾಗಬಹುದು! ಅಲ್ಲದೆ ಉಪಯುಕ್ತವಲ್ಲದಿರುವಾಗ ಪ್ರಶ್ನೆಯನ್ನು ಮತ್ತೆ ಮತ್ತೆ ಕೇಳುವುದರಲ್ಲಿ ಏನರ್ಥ?

ಮೇಲೆ ವಾಚಸ್ಪತಿ ಮಿಶ್ರರು ಮೌನ ವಹಿಸಿದ್ದಕ್ಕೆ ಕಾರಣ ಅವರಿಗಾಗಲೇ ತಮ್ಮ ಪ್ರಶ್ನೆಗೆ ಉತ್ತರ ದೊರಕಿಯಾಗಿತ್ತು! ಶಂಕರ ಮಿಶ್ರರು ಮೌನವಹಿಸಿದ್ದಕ್ಕೆ ಕಾರಣ ಪ್ರಶ್ನೆ ಮುಂದುವರಿಸುವುದರಿಂದ ಹೊಸ ಲಾಭವೇನೂ ಇಲ್ಲವೆಂಬ ಕಾರಣದಿಂದ! ವಾಚಸ್ಪತಿ ಮಿಶ್ರರಿಗೆ ಪೂರ್ಣವಾದ ಉತ್ತರ ದೊರಕಿತು. ಆದರೆ ಶಂಕರ ಮಿಶ್ರರಿಗೆ ಭಾಗಶಃ ಉತ್ತರ ದೊರಕಿತು. ಅವರುಗಳಿಗೆ ದೊರಕಿದ ಉತ್ತರಗಳೇನು? ಸ್ವಲ್ಪ ಸಮಯದನಂತರ ಗುರುಗಳು ಶಂಕರ ಮಿಶ್ರರನ್ನು ಪ್ರತ್ಯೇಕವಾಗಿ ಕರೆದು 'ನಿಮ್ಮಿಬ್ಬರ ಕೃತಿಗಳಲ್ಲಿ ಒಬ್ಬರ ಕೃತಿಗಳ ಸಂಖ್ಯೆ ಒಂದು ಸಮ ಸಂಖ್ಯೆ' ಎಂದು ತಿಳಿಸಿದಾಗ ವಾಚಸ್ಪತಿ ಮಿಶ್ರರ ಕೃತಿಗಳೆಷ್ಟು ಎಂದು ಶಂಕರ ಮಿಶ್ರರಿಗೂ ಸ್ಪಷ್ಟವಾಯಿತು. ಓದುಗರಿಗೂ ಸ್ಪಷ್ಟವಾಗಲೇಬೇಕು.

ಕರ್ನಾಟಕದಲ್ಲಿ ವ್ಯಾಪಕವಾಗಿ ಪ್ರದರ್ಶಿತವಾದ

# ಏರುದನಿಯ ಸ್ವಗತ - ನಾನು

ಡಾ|| ಜೆ. ಶ್ರೀನಿವಾಸಮೂರ್ತಿ

**ಗೋಪಾಲಕೃಷ್ಣ** ಅಡಿಗರ ಕವನಗಳನ್ನು ಆಯ್ದು ಶ್ರೀ ಅಕ್ಷರ ಅವರ ಪರಿಕಲ್ಪನೆಯಲ್ಲಿ ಶ್ರೀ ಚೆನ್ನಕೇಶವ ಅವರು ಪ್ರಸ್ತುತಿಪಡಿಸಿದ 'ಏಕವ್ಯಕ್ತಿ ರಂಗಪ್ರಸ್ತುತಿ' - 'ನಾನು'. ಈ ಏಕವ್ಯಕ್ತಿ ಪ್ರಸ್ತುತಿಗಳಿಗೂ, ಕಾವ್ಯದ ರಂಗ ಪ್ರಸ್ತುತಿಗಳಿಗೂ ಕಳೆದ ಹಲವು ವರ್ಷಗಳಲ್ಲಿ ಒಂದು ಇತಿಹಾಸವೇ ಏರ್ಪಡುತ್ತಿದೆ. ಸಿಂಹರವರ 'ಟಿಪಿಕಲ್ ಟಿ. ಪಿ.', 'ರಸ ಋಷಿ' ಯಿಂದ ಹಿಡಿದು ಈಚೆಗಿನ ಹಲವಾರು ಏಕವ್ಯಕ್ತಿ ರಂಗ ಪ್ರಯೋಗ 'ಏಕಪಾತ್ರಾಭಿನಯ' ಎಂಬ ಸಂಪ್ರದಾಯಕ್ಕಿಂತ ಭಿನ್ನ. ಇಲ್ಲೆಲ್ಲ ಒಬ್ಬ ನಾಟಕಕಾರ, ಕವಿ ಅಥವಾ ಪಾತ್ರದ ಒಳತೋಟಿಯನ್ನು ಚಿತ್ರಿಸುವುದೇ ಮುಖ್ಯ. (ಒಂದೇ ಪಾತ್ರ-ಒಬ್ಬ ವಿಟ, ಆಕಾಶ ಭಾಷಿತದಂತಹ ನಾಟ್ಯಧರ್ಮಿಗಳನ್ನನುಸರಿಸಿ ನಾಟಕ ಕಟ್ಟುವ 'ಭಾಣ' ಎಂಬ ವಿಶೇಷ ಪ್ರಕಾರವೇ ಪ್ರಾಚೀನ ಭಾರತೀಯ ರಂಗಭೂಮಿಯಲ್ಲಿ ಇತ್ತು. ಇದು ಬೇರೆ ಮಾತು.) ಇಲ್ಲೆಲ್ಲ ಪಾತ್ರದ ಸ್ವಗತ, ಆಗಾಗ ಅನ್ಯಪಾತ್ರಗಳನ್ನು ಕಲ್ಪಿಸಿಕೊಂಡು ಆಡುವ ಆಕಾಶ ಭಾಷಿತಗಳು ಇರುತ್ತವೆ.

ಗೇಯ ನಾಟಕಗಳಂತೆ, ಕಥನ ಕವನಗಳನ್ನು ರೋಚಕವಾಗಿ ರಂಗಕ್ಕೆ ತಂದದ್ದಿದೆ. ಬಿ.ವಿ.ಕಾರಂತರು ರಂಗಾಯಣಕ್ಕೆ 'ಕಿಂದರಜೋಗಿ' ಆಡಿಸಿದ್ದು ಒಂದು ಉತ್ತಮ ಉದಾಹರಣೆ. 80ರ ದಶಕದ ಮೊದಲಲ್ಲೆ 'ಕಾವ್ಯ ಮಂಡಲ'ದ ಮೂಲಕ ಕೀ.ರಂ.ನಾಗರಾಜರು ಶಿವ ಪ್ರಕಾಶರ ಕಾವ್ಯಗಳನ್ನು ರಂಗಕ್ಕೆ ತರುವ ಪ್ರಯತ್ನ ಮಾಡಿದ್ದರು. ಹಲವು ವರ್ಷಗಳ ಹಿಂದೆ ಅಡಿಗರ ಭೂಮಿಗೀತೆಯನ್ನು ರಂಗಾಯಣದವರು ದೊಡ್ಡದಾಗಿ ಅವತರಿಸಿದ್ದರು. ನವೋದಯ ಕಾಲಕ್ಕೆ ಸಂಗೀತ ಅಥವಾ ಅದಕ್ಕಾಗಿಯೇ ಬಂದ ಸುಗಮ ಸಂಗೀತದ ನೆರವಿನಿಂದ ಕಾವ್ಯ ಶ್ರೋತೃಗಮ್ಯವಾಗಿತ್ತು. ಹಾಡು ಛಂದಸ್ಸುಗಳನ್ನು ಬಿಟ್ಟುಕೊಟ್ಟ, ಬಿಗಿ ಬಂಧಕ್ಕೆ ಒಲಿದ ನವ್ಯ ಕಾವ್ಯ, ಅಕ್ಷರಸ್ಥವಾಗಿಯೇ - ಓದುಗನನ್ನೇ ತಲುಪಬೇಕಾದ - ಅದರಿಂದಲೇ ಕಾವ್ಯದ ಅನನ್ಯತೆಯನ್ನು ಎತ್ತಿ ಹಿಡಿಯುವ ಅನಿವಾರ್ಯತೆಯನ್ನು ಸೃಷ್ಟಿಸಿಕೊಂಡಿತ್ತು. ಇದರಿಂದಾಗಿಯೇ ನವ್ಯಕಾವ್ಯವನ್ನು, ಅದರಲ್ಲೂ ಅದರ ನಾಯಕ ಕವಿಯಾಗಿ ಹೆಸರು ಮಾಡಿದ ಅಡಿಗರ ಕಾವ್ಯವನ್ನು, ರಂಗ ಮಾಧ್ಯಮದಲ್ಲಿ ಪ್ರಸ್ತುತಪಡಿಸುವುದು ಸಾಧ್ಯವೆ ? ಎಂಬ ಪ್ರಶ್ನೆ ಇದೆ. ಕಾವ್ಯದ ಓದಿಗೆ ಇರುವ ಸಂಕೀರ್ಣಾರ್ಥವನ್ನು ರಂಗಮಾಧ್ಯಮ ಸಪಾಟು ಗೊಳಿಸಿಬಿಡಬಹುದಲ್ಲವೆ? ಎಂಬ ಆತಂಕವೂ ಇದೆ. ಕಾವ್ಯವನ್ನು ಕೇವಲ 'ವಿಶದಗೊಳಿಸುವ' ಅಥವಾ 'ಚಿತ್ರೀಕರಿಸುವ' ಪ್ರಯೋಗ ಅಂತಹ ಆತಂಕಕ್ಕೆ ಕಾರಣವೂ ಆಗಿದೆ. ಆದರೆ ಕಾವ್ಯದ ಓದು ಒಂದೇ ಬಾರಿಗೆ ಎಲ್ಲ ಸಂಕೀರ್ಣತೆಯನ್ನು ದಕ್ಕಿಸಿಕೊಳ್ಳಲಾರದಂತೆ ರಂಗಪ್ರಯೋಗವೂ ಕೂಡ. ಆದ್ದರಿಂದ ರಂಗಪ್ರಯೋಗವನ್ನು ಕಾವ್ಯದ ಮೊದಲಹಂತದ ಆದರೆ ಸೂಕ್ಷ್ಮ ಅಭಿಜ್ಞತೆಯ ಓದಾಗಿ ಕೂಡ ನೋಡಬಹುದು.



ವಸ್ತು ಪಾತ್ರ ರಸಗಳ ಗೋಜಿಲ್ಲದೆ, ಅಡಿಗರ ಯಾವುದೂ ಒಂದು ಕಾವ್ಯವನ್ನು ರಂಗಕ್ಕೆ ತರುವಂತಹ ಪ್ರಯತ್ನ ಮಾಡದೆ ಹೊಸ ರೀತಿಯ ಗ್ರಹಿಕೆ, ಅಭಿವ್ಯಕ್ತಿಗಳ ಕಡೆ ಪ್ರಯತ್ನಿಸಿರುವುದು, 'ನಾನು' ಎಂಬ ವಿಷಯ ಅವಲಂಬಿಸಿ ಬೇರೆ ಬೇರೆ ಕವನಗಳ ಭಾಗಗಳ ಒಂದು ಕಲಾಚಿತ್ರ ಮೂಡಿರುವುದು ಕಾವ್ಯ ಅನುಸಂಧಾನದ ಹೊಸ ಸೃಜನಶೀಲ ಮಾದರಿಯಂತೆ ಇದೆ. ಅಕ್ಷರ ಅವರು ಕೆಲವು ವರ್ಷಗಳ ಹಿಂದೆ ರಂಗ ಶಿಕ್ಷಣದ ಭಾಗವಾಗಿ ಮಾಡಿದ ಪ್ರಯೋಗ ಹೀಗೆ ಅಡಿಗರ ಕಾವ್ಯವನ್ನು ಸಂಪಾದಿಸಿಕೊಂಡ ರಂಗರೂಪ. ಆಗ ವಿದ್ಯಾರ್ಥಿ ಆಗಿದ್ದ ಚೆನ್ನಕೇಶವ ಈಗ ಅದನ್ನು ಏಕವ್ಯಕ್ತಿ ಪ್ರಸ್ತುತಿಯಾಗಿ ಮುಂದಿಟ್ಟಿದ್ದಾರೆ. ನೀನಾಸಂನಲ್ಲೆ ಸಿದ್ಧವಾಗಿ ತಿರುಗಾಟದ ಪರಿಶಿಷ್ಟದಂತೆ ಪ್ರದರ್ಶನಕ್ಕೆ ಹೊರಟಿದ್ದಾರೆ.

ಅಡಿಗರ ಭೂಮಿಗೀತೆಯ ಮೊದಲ 'ಹುಟ್ಟು' ಭಾಗದಿಂದ ಆರಂಭವಾಗಿ ವರ್ಧಮಾನ, ಮೋಹನ ಮುರಲಿ, ಪ್ರಾರ್ಥನೆ, ರಾಮನವಮಿಯ ದಿನ, ಕಟ್ಟುವೆವು ನಾವು, ಹಿಮಗಿರಿಯ ಕಂದರ ಮುಂತಾದ ಹತ್ತಾರು ಪ್ರಮುಖ ಕವನಗಳಲ್ಲಿ ಹಾದು ಚಿಂತಾಮಣಿಯಲ್ಲಿ ಕಂಡ ಮುಖದಿಂದ ಮುಗಿಯುತ್ತದೆ. ಕವನದಿಂದ ಕವನಕ್ಕೆ ಜಿಗಿಯುವಲ್ಲಿ ಒಂದು ಆನುಪೂರ್ವಿಯಾಗಲಿ ಆಯಾ ಕವನದ 'ಸ್ವಯಂ' ವಿಷಯವಾಗಲಿ ಅನುಸರಿಸಬೇಕಾದ ಅಂಶವಲ್ಲವೆಂದು ಬಿಟ್ಟುಕೊಟ್ಟು ಮನುಷ್ಯನ ಹುಟ್ಟಿನೊಂದಿಗೆ ಬಂದ 'ನಾನು' ಎನ್ನುವುದು ಪ್ರಕೃತಿ ಮತ್ತು ಸಮಾಜದಿಂದ ಬೆಳೆಯುತ್ತಲೆ ಅದರಿಂದ ಭಿನ್ನವಾಗುತ್ತಾ ಸ್ವಂತಿಕೆಗೆ ಹಾತೊರೆಯುವ, ಸೆಣಸಾಟಕ್ಕೆ ಇಳಿವ, ಸೋತ, ರೊಚ್ಚಿಗೆದ್ದ, ಹತಾಶೆಯ, ಆಸೆಯ, ಆದರ್ಶದ



ಜಂಜಾಟಗಳಲ್ಲಿ ನುಗ್ಗಾಗುತ್ತಲೆ ಹೊಸ ದಿಗಂತಗಳಿಗೆ ವಿಸ್ತರಿಸಿಕೊಳ್ಳುತ್ತಾ ಮುಗ್ಧತೆಯಿಂದ ಹೊರಟದ್ದು ಚೀರಾಟಕ್ಕೆ ನಿಲ್ಲದೆ, ಹತ್ತು ಮಂದಿಯ ಮಧ್ಯೆ ಆತ್ಮೀಯ ಆಗಂತುಕನನ್ನು ಗುರುತಿಸುತ್ತ ಹಿಂದೆ ಹಲುಬುತ್ತಿದ್ದ ಮನ ಕೊನೆಗೆ 'ಮತ್ತೆಂದಿಗೆ ಭೇಟಿ ?' ಎಂದು ಮಾಗಿ ಕೇಳುವಾಗ ನಾನು - ನಾವುಗಳ ಮಧ್ಯೆಯೇ ಗುರುತಿಸಿಕೊಳ್ಳಬೇಕಾದ, ಬೇರೆಯಾದರೂ ಬೆರೆಯಲೇಬೇಕಾದ ಆತ್ಮೀಯತೆಯಲ್ಲೇ - ಆತ್ಮದರ್ಶನವಾಗಬೇಕಾದ ಅನಿವಾರ್ಯವನ್ನು ಮನಗಾಣಿಸುತ್ತದೆ.

'ಕಟ್ಟುವೆವು ನಾವು ಹೊಸ ನಾಡೊಂದನು' ಎನ್ನುತ್ತಾ ಸಮೂಹಸನ್ನಿಗೆ ಈಡಾಗಿ ವ್ಯಕ್ತಿತ್ವವನ್ನೇ ಕಳೆದುಕೊಂಡು ಹಿಂಸೆಯಲ್ಲಿ ತೊಡಗುವವನು ನನ್ನ ಮನವ 'ನನಗೆ ಕೊಡು ಓ ಸಮಾಜ ಭೈರವ' ಎಂದು ಮೊರೆಯಿಟ್ಟು, ಬೊಗಳು ಸನ್ನಿಯ ನಾಯಿ ನಾನಲ್ಲವೆಂದು ಪ್ರಾರ್ಥಿಸುವ, ಬಾಗುವುದನ್ನು, ಬಾಗದಿರುವುದನ್ನು ಒಟ್ಟಿಗೆ ಪ್ರಾರ್ಥಿಸುವ ಅಡಿಗರ ಪದ್ಯಗಳನ್ನು ಹೀಗೆ ಒಟ್ಟೊಟ್ಟಿಗೆ ಇಟ್ಟಾಗ ಒಂದು ಇನ್ನೊಂದಕ್ಕೆ ಪೂರಕವೂ ಆಗಿ ಇನ್ನೊಂದು ಮಗ್ಗುಲನ್ನೇ ತೋರಿಸುತ್ತ ವಿರೋಧಗಳಿಗೆ ವಿಸ್ಮಯಪಡುವಂತೆ ಇದೆ ಎಂಬುದನ್ನು ಗ್ರಹಿಸಿರುವುದು ಚೆನ್ನಾಗಿಯೇ ಇದೆ. ಆದರೆ ಅಮೂರ್ತವೂ ಬುದ್ಧಿಗಮ್ಯವಾದ ವಿಷಾದವೂ, ವ್ಯಂಗ್ಯವೂ, ಮೂರ್ತವಾಗಿ ಭಾವಗಮ್ಯವೂ ಆಗುವಲ್ಲಿ ಇನ್ನೂ ಹೆಚ್ಚಿನ ಎಚ್ಚರ ಬೇಕಾಗುತ್ತದೆ. ಉದಾಹರಣೆಗೆ ಫೈಲುಗಳನ್ನು ಪಚಪಚ ಪಚ್ಚ ಎನ್ನಿಸುವ 'ಬಾಬು'ವನ್ನು ಕೋಟು ಟೋಪಿಗಳಿಂದ ತೋರಿಸುವುದು ಈವತ್ತಿಗೆ

(ಮುಂದಿನ ಪುಟಕ್ಕೆ)

# ಚಾರುವಾಕ: ಒಂದು ಕ್ರಾಂತಿಕಾರಿ ವೈಚಾರಿಕ ದರ್ಶನ

*'ತಿಂದು ಬದುಕುವುದು ಪ್ರಾಣಿಧರ್ಮ, ತಿಳಿದು ಬದುಕುವುದು ಮನುಷ್ಯಧರ್ಮ'. ಬದುಕೆನ್ನು ಕೇವಲ ಬದುಕುವುದಲ್ಲ, ಬೆದಕುತ್ತ ಬದುಕಬೇಕು. ನಡೆನುಡಿಯನ್ನು ಅಡಿಗಡಿಗೂ ಪ್ರಶ್ನಿಸಿಕೊಳ್ಳಬೇಕು. ''ನಿನ್ನೆದೆಯ ದನಿಯೆ ಋಷಿ; ಮನು ನಿನಗೆ ನೀನು,'' - ಇದು ಕವಿವಾಣಿ. ನಮ್ಮ ನಡೆನುಡಿಯ ನಡುವೆ ಹೇಗೆ ಕಂದರವಿರಬಾರದೋ ಹಾಗೆಯೇ ನಮ್ಮ ನಡೆನುಡಿಯಲ್ಲಿ ಕಂದಾಚಾರವೂ ಇರಬಾರದು! ಅಕ್ಷರಸ್ಥರೆಲ್ಲರೂ ವಿದ್ಯಾವಂತರಲ್ಲ, ವಿದ್ಯಾವಂತರೆಲ್ಲರೂ ವಿಚಾರವಂತರಲ್ಲ. ಅನಕ್ಷರಸ್ಥರೆಲ್ಲಾ ಅವಿದ್ಯಾವಂತರೂ ಆಗಿರಬೇಕಿಲ್ಲ. ಎಲ್ಲರೂ ವಿಚಾರವಂತ ರಾಗಬೇಕೆಂಬುದು ಚಾರ್ವಾಕರ ಹಂಬಲ.*

*ಈ ಹೊತ್ತಿಗೂ ವಿಸ್ಮಯ ಹುಟ್ಟಿಸುವಂತೆ ಕಂದಾಚಾರಗಳನ್ನು ಪ್ರಶ್ನಿಸಿದ ಲೋಕಾಯತರು ಸುಮಾರು ಮೂರು ಸಾವಿರ ವರ್ಷಗಳ ಹಿಂದೆಯೇ ಪ್ರಾಚೀನ ಭಾರತದಲ್ಲಿ ಹುಟ್ಟಿಕೊಂಡಿದ್ದರು. ಗೌತಮಬುದ್ಧನು ಕಾಣಿಸಿಕೊಳ್ಳುವ ಮುಂಚೆಯೇ ಲೋಕಾಯತರು ನಂಬಿಕೆ ನಡೆವಳಿಕೆಗಳಲ್ಲಿ ಕಾರ್ಯ-ಕಾರಣ ಸಂಬಂಧದ ಅನ್ವೇಷಣೆಯನ್ನು ನಡೆಸಿದ್ದರು.*

**ದೇ**ವಿಪ್ರಸಾದ ಚಟ್ಟೋಪಾಧ್ಯಾಯ, ಎಸ್. ಜಿ. ಸರದೇಸಾಯಿ, ಭಗವತೀ ಶರಣ ಉಪಾಧ್ಯಾಯ, ಜಿ. ರಾಮಕೃಷ್ಣ, ಎ. ಎನ್. ಮೂರ್ತಿರಾವ್, ಗೌರೀಶ ಕಾಯ್ಕಿಣಿ, ವಸುದೇವ ಭೂಪಾಲಂ, ರಂಗನ್ ಮೊದಲಾದ ವಿದ್ವಾಂಸರು ಪ್ರಾಚೀನ ಭಾರತದ ಭೌತಿಕ ವಾದವನ್ನು ಕುರಿತ ಚರ್ಚೆ, ವಿಮರ್ಶೆ, ಸಂಶೋಧನೆಗಳನ್ನು ನಡೆಸಿ ಕಳೆದುಹೋದ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಿಸುವ, ನೈಜವಾಗಿ ಸಲ್ಲಬೇಕಾದ ನೆಲೆಬೆಲೆಗಳನ್ನು ದೊರಕಿಸುವ ಶ್ಲಾಘನೀಯ ಪ್ರಯತ್ನ ಮಾಡಿದ್ದಾರೆ. ಮಹಾಭಾರತ, ಪ್ರಾಚೀನ ಜೈನ, ಬೌದ್ಧ ಗ್ರಂಥಗಳಲ್ಲೂ ಲೋಕಾಯತ ಮಾರ್ಗದ ಪ್ರಸ್ತಾಪಗಳಿದ್ದು ಭಾರತದ ತತ್ವಶಾಸ್ತ್ರ ಪರಂಪರೆಯಲ್ಲಿ ಭೌತಿಕವಾದಿ ವಿಚಾರಧಾರೆ ಉಲ್ಲೇಖ ಗೊಂಡಿದ್ದು ಸಾಕಷ್ಟು ಪ್ರಾಚೀನತಮವೆಂದೇ ಇದನ್ನು ಪರಿಗಣಿಸಬೇಕಿದೆ. ''ಭಾವನಾವಾದಿ ವಿಚಾರಸರಣಿಯನ್ನು ಮತ್ತದರಿಂದ ಉದ್ಭವಿಸುವ ಮೂಢನಂಬಿಕೆಗಳನ್ನು ಅಸಂದಿಗ್ಧವಾಗಿ ತಿರಸ್ಕರಿಸಿ ಅದಕ್ಕಿದಿರಾಗಿ ಸುಸಂಬದ್ಧವಾಗಿ ಭೌತವಾದವನ್ನು ಪ್ರತಿಪಾದನೆ ಮಾಡಿದ ಭಾರತೀಯ ತತ್ವಜ್ಞಾನಿಗಳೆಂದರೆ ನಿಜವಾಗಿ ಲೋಕಾಯತರು'' (ದೇವಿಪ್ರಸಾದ ಚಟ್ಟೋಪಾಧ್ಯಾಯ : **ಭಾರತೀಯ ದರ್ಶನಗಳು** ಪು. 223)

''ಪರಮೇಶ್ವರನು ಮುಕ್ತಿದಾಯಕನೆ? ಖಂಡಿತ ಗೊತ್ತಿಲ್ಲ! ನಾಸ್ತಿಕ ಶಿರೋಮಣಿ ಚಾರ್ವಾಕನು ಹೇಳುವುದೇನೆಂದರೆ ಬದುಕಿರುವವರೆಗೂ ಸುಖವಾಗಿ ಬಾಳಬೇಕು. ಶರೀರವು ಒಂದು ಬಾರಿ ಬೂದಿಯಾದ ಮೇಲೆ ಮತ್ತೆ ಹಿಂತಿರುಗಿ ಬರುವುದೆ? ಜಗತ್ತನ್ನು ನಿರ್ಮಿಸಿರುವುದು ಪಂಚಭೂತಗಳಲ್ಲ; ಚತುರ್ಭೂತಗಳು. ನೀರು, ಮಣ್ಣು, ಗಾಳಿ, ಬೆಂಕಿ-ಈ ನಾಲ್ಕು ಮಾತ್ರ ಸತ್ಯ. ಆಕಾಶವೆಂಬುದು ಕಣ್ಣಿಗೆ ಭ್ರಮೆ ತರಿಸುತ್ತಿರುವ ನಿರ್ವಾತ ! ಶರೀರವಿರುವವರೆಗೂ ಚೈತನ್ಯವುಂಟು; ಮರಣಾನಂತರ ಚೈತನ್ಯದ ಅಸ್ತಿತ್ವವಿಲ್ಲ. ಅಕ್ಕಿ ಬಯಸುವವನು ಬತ್ತದಲ್ಲಿನ ಹೊಟ್ಟು, ಸಿಪ್ಪೆ ತ್ಯಜಿಸಿ ಹೇಗೆ ಸಾರವಾದುದನ್ನು ಸ್ವೀಕರಿಸುತ್ತಾನೋ ಅದರಂತೆಯೇ ಸುಖವನ್ನೇ ಅನುಭವಿಸುತ್ತಾ ದುಃಖವಾದುದನ್ನು ಬಿಡಬೇಕು. ಸುಖವು ದುಃಖಮಿಶ್ರಿತ ಎಂಬ ಭಯದಿಂದ ಸುಖವನ್ನೇ ತ್ಯಜಿಸುವುದು ಯುಕ್ತವಲ್ಲ. ಯಜ್ಞಯಾಗಗಳು ಹೊಟ್ಟೆ ಹೊರೆಯುವ ಸಾಧನಗಳು; ಕೇವಲ ಮೋಸ ! ಸ್ವರ್ಗ, ಮೋಕ್ಷ (ಪರಲೋಕ, ಆತ್ಮ) ಯಾವುವೂ ಇಲ್ಲ; ಸನ್ಯಾಸ, ಭಸ್ಮಲೇಪ, ಕಾಷಾಯಧಾರಣೆ - ಇವೆಲ್ಲವೂ ಬುದ್ಧಿ ಮತ್ತು ಪೌರುಷ ಇಲ್ಲದೆ ಇರುವವರ ಹೊಟ್ಟೆ ಹೊರೆಯುವ ಸಾಧನಗಳು. ಜ್ಯೋತಿಷ್ಟೋಮದಲ್ಲಿ ಕೊಲ್ಲಲ್ಪಟ್ಟ ಪಶುವು ಸ್ವರ್ಗಕ್ಕೆ ಹೋಗುವುದಾದರೆ ಆ ಯಜ್ಞದ ಯಜಮಾನನು ತನ್ನ ತಂದೆಯನ್ನೇಕೆ ಕೊಲ್ಲಬಾರದು? ಶ್ರಾದ್ಧದಿಂದ ಪಿತೃಗಳಿಗೆ ತೃಪ್ತಿ ದೊರಕುತ್ತದೆಂದು ಭಾವಿಸುವುದಾದರೆ ಪ್ರಯಾಣ ಮಾಡುವವರಿಗೆ ಬುತ್ತಿ ಕೊಡಬೇಕಾದ ಅಗತ್ಯವಿಲ್ಲ! ಸ್ವರ್ಗದಲ್ಲಿರುವವರು ಇಲ್ಲಿ ಕೊಡುವ ದಾನದಿಂದ ತೃಪ್ತಿ ಹೊಂದುವುದಾದರೆ ಉಪ್ಪರಿಗೆ ಮೇಲೆ ಕುಳಿತಿರುವವರಿಗೆ ಕೆಳಗಡೆ ಊಟವನ್ನೇಕೆ ನೀಡುವುದಿಲ್ಲ ? ಮೃತರಾದವರಿಗೆ ಅನಂತರ ನೆರವೇರಿಸುವ ಎಲ್ಲ ಉತ್ತರಕ್ರಿಯೆಗಳೂ ಕೆಲವರು ಮಾಡಿಕೊಂಡಿರುವ ಜೀವನೋಪಾಯವಲ್ಲದೆ ಮತ್ತೇನೂ ಅಲ್ಲ ! ವ್ಯಕ್ತಿ ಸತ್ತಾಗ ಅವನ ಆತ್ಮ (?) ಹೊರಗೆ ಬರುವುದೇನೂ ಕಾಣಿಸದು. ಸತ್ತ ಮೇಲೆ ಶರೀರ ಮೊದಲಿಗಿಂತ ಹೆಚ್ಚು ಭಾರವಾಗುತ್ತದೆ. ಆತ್ಮ ಹೋಗಿದ್ದರೆ ತೂಕ ಕಡಿಮೆ ಯಾಗಬೇಕಿತ್ತಲ್ಲವೆ?

''ಅದೃಷ್ಟ ಎಂದರೆ ಕಣ್ಣಿಗೆ ಕಾಣಿಸದ್ದು ಎಂದರ್ಥ. ಹೇಡಿಗಳು, ಸ್ವಯಂ ವಿಶ್ವಾಸವಿಲ್ಲದವರು, ಪರಿಶ್ರಮ ಪಡದವರು ಅದೃಷ್ಟವನ್ನು ನಂಬುತ್ತಾರೆ. ಹಾಗಾದರೆ ಜಗತ್ತಿನಲ್ಲಿ ಕಂಡುಬರುವ ವೈಚಿತ್ರ್ಯವೆಲ್ಲವೂ ಕೇವಲ ಆಕಸ್ಮಿಕವೇ? ಅಲ್ಲ ! ಅದೆಲ್ಲವೂ ಸ್ವಭಾವದಿಂದಲೇ ಉಂಟಾಗುತ್ತದೆ. ಬೆಂಕಿ ಸುಡುತ್ತದೆ; ನೀರು ತಣ್ಣಗಿದೆ; ವಾಯು ಸಮಶೀತೋಷ್ಣವಾಗಿದೆ - ಎಂಬ ವೈಚಿತ್ರ್ಯವನ್ನೆಲ್ಲ ಯಾರು ಮಾಡಿದರು ? ತಂತಮ್ಮ ಸ್ವಭಾವದಿಂದಲೇ ಇವು ಸೃಷ್ಟಿಯಾಗಿವೆ. ಬದುಕಿರುವವರೆಗೂ ಸುಖಸಂತೋಷ ನೆಮ್ಮದಿಗಳಿಂದಿರಬೇಕು. ಸಾಲ ಮಾಡಿಯಾದರೂ ತುಪ್ಪ

---

*(ಹಿಂದಿನ ಪುಟದಿಂದ)*

ಅಸಹಜ, ಅಕಾಲಿಕ; ಪ್ರಾಯಶಃ ,ಕ್ರೂರವೂ ಕೂಡ. ಈವತ್ತು ಈ ಬಾಬುಗಳಲ್ಲಿ ಕ್ಲರ್ಕುಗಳಿಗಿಂತ ಹೆಚ್ಚು ಬೇರೆ ರೀತಿ ಕಂಪ್ಯೂಟರ್ ಹಿಡಿದ ಬ್ಯೂರೋಕ್ರಾಟ್‌ಗಳು, ಟೆಕ್ನೋಕ್ರಾಟ್‌ಗಳೂ ಇದ್ದಾರೆ.

ಇಡೀ ರಂಗವನ್ನು ಚಿಕ್ಕದಾಗಿ ಮೆಟ್ಟಿಲುಗಳಂತೆ ಹಲವು ಹಂತಗಳಲ್ಲಿ ಎತ್ತೆತ್ತರಕ್ಕೆ ಹಾಕಿಕೊಂಡಿದ್ದಾರೆ. ಆವರ್ತನಶೀಲ ಮೆಟ್ಟಿಲುಗಳ ಭ್ರಮೆ ಹುಟ್ಟಿಸದಿದ್ದರೂ ಅದರಂತೆ ಇದೆ. ಇದು ಕಾವ್ಯದಲ್ಲಿ ಕಂಡುಕೊಂಡ ಆಶಯಗಳ ಡಿಸೈನ್‌ಗೆ ಹೊಂದುತ್ತದೆ. ಕಪ್ಪು, ಬಿಳುಪು ಬಣ್ಣಗಳನ್ನೆ ಪ್ರಧಾನವಾಗಿ ಬಳಸಿದ ಇಲ್ಲಿ ಉದ್ದನೆಯ ಅರೆ ಬಿಳಿ ಬಣ್ಣದ ವಸ್ತ್ರ ಕಲಾತ್ಮಕವಾಗಿ ಬಳಕೆಯಾಗಿದೆ. ಸ್ವತಃ ಚಿತ್ರಕಲೆಯ ಪರಿಶ್ರಮ ಚೆನ್ನಾಗಿದ್ದು ನೀನಾಸಂ ತಿರುಗಾಟದ ನಾಟಕಗಳ ಕಲಾ ನಿರ್ದೇಶನದ ಕೆಲಸವನ್ನು ಮಾಡಿರುವ ಚೆನ್ನಕೇಶವ ಅವರು ರಂಗದ ಆಧುನಿಕ ಕಲಾವಂತಿಕೆಯನ್ನು ಜಾಗ್ರತರಾಗಿ ಬಳಸಿದ್ದಾರೆ.

ಟಿಪ್ಪಣಿಯಲ್ಲಿ ನಾನು ಮತ್ತು ನಾವು - ಒಂದು ಜಂಟಿ ಹೇಳಿಕೆ ಎಂದು ಕರೆದಿರುವ ಅಕ್ಷರ, ಚೆನ್ನಕೇಶವರು 'ಸಮಕಾಲೀನ' ಗಮಕದ ಮಾರ್ಗವೊಂದನ್ನು ಹುಡುಕಲು ಪ್ರಯತ್ನಿಸಿರುವುದಾಗಿ ಹೇಳಿಕೊಂಡಿದ್ದಾರೆ. ನಾನು ಮತ್ತು ನಾವು ರಂಗಭೂಮಿಯಲ್ಲಿ ಘಟಿಸುವುದು ನಟ-ಪ್ರೇಕ್ಷಕರ ಮುಖಾಮುಖಿಯಲ್ಲಿ. ಕಾವ್ಯವನ್ನು ಹೀಗೆ ಸಂಮುಖ ಗೊಳಿಸುವುದರಿಂದಲೇ ರಂಗದಲ್ಲಿ ಅರ್ಥ ಅಭಿನೀತವಾಗ ಬೇಕೆಂದು ನಟನ ಕೆಲಸವನ್ನು ಅಭಿನಯವೆಂದಿದ್ದಾರೆ. ಅಡಿಗರ ಕಾವ್ಯ ನಿವೇದನೆಗೆ, ಅದರಲ್ಲೂ ಸ್ವಗತಗಳು ಪ್ರೇಕ್ಷಕರೊಂದಿಗಿನ 'ಮತ್ತೆಂದಿಗೆ ಗೆಳೆಯ ಭೇಟಿ' ಎನ್ನುವಂತಹ ಮಾತು ಕಣ್ಣಿಗೆ ತಾಕಿಸಿ ಹೇಳಿದರೆ ಚೆನ್ನು. ಹಾಗಾಗಬೇಕಾದರೆ ಪ್ರೇಕ್ಷಕರು ಹಾಗೂ ನಟ ಹತ್ತಿರ ಒಂದೇ ನೆಲೆಯಲ್ಲಿ (ನೀನಾಸಂ- ಶಿವರಾಮಕಾರಂತ ರಂಗಮಂದಿರದಲ್ಲಿ ಪ್ರಯತ್ನಿಸಿದಂತೆ) ಇರಬೇಕು. ಅಲ್ಲದೆ ಬೆಳಕು ಸಹ ಪ್ರೇಕ್ಷಕರನ್ನು ನಟ ನೋಡಲು, ಮಾತಾಡಿಸಲು, ಅನುಕೂಲವಾದಷ್ಟು ಇದ್ದಿದ್ದರೆ ಮೇಲು ಎಂದರೆ ಈ ಪ್ರಯೋಗ ನಿಜಕ್ಕೂ, ಆಪ್ತರಂಗಭೂಮಿಗೆ ತಕ್ಕನಾದದ್ದು. ಅದನ್ನು ಬೆಂಗಳೂರಿನ ಎ.ಡಿ.ಎ. ಪ್ರೊಸೇನಿಯಂನಲ್ಲಿ ಆಡಿದಾಗ, ಆಪ್ತ ಅಭಿನಯಕ್ಕಿಂತ ಪ್ರದರ್ಶನವಾಗುವ ಕಡೆಗೆ ಹೋಗಿ ತನ್ನ ಉದ್ದಿಷ್ಟ ಸಿದ್ಧಿ ಪಡೆಯಲಿಲ್ಲ. ಹೀಗೆ ಪ್ರದರ್ಶನಕ್ಕೆ ಒಳಗೊಂಡಾಗ ಸ್ವಗತಗಳ ಧ್ವನಿ ಏರಿ, ಕಾವ್ಯದ ಲಯಗಾರಿಕೆಯನ್ನು ಕಳೆದುಕೊಂಡು ನಾಟಕೀಯವಾಗಿಸಲು ಹೋಗಿ ಅಬ್ಬರವಾಗುವ ಅಪಾಯವಿದೆ. ಈ ಮಾತು ಅಲ್ಲಿನ ಸಂಗೀತ-ಧ್ವನಿ (ಆತೋದ್ಯ ?)ಗಳಿಗೂ ಅನ್ವಯಿಸುತ್ತದೆ. ವಾಚಿಕದ ಲಯವನ್ನು ಆಂಗಿಕ ಲಯಕ್ಕೆ ಯೋಗ್ಯವಾಗಿ ಬಳಸಿಕೊಂಡಿದ್ದರೆ ಚೆನ್ನಕೇಶವರ, ಗಂಭೀರ ಪ್ರಯತ್ನ ಸೆಟೆಯದೆ ಬಾಗುವುದನ್ನೂ ಸಾಧಿಸುತ್ತಿತ್ತು.

**ಡಾ|| ಜಿ. ಶ್ರೀನಿವಾಸಮೂರ್ತಿ**
ಸಂಸ್ಕೃತ ಪ್ರಾಧ್ಯಾಪಕರು, ಎಂ. ಇ. ಎಸ್. ಕಾಲೇಜು
ಬೆಂಗಳೂರು - ೫೬೦ ೦೦೩

ಸೇವಿಸಬೇಕು.'' ಇದಿಷ್ಟು ಚಾರ್ವಾಕದರ್ಶನದ ಸಂಕ್ಷಿಪ್ತ ಸಾರವೆಂದು ಸಾಯಣಮಾಧವಾಚಾರ್ಯರು **ಸರ್ವ ದರ್ಶನ ಸಂಗ್ರಹ** ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಕೊನೆಯ ವಾಕ್ಯವನ್ನು ಕೈಬಿಟ್ಟರೆ (ಈ ವಾಕ್ಯದ ವಿವೇಚನೆಯನ್ನು ಮುಂದೆ ಗಮನಿಸೋಣ) ಉಳಿದುದೆಲ್ಲವೂ ಎಷ್ಟು ವೈಜ್ಞಾನಿಕ, ವೈಚಾರಿಕಪ್ರಜ್ಞೆಯಿಂದ ಕೂಡಿದೆಯೆಂದರೆ ಅದರೆದುರು ಜಗತ್ತಿನ ಮತಧರ್ಮ, ಅಧ್ಯಾತ್ಮ ಪಂಥಗಳು, ಅರ್ಥಹೀನ ಆಚರಣೆಗಳು ಇವತ್ತಿಗೂ ಗಡಗಡ ನಡುಗುತ್ತವೆ.

''ಆಧುನಿಕ ಭೌತವಾದಿಗೆ ತನ್ನ ಸಿದ್ಧಾಂತವನ್ನು ಸಮರ್ಥಿಸುವುದಕ್ಕೆ ಸದ್ಯ ಅಪಾರವಾದ ವೈಜ್ಞಾನಿಕ ಸಾಧನಗಳೂ ಆಧಾರಗಳೂ ಲಭ್ಯವಿವೆ. ವಿಜ್ಞಾನದ ಪ್ರಗತಿ ಮತ್ತು ಜ್ಞಾನದ ವೃದ್ಧಿಯಿಂದಾಗಿ ಆಧುನಿಕ ಭೌತವಾದವು ಬಹಳ ಶ್ರೀಮಂತವಾಗಿದೆ. ಆದರೆ ನಮ್ಮ ಪ್ರಾಚೀನ ಭೌತವಾದಿಗಳು ಸಾಕಷ್ಟು ವೈಜ್ಞಾನಿಕ ಮಾಹಿತಿಗಳಿಲ್ಲದಿದ್ದಾಗ, ಜೊತೆಗೆ ಭಾವನಾವಾದಿಗಳ ಪ್ರಭಾವ ಅಪಾರವಾಗಿದ್ದಾಗ ಸಹ, ತಮ್ಮ ಭೌತವಾದಿ ಸಿದ್ಧಾಂತವನ್ನು ಬಹಳ ಸಮರ್ಥವಾಗಿ ಎತ್ತಿಹಿಡಿದಿದ್ದರೆನ್ನುವುದೇ ಗಮನಿಸಬೇಕಾದ ಅಂಶ.'' ದೇವಿಪ್ರಸಾದ ಚಟ್ಟೋಪಾಧ್ಯಾಯರ ಈ ಮಾತುಗಳು (**ಭಾರತೀಯ ದರ್ಶನಗಳು** ಪು. 234) ಲೋಕಾಯತರ ಐತಿಹಾಸಿಕ ಸಂದರ್ಭವನ್ನು ಪ್ರಸ್ತುತಪಡಿಸುತ್ತವೆ.

ಭೌತಿಕವಾದಿಗಳು ಕಟ್ಟಾ ನಾಸ್ತಿಕರು; ಹುಟ್ಟಾ ಚಿಂತಕರು. ಹಾಗೆ ನೋಡಿದರೆ ನಾಸ್ತಿಕ ಎಂಬ ಶಬ್ದವು ಒಂದು ಬೈಗುಳವಾಗಿ ಪ್ರಚುರವಾಗಿದೆ. ಅಷ್ಟೇ ಅಲ್ಲ, ಟೀಕೆಯ, ನಿಂದನೆಯ, ಉಡಾಫೆಯ ಸ್ವಭಾವವನ್ನೂ ಭಾರತದ ಸನಾತನ ಪರಂಪರೆಯರಿಯದ ದೈವನಿಂದಕರ ಲಕ್ಷಣವನ್ನೂ ಹೇಳುವ ವಿಶೇಷಣವಾಗಿ ಅದು

**ಡಾ॥ ಮಂಜುರಾಜ್ ಎಚ್. ಎಸ್.**

ಚಾಲ್ತಿಯಲ್ಲಿದೆ. ಭಾಷೆಯ ಪದವೊಂದು ಹೀನಾರ್ಥ ಪ್ರಾಪ್ತಿಗೊಳಗಾಗುವ ಸಂದರ್ಭಕ್ಕೆ ಇದು ಸಮರ್ಥ ನಿದರ್ಶನ. ನಾಸ್ತಿಕ ಎಂಬ ಪದವು ಆಸ್ತಿಕ ಪದದ ನಿಷೇಧಾರ್ಥರೂಪ (ನ+ಆಸ್ತಿಕ). ಆಸ್ತಿಕರು ಎಂದರೆ ವೇದಪ್ರಾಮಾಣ್ಯದಲ್ಲಿ ನಂಬುಗೆ ಯಿಟ್ಟವರು ಎಂದೂ ನಾಸ್ತಿಕರು ಎಂದರೆ ವೇದಗಳಲ್ಲಿ ನಂಬುಗೆಯಿಡದವರೆಂದೂ ಮೂಲಾರ್ಥ. 'ನಾನು ಅನಾಸ್ತಿಕ' ಎಂದು ತಮ್ಮನ್ನು ಕರೆದುಕೊಂಡ ಶಿವರಾಮ ಕಾರಂತರು ಕಾರಣವಾದಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಹೊಸ ಶಬ್ದವನ್ನು ಸೃಜಿಸಿದ್ದಾರೆ. ಅಂದರೆ ಭೌತಿಕವಾದಿಗಳಾದ ಚಾರ್ವಾಕರು ನಿಜವಾದ ಅರ್ಥದಲ್ಲಿ ಅನಾಸ್ತಿಕರು.

ಬ್ರಹ್ಮಸೂತ್ರದ ಮೇಲೆ ಶಾರೀರಕ ಭಾಷ್ಯ ಬರೆಯುವಾಗ ಶಂಕರಾಚಾರ್ಯರು ಚಾರುವಾಕ ಸಿದ್ಧಾಂತವನ್ನು ವಿವರಿಸುತ್ತಾರೆ; ವಿಶ್ಲೇಷಣೆಯಲ್ಲಿ ನಿರಾಕರಿಸುತ್ತಾರೆ. ತತ್ವಶಾಸ್ತ್ರ ಮೀಮಾಂಸಕರಾದ ಡಾ॥ ಜ. ರಾಮಕೃಷ್ಣ ಅವರು ಹೇಳುವಂತೆ ''ತರ್ಕದಿಂದ ಮೂಡಿಬರುವ ಅಂಶಕ್ಕೂ ವೇದವಾಕ್ಯಕ್ಕೂ ವಿರೋಧ ಕಂಡುಬಂದರೆ ವೇದವಾಕ್ಯವನ್ನು ಸ್ವೀಕರಿಸಿ ತರ್ಕವನ್ನು ನಿಷೇಧಿಸಬೇಕು. ಶಂಕರಾಚಾರ್ಯರಿಂದ ಹಿಡಿದು ಸಂಪ್ರದಾಯವಾದಿಗಳೆಲ್ಲ ಮಾಡಿರುವುದು ಇದನ್ನೇ'' (**ವೈಚಾರಿಕ ಜಾಗೃತಿ** ಪು. 31).

ಜಗತ್ತಿನ ತತ್ವಜ್ಞಾನ ಮೀಮಾಂಸೆಯಲ್ಲಿ ಸ್ಥೂಲವಾಗಿ ಎರಡು ಪಂಥ. ಒಂದು ಭಾವನಾವಾದ ಅಥವಾ ಅಧ್ಯಾತ್ಮವಾದ, ಮತ್ತೊಂದು ಭೌತಿಕವಾದ ಅಥವಾ ಲೋಕಾಯತವಾದ. ಭೌತಿಕವಾದಿಗೆ ಸಾಮಾನ್ಯವಾಗಿ ಚಾರುವಾಕ ಎಂದು ಹೆಸರು. (ಚಾರು=ಮನೋಹರ, ಆಕರ್ಷಕ; ವಾಕ=ಮಾತು, ನುಡಿ). ಜಗತ್ತಿನಲ್ಲಿ ಮೊದಲು ಇದ್ದುದು ಅರಿವು (=ದೇವರು), ಅನಂತರ ಬಂದದ್ದು ಇರವು (=ಜೀವಿಗಳ ಅಸ್ತಿತ್ವ) ಎಂಬುದು ಅಧ್ಯಾತ್ಮವಾದದ ಪ್ರತಿಪಾದನೆ. ಭೌತಿಕವಾದದ ಪ್ರಕಾರ ಮೊದಲು ಇದ್ದುದು ಇರವು (=ಅಸ್ತಿತ್ವ) ಆಮೇಲೆ ಸೃಷ್ಟಿಯಾದದ್ದು ಅರಿವು (ಅಂದರೆ ದೈವತ್ವದ ಕಲ್ಪನೆ). ಅಂದರೆ ಭೌತಿಕವಾದವು ವಿಜ್ಞಾನಕ್ಕೆ ಸಮೀಪ ಅಥವಾ ವಿಜ್ಞಾನಕ್ಕೆ ಭೌತಿಕವಾದವೇ ಮೂಲನೆಲೆ. ದೇವರು ಮನುಷ್ಯನಿಂದ ಸೃಷ್ಟಿಯಾದದ್ದೆಂಬುದು ವೈಜ್ಞಾನಿಕ, ವೈಚಾರಿಕ ಆಲೋಚನಾ ಸರಣಿ. ಆದರೇನು ? ದೇವರೆಂಬುದು ಮನುಷ್ಯಕೃತ ಕೂಸಾದರೂ ಇಂದು ಅದು ದೈತ್ಯಾಕಾರ ತಾಳಿ ಮತಧರ್ಮಗಳ ನೆಪದಲ್ಲಿ ಆಕ್ರಮಣ ನಡೆಸಿ ಮನುಷ್ಯನ ಶಾಂತಿ ನೆಮ್ಮದಿ ಹಾಗೂ ಕ್ರಿಯಾಪಟುತ್ವಗಳನ್ನೇ ಆಹುತಿ ತೆಗೆದುಕೊಂಡಿದೆ. ಮತಧರ್ಮಗಳೆಂದಿಗೂ ಮನುಷ್ಯ ಮನುಷ್ಯರನ್ನು ಒಂದುಗೂಡಿಸಿದ ಇತಿಹಾಸವಿಲ್ಲ, ಅದರ ಬದಲು ಅವು ಮನುಷ್ಯರನ್ನು ಬೇರ್ಪಡಿಸಿವೆ; ಪರಸ್ಪರರನ್ನು ಕಿತ್ತಾಡಿಸಿಕೊಂಡಿವೆ. ಡಾ॥ ಅಂಬೇಡ್ಕರರು ಹೇಳುವಂತೆ 'ಧರ್ಮ ಮನುಷ್ಯನಿಗಾಗಿಯೇ ವಿನಾ ಮನುಷ್ಯನು ಧರ್ಮಕ್ಕಾಗಿಯಲ್ಲ.'

ಚಾರ್ವಾಕ ತತ್ವಜ್ಞಾನವು ದೇವರ ಅಸ್ತಿತ್ವವನ್ನು ಕುರಿತಂತೆ, ಅಂದರೆ ಅದು ಇರುವುದೇ, ಇಲ್ಲವೇ, ಎಂದು ವಿಪರೀತ ತಲೆಕೆಡಿಸಿಕೊಳ್ಳುವುದಿಲ್ಲ. ಇದು ನಂಬಿಕೆಯ ಸಂಗತಿ. ಆದರೆ ಅದರ ಹೆಸರಿನಲ್ಲಿ ನಡೆಸುವ ಅರ್ಥಹೀನ ಆಚರಣೆ, ಅಮಾನವೀಯ ನಡವಳಿಕೆ, ತಿನ್ನುವ, ತೊಡುವ ಪದಾರ್ಥಗಳನ್ನು ನಾಶ ಮಾಡುವುದು; ಭಕ್ತಿಯ ಪರಾಕಾಷ್ಠೆಯಲ್ಲಿ ಸೋರಿಹೋಗುವ ಕಾಲ, ಹಣ, ಶ್ರಮಗಳನ್ನು ಕುರಿತಂತೆ ಚಾರ್ವಾಕರು ತೀಕ್ಷ್ಣವಾಗಿ, ಕಿಂಚಿತ್ತೂ ದಾಕ್ಷಿಣ್ಯವಿಟ್ಟುಕೊಳ್ಳದೆ ಕಟುವಾಗಿ ಟೀಕಿಸಿದರು.

**ಹೊಸವರುಷ – 2000**









''ಕೆಲವೊಮ್ಮೆ ಆಸ್ತಿಕವಾದಿಗಳು ಹೆಮ್ಮೆಯಿಂದ ಕೊಚ್ಚಿಕೊಳ್ಳುವುದುಂಟು : 'ನಾವಿಲ್ಲದಿದ್ದರೆ ನೀವು (ನಾಸ್ತಿಕವಾದಿಗಳು) ಇರಲು ಹೇಗೆ ಸಾಧ್ಯ ?' ಡಂಭಾಚಾರಿಗಳನೇಕರು ಆಸ್ತಿಕತೆಯೆಂದರೆ ಸತ್ಯ, ಧರ್ಮ, ಸದಾಚಾರ ಎಂದು ವಿವರಿಸಿ ಅದನ್ನೆಲ್ಲ ಕಡೆಗಾಣಿಸಿ ಜೀವಿಸುವ ಪುಂಡರೇ ನಾಸ್ತಿಕರೆಂದು ಹೇಳಿಕೊಂಡು ತೃಪ್ತಿಪಡುವುದುಂಟು'' (ಜಿ. ರಾಮಕೃಷ್ಣ : **ವೈಚಾರಿಕ ಜಾಗೃತಿ** ಪು. 72). ಅಂದರೆ ಕಣ್ಣಮುಂದೆ ನಷ್ಟಗೊಳ್ಳುವ, ಹಸಿದ ಹೊಟ್ಟೆಗಳು ಕೋಟ್ಯಂತರವಿರುವ ಹೊತ್ತಿನಲ್ಲಿ ಆಹಾರ ಪದಾರ್ಥಗಳನ್ನು ಬೆಂಕಿಗರ್ಪಿಸಿ ವ್ಯಾಪಕ ಹೊಗೆಯಿಂದ ಪರಿಸರವನ್ನು ಮಲಿನಗೊಳಿಸುವ ದರಿದ್ರ ಕುಕೃತ್ಯವನ್ನು (ಲೋಕ ಕಲ್ಯಾಣಾರ್ಥ ಎಂದು ಇದನ್ನು ಕರೆಯುವ ಪರಿಯನ್ನು ಗಮನಿಸಿ) ಚಾರ್ವಾಕರು ಪ್ರಶ್ನಿಸಿದರು. ನೂರು ಮಂದಿ ಹುಚ್ಚರಿರುವ ಸಮಾಜದಲ್ಲಿ ಒಬ್ಬ ಆರೋಗ್ಯವಂತನಿದ್ದರೆ, ಹುಚ್ಚರ ದೃಷ್ಟಿಯಲ್ಲಿ ಅವನೇ ಹುಚ್ಚನೆಂದು ಕರೆಸಿಕೊಳ್ಳುವ ಪ್ರಕ್ರಿಯೆಗೆ ಇದು ಸಮಾನ. ಅಂದಿನ (ಮತ್ತು ಇಂದಿನ ಕೂಡ) ಸಮಾಜದ ಸ್ಥಿತಿಗತಿಗಳನ್ನು ಚಾರುವಾಕರಂತೆ ವಿಮರ್ಶಿಸಿದವರು ಬಹಳಷ್ಟು ಮಂದಿ ಸಿಕ್ಕುವುದಿಲ್ಲ. ಸಮಾಜದ ಬಹುಭಾಗ ಒಂದು ವರ್ಗದ ಪಟ್ಟಭದ್ರ ಹಿತಾಸಕ್ತಿಗಳಿಗೆ ಬಲಿಯಾಗಿ ''ಕುರುಡು ಜೀವನ'' ನಡೆಸುತ್ತಿದ್ದ ಕಾಲದಲ್ಲಿ ಚಾರ್ವಾಕರ ಚಾಟಿಯೇಟು ವಿಜೃಂಭಿಸಿತು !

''ನಿರೀಶ್ವರವಾದಿಗಳಿಗೆ ಐದು ವರ್ಷಗಳ ಕಾರಾಗೃಹವಾಸ ವಿಧಿಸಬೇಕೆಂದೂ ಆ ಅವಧಿಯು ಮುಗಿಯುವ ವೇಳೆಗೆ ಅವರು ಆ ವಾದವನ್ನು ಕೈಬಿಟ್ಟಿಲ್ಲದಿದ್ದರೆ ಅಂಥವರಿಗೆ ಮರಣದಂಡನೆಯನ್ನು ವಿಧಿಸಬೇಕೆಂದೂ ಪ್ಲೇಟೊ ಆಗ್ರಹಪಡಿಸಿದ್ದಾನೆ. ಅಂತಹ ಕಠಿಣಪ್ರಸಂಗಗಳನ್ನೆದುರಿಸಬೇಕಾಗಿದ್ದ ಸಂದರ್ಭದಲ್ಲೂ ಹಲವರು ನಿರೀಶ್ವರವಾದವನ್ನು ಅವಲಂಬಿಸಿದ್ದು ಆ ವಾದದ ಶಕ್ತಿಯನ್ನು ಪ್ರತಿಫಲಿಸುತ್ತದೆಂದು ಹೇಳಬಹುದು'' (**ವೈಚಾರಿಕ ಜಾಗೃತಿ**, ಪು. 69). ಪರಂಪರೆಯನ್ನು ಪ್ರಶ್ನಿಸಿದ್ದೇ ಚಾರ್ವಾಕರ ಹಿರಿಮೆ; ಬಾಳುವೆಯಲ್ಲಿ ಬೆರೆತುಹೋಗಿದ್ದ ಮೌಢ್ಯಾಚರಣೆಗಳನ್ನು ಕೈಬಿಡುವಂತೆ ಆಗ್ರಹಿಸಿದ್ದೇ ಚಾರ್ವಾಕಪಂಥವು ಸಮಾಜ ಪರಿವರ್ತನೆಯ ದಿಕ್ಕಿನಲ್ಲಿ ಹಾಕಿದ ಒಂದು ಹೆಜ್ಜೆ.

ಭಾರತದಲ್ಲಿ ಭೌತಿಕವಾದದ ಪರಂಪರೆ ಅತ್ಯಂತ ಪ್ರಾಚೀನವಾದುದು. ನಮ್ಮ ಭೌತಿಕವಾದಿ ತತ್ವವೇತ್ತರು ತಾತ್ವಿಕ ಕ್ಷೇತ್ರದಲ್ಲಿ ಮಹತ್ತರ ಕೊಡುಗೆ ನೀಡಿದ್ದಾರೆ. ಭಾರತೀಯ ತತ್ವಜ್ಞಾನ ಎಂದಾಕ್ಷಣ ದಿವ್ಯವೂ ಭವ್ಯವೂ ಆದ ಆಧ್ಯಾತ್ಮ ವಿಚಾರಧಾರೆ ಎಂದೇ ತಿಳಿದು ವ್ಯಾಖ್ಯಾನಿಸುವುದು ಅರೆವಿದ್ಯೆಯ ಮೂರ್ಖತನವಷ್ಟೇ. ನಾಸ್ತಿಕವಾದವು ಆಸ್ತಿಕವಾದದಷ್ಟೇ ಅಥವಾ ಅದಕ್ಕಿಂತಲೂ ಪುರಾತನವಾದುದು. ಅಂದರೆ ನಾಸ್ತಿಕವಾದವು ಪಾಶ್ಚಿಮಾತ್ಯ ರಾಷ್ಟ್ರಗಳಿಂದಾದ ಕೈಗಾರಿಕಾಭಿವೃದ್ಧಿ ಫಲಿತಗಳ ಆಮದು ಸರಕಲ್ಲ. ಭಾರತೀಯ ತತ್ವವಿಜ್ಞಾನದ ಒಂದು ಪ್ರಧಾನ ಹಾಗೂ ನೈಜ ಕವಲಾಗಿ ಭೌತಿಕವಾದವು ವಿಕಸನಗೊಂಡು ಅಧ್ಯಾತ್ಮವಾದಿಗಳ ಸಿಂಹಸ್ವಪ್ನವೇ ಆಗಿಹೋಗಿದೆ. ''ಭಾರತೀಯ ತತ್ವಶಾಸ್ತ್ರದಲ್ಲಿ ಬಂಧನದ ಸೂತ್ರವಿರುವಂತೆ ಬಿಡುಗಡೆಯ ನೆಲೆಯೂ ಇದೆ. ವೇದಾಂತವೊಂದೇ ಭಾರತೀಯ ದರ್ಶನವಲ್ಲ'' (**ವೈಚಾರಿಕ ಜಾಗೃತಿ**, ಪು. 66).

''ಲೋಕಾಯತ ದರ್ಶನವು ಉಪನಿಷತ್ತುಗಳಿಗಿಂತ ಹಿಂದಿನವು. ನಮ್ಮ ದೇಶದಲ್ಲಿ ಭೌತಿಕವಾದಕ್ಕೂ ಅಧ್ಯಾತ್ಮವಾದಕ್ಕೂ ನಡುವೆ ಬಿರುಸಿನ ತಿಕ್ಕಾಟ ಆರಂಭವಾದದ್ದು ಉಪನಿಷತ್ಕಾಲದ ನಂತರ. ಪ್ರತ್ಯಕ್ಷವಾದ ವಾಸ್ತವಾನುಭವ ಹಾಗೂ ಅದರಿಂದ ಹುಟ್ಟುವ ತರ್ಕಶುದ್ಧತೆಗಳೇ ಭೌತಿಕವಾದಿಗಳ ಶಕ್ತಿಯ ಮೂಲವಾಗಿದ್ದವು. ಶ್ರುತಿ, ಸ್ಮೃತಿ, ಪೂರ್ವಾಚಾರ್ಯರ ವಾಕ್ಯಗಳ ಪ್ರಮಾಣ, ನಿಗೂಢತೆಯ ಕಲ್ಪನೆ, ಧನಿಕರ ಮತ್ತು ರಾಜ್ಯಾಧಿಕಾರಿಗಳ ರಕ್ಷಣೆ ಪೋಷಣೆಗಳು ಅಧ್ಯಾತ್ಮವಾದೀ ಶಕ್ತಿಯ ಆಧಾರಗಳಾಗಿದ್ದವು. ಹೀಗಿದ್ದರೂ ಭೌತಿಕವಾದಿ ಅಭಿಪ್ರಾಯಗಳು ಆ ಕಾಲದಲ್ಲಿ ಕೇವಲ ವೈಚಾರಿಕ ಕ್ಷೇತ್ರದಲ್ಲಿ ಮಾತ್ರವಲ್ಲ, ಜನಸಾಮಾನ್ಯರೊಳಗೂ ಪ್ರಬಲವಾಗಿದ್ದವು. ಹಾಗೆ ಇರಲಿಲ್ಲವಾಗಿದ್ದರೆ ಅದನ್ನು ಅಷ್ಟೊಂದು ತೀವ್ರವಾಗಿ, ಸತತವಾಗಿ, ಪ್ರತಿಭಟಿಸಲಿಕ್ಕೆ ಭಾವನಾವಾದಿಗಳು ಸಿಕ್ಕಾಪಟ್ಟೆ ಪಾಡುಪಡಬೇಕಾಗಿರಲಿಲ್ಲ,'' ಎಂಬ ಎಸ್. ಜಿ. ಸರದೇಸಾಯಿ (**ಭಾರತೀಯ ತತ್ವಜ್ಞಾನ**, ಪು. 110)ಯವರ ಮಾತು ಈ ನಿಟ್ಟಿನಲ್ಲಿ ಗಮನಾರ್ಹ.

ಚಾರುವಾಕರಾಗಲಿ, ಭೌತಿಕವಾದವನ್ನಿಷ್ಟಪಡುವ ನಾಸ್ತಿಕರಾಗಲಿ 'ಮೌಲ್ಯ'ಗಳನ್ನು ಧಿಕ್ಕರಿಸುವುದಿಲ್ಲ. ಮನುಷ್ಯ ಸಂಬಂಧದ ಪ್ರೀತಿ, ಗೌರವ, ಘನತೆಗಳನ್ನು ಅವರು ಎತ್ತಿ ಹಿಡಿಯುತ್ತಾರೆ. ಸ್ವರ್ಗ ನರಕ, ಪಾಪ ಪುಣ್ಯ, ದೇವರು ಧರ್ಮಗಳಿಲ್ಲವೆಂದು ಸ್ವಚ್ಛಂದವಾಗಿ ಬದುಕುವುದಲ್ಲ, ಹಾಗೆ ಬದುಕಬಾರದು. ಹಾಗಾದಲ್ಲಿ ಧರ್ಮ ಅಧ್ಯಾತ್ಮಗಳನ್ನು ಶೋಷಣೆಯ ಸಾಧನವಾಗಿಸಿಕೊಳ್ಳುವ ನಯವಂಚಕನಿಗೂ ಸ್ವಚ್ಛಂದತೆಯಿಂದ ಲಂಗುಲಗಾಮಿಲ್ಲದೆ ಭೋಗಪಡಲು ಇದೇ ಮೆಟ್ಟಿಲೆಂದು ತಿಳಿಯುವ ನಾಸ್ತಿಕವಾದಿ ಕಪಟಿಗೂ ಯಾವುದೇ ವ್ಯತ್ಯಾಸವಿರಲಾರದು. 'ತಾನು ಒಳ್ಳೆಯವನಾಗಿರಬೇಕಾದ್ದು ತನಗೆ ಮತ್ತು ಸಮಾಜದ ಹಿತಕ್ಕೆ' ಎಂಬುದು ಚಾರ್ವಾಕರ ನಂಬಿಕೆ. ದೈವಭೀತಿ, ನರಕ, ಪಾಪಗಳ ಪರಿಕಲ್ಪನೆ ಬೇಕಾಗಿರುವುದು ಕೆಟ್ಟದ್ದು ಸಂಭವಿಸಬಾರದೆಂಬ ನಿಯಂತ್ರಣಕ್ಕಾಗಿ; ಸಾಮಾಜಿಕ ಸಮತೋಲನಕ್ಕಾಗಿ ! ಭೌತಿಕವಾದಿಗಳು ಇದಾವುದರ ಹಂಗಿಲ್ಲದೆ ಒಳ್ಳೆಯವರಾಗಿರಲು ನಿತ್ಯವೂ ಪ್ರಯತ್ನಿಸುತ್ತಾರೆ. ಜೀವನಾನುಭವ, ಲೋಕಜ್ಞಾನ ದಟ್ಟವಾದಂತೆ, ಚಿಂತನಮಂಥನಗಳು ಆಳಗೊಂಡಂತೆ ಮನುಷ್ಯ ತಂತಾನೇ ಭೌತಿಕವಾದಿಯಾಗುವನು. ಇದರಿಂದ ಅವನು ಹೆಚ್ಚು ಚೆನ್ನಾಗಿ, ಸಂತೃಪ್ತಿಯಿಂದ, ಸ್ವೋಪಜ್ಞತೆಯಿಂದ, ಸದಭಿರುಚಿಯಿಂದ ಮೌಲ್ಯಗಳನ್ನು ಕಾಣುವನು; ಮೌಲ್ಯಗಳನ್ನೇ ಬದುಕುವನು.




### ಲಕ್ಷಣ

*ಅವರಿಬ್ಬರ ವಿವಾಹದಲ್ಲಿ*
*ಪಾತ್ರ ವಹಿಸಿದ್ದು*
*ವಧು ವರರ*
*ಲಕ್ಷಣ ಅಲ್ಲ*
*ಹಿರಿಯರ ಕೈ ಬದಲಾದ*
*ಲಕ್ಷ-ಹಣ*

*- ಮಾನಸ, ಮೈಸೂರು*

ಆತ್ಮದ ಅಸ್ತಿತ್ವ, ಅನಸ್ತಿತ್ವ ಕುರಿತು ಪರೀಕ್ಷೆ ನಡೆಸಲು ಆಸಕ್ತಿ ತೋರಿದ ಪ್ರಾಚೀನ ಭೌತವಾದಿ ತತ್ವಜ್ಞಾನಿ ಪಾಯಾಸಿ ಎಂಬುವನ ಬಗ್ಗೆ ಬೌದ್ಧ ಸಾಹಿತ್ಯದ 'ಪಾಯಾಸಿ-ಸುತ್ತಂತ' ಎಂಬಲ್ಲಿ ಪ್ರಸ್ತಾಪಿಸಲಾಗಿದೆ. ಅಲ್ಲಿ ಹಲವು ಉದಾಹರಣೆಗಳನ್ನು ಕೊಡಲಾಗಿದೆ. ಅಪರಾಧಿಯೊಬ್ಬನಿಗೆ ಹೇಗೂ ಮರಣದಂಡನೆಯ ಶಿಕ್ಷೆ ನೀಡಬೇಕಾಗಿದೆ. ಅವನನ್ನು ಮರದ ಪೆಟ್ಟಿಗೆಯಲ್ಲಿ ಕೂಡಿಹಾಕಿ ಬೆಂಕಿ ಹಚ್ಚಿರಿ - ಆತ್ಮವಿರುವುದು ನಿಜವಾದರೆ ಅದು ಹೊರಗೆ ಬರುವುದು ಕಾಣುತ್ತದೆ ! ಈ ಉದಾಹರಣೆ ಯಾಕೆ ಬೇಕಿದೆಯೆಂದರೆ ಭೌತಿಕವಾದಿಗಳ ಪ್ರಯೋಗವಿಧಾನಗಳನ್ನು ತಿಳಿಯಲಷ್ಟೇ. ಪಾಯಾಸಿಯು ಪರೀಕ್ಷೆಗಾಗಿ ಯಾರನ್ನೋ ಬಳಸಿಕೊಳ್ಳಿ ಎನ್ನುವುದಿಲ್ಲ, 'ಅಪರಾಧಿ'ಯನ್ನು ಎಂದು ವಿವರಿಸಿ ತಿಳಿಸಿದ್ದಾನೆ. ಪ್ರಾಚೀನ ಭೌತವಾದಿಗಳ ಮಾನವೀಯ ಮುಖವನ್ನಾಗಲಿ, ಪ್ರಜ್ಞಾವಂತ ಸಮಾಜದ ನೀತಿನಿಯಮ, ಕಾನೂನು ಕಟ್ಟಳೆಗಳನ್ನವರು ಗೌರವಿಸುತ್ತಾರೆ ಎಂಬುದನ್ನಾಗಲಿ ಇದರಿಂದ ಅರಿಯಬಹುದಷ್ಟೇ.

''........ ವ್ಯಕ್ತಿ ಬೆಳೆಯಬೇಕು, ಜೀವನದ ಸೊಗಸುಗಳನ್ನು ಅನುಭವಿಸಬೇಕು. ಅದರಿಂದ ಕಲಿಯುವ ಪಾಠಗಳನ್ನು ಕಲಿತುಕೊಳ್ಳಬೇಕು - ಎಂದೊಡನೆ, 'ಸಾಲ ಮಾಡಿಯಾದರೂ ತುಪ್ಪವನ್ನು ತಿನ್ನು' ಎನ್ನುವ ಚಾರ್ವಾಕಮತ ಸ್ಥಾಪನೆಯಾಗುವುದಿಲ್ಲ. ಸಾಲ ಪಡೆಯುವ ಚಾರ್ವಾಕನಿಗೆ ಸಾಲ ಕೊಟ್ಟ ಸಾಲಿಗನ ಸುಖ ದುಃಖಗಳಿಲ್ಲ. ಆತನೂ ಬದುಕಬೇಕೆಂಬ ಸಿದ್ಧಾಂತವಿಲ್ಲ....'' -ಶಿವರಾಮ ಕಾರಂತರ (**ಬಾಳ್ವೆಯೇ ಬೆಳಕು**, ಪು. 95) ಈ ಮಾತುಗಳು ಭಾರತೀಯ ತತ್ವಜ್ಞಾನದ ಭೌತಿಕವಾದಿ ಪರಂಪರೆಯ ಬಗ್ಗೆ ಅತ್ಯಂತ ಮೇಧಾವಿ ಚಿಂತಕರಲ್ಲೂ ಇರಬಹುದಾದ ಪೂರ್ವಗ್ರಹವನ್ನು ಪ್ರತಿನಿಧಿಸುತ್ತವೆ. ಕಾರಂತರು ನಮ್ಮ ನಡುವಿನ ಅತ್ಯುನ್ನತ ಹಾಗೂ ಸ್ವಾನುಭವಪ್ರಧಾನ ವೈಚಾರಿಕ ಸಂಶೋಧಕರ ಸಾಲಿನಲ್ಲೇ ಅಗ್ರಪಂಕ್ತಿಯ ದೈತ್ಯ ಪ್ರತಿಭೆ. ಆದರೆ ನಾನು ನಾಸ್ತಿಕನೂ ಅಲ್ಲ; ಆಸ್ತಿಕನೂ ಅಲ್ಲ; ಅನಾಸ್ತಿಕ ಎಂದು ಗುರುತಿಸಿಕೊಂಡ ಕಾರಂತರು ಕೂಡ ಚಾರ್ವಾಕದರ್ಶನದ ಸಮರ್ಪಕ ಜಿಜ್ಞಾಸೆ ನಡೆಸದೆ ಹೋಗಿದ್ದಾರೆ. ಇದನ್ನು ಕಾರಂತರ ಮೇಲಿನ ಟೀಕೆಯೆಂದು

ಅನ್ಯಥಾ ಭಾವಿಸಬಾರದು. ಚಾರುವಾಕರನ್ನು ಕುರಿತ ಸಲ್ಲದ ಪೂರ್ವಗ್ರಹಿಕೆಗಳೇ ಅಧಿಕ ಎಂಬುದಕ್ಕೆ ಇದು ನಿದರ್ಶನ. ಒಂದುಪಕ್ಷ ಅದು ಚಾರ್ವಾಕರ ಹೇಳಿಕೆಯೆಂದೇ ಪರಿಗಣಿಸಿದರೂ ಅದರ ಹಿನ್ನೆಲೆ-ಮುನ್ನೆಲೆಗಳನ್ನು ಗುರುತಿಸದಿರುವುದು ಒಂದು ಪ್ರಮುಖ ದೋಷವೇ ಸರಿ. ಇಂತಹ ಮಿಥ್ಯಾರೋಪಗಳೇ ಭೌತಿಕವಾದದ ಗಂಭೀರ ಚಿಂತನೆಯನ್ನು ತುಂಡರಿಸುವ, ಅಲ್ಲಗಳೆಯುವ ತೀಕ್ಷ್ಣ ಅಸ್ತ್ರಗಳಾಗಿ ಮಾರ್ಪಟ್ಟು, ಅಧ್ಯಾತ್ಮವಾದದ ಅಪ್ರತ್ಯಕ್ಷ ಸಮರ್ಥನೆಯಾಗುವ ಅಪಾಯವುಂಟು.

ಹೀಗೆ ಚಾರ್ವಾಕ ದರ್ಶನದ ಕಟುಸತ್ಯಗಳಿಂದ ಅಪ್ರತಿಭರಾದ ಮತಮೂಢರು ಹೇಡಿಗಳಂತೆ ಹಿಂಬದಿಯಿಂದ ಆಕ್ರಮಣ ಮಾಡಿದರು. ಚಾರ್ವಾಕ ಎಂಬ ಹೆಸರಿನ ರಾಕ್ಷಸ ಪಾತ್ರವೊಂದನ್ನು ಮಹಾಭಾರತದಲ್ಲಿ ಸೇರಿಸಿದರು. ಮೌಲ್ಯಪ್ರಜ್ಞೆಯಿಲ್ಲದೆ ಕೇವಲ ಸುಖಭೋಗಗಳನ್ನೇ ಜೀವನದ ಗುರಿಯಾಗಿಸಿ ಕೊಂಡವರು ಚಾರ್ವಾಕರು ಎಂದು ಗ್ರಂಥಗಳಲ್ಲೆಲ್ಲ ಆರೋಪಿಸಿದರು. ಚಾರ್ವಾಕರ ''ಸಾಲ ಮಾಡಿ ಯಾದರೂ ತುಪ್ಪ ತಿನ್ನಿ'' ಎಂಬ ನುಡಿಯೊಂದನ್ನೇ ಎಳೆದಾಡಿದರು. (ವ್ರತ, ಉಪವಾಸ ಮಾಡುತ್ತ ಅರೆಹೊಟ್ಟೆ ತಿನ್ನುತ್ತ 'ಎಲ್ಲ ಮೋಕ್ಷಕ್ಕಾಗಿ' ಎಂದು ಬದುಕುತ್ತಿದ್ದವರಿಗೆ ಜೀವನದ ಸುಖವನ್ನು ರಂಜನೀಯವಾಗಿ ಅರ್ಥ ಮಾಡಿಸಲು ಇಂಥ ಮಾತನ್ನು ಆಡಿದ್ದರೂ ಆಡಿರ ಬಹುದು.) ಇದರ ಪರಿಣಾಮವಾಗಿ ಚಾರ್ವಾಕದರ್ಶನವು ಜನಪ್ರಿಯವಾಗದೆ, ಜನರನ್ನು ಮುಟ್ಟದೆ ಕಣ್ಮರೆ ಯಾಯಿತು. ಇತಿಹಾಸ ಕಟ್ಟುವವರು, ರಚಿಸುವವರು ಜಾಣಗುರುಡರಾದರು.

'ಋಣಂ ಕೃತ್ವಾ ಘೃತಂ ಪಿಬೇತ್' ಎಂಬ ಉವಾಚವು ಚಾರ್ವಾಕರದೆಂದೇ ತಿಳಿದ ಬಗ್ಗೆ ಮೂಲಭೂತ ಆಕ್ಷೇಪಣೆಯಿದೆ. ಇಂಥ ಮಾತುಗಳು, ವಿರೋಧಿಗಳು ತಮ್ಮ ದುರುದ್ದೇಶ ಸಾಧನೆಗಾಗಿ ಲಗತ್ತಿಸಿದ್ದು ಎಂದೇ ನನಗೆ ಅನಿಸುತ್ತದೆ. ಪಿ. ಎನ್. ರಂಗನ್ ಎಂಬ ವಿದ್ವಾಂಸರು ಹೀಗೆನ್ನುತ್ತಾರೆ : ''ಚಾರ್ವಾಕರ ವಾದಗಳನ್ನು ಮುಂದಿಡು ವಾಗ, ಅವರದಲ್ಲದ ಕೆಲವು ಮಾತುಗಳನ್ನು ಅವರ ವಿರೋಧಿಗಳು ಮುಂದಿಟ್ಟಿದ್ದಾರೆ. ಉದಾಹರಣೆಗೆ ಸಾಲದ ತುಪ್ಪದಂಥ ಮಾತು. ಇಂತಹ ಮಾತುಗಳು ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾಗಿ ನಿಲ್ಲುವುದರಿಂದ ಇದನ್ನು ಚಾರ್ವಾಕವಾದವೆಂದು ಅವರ ವಿರೋಧಿಗಳು ಜನರ ಮುಂದಿಟ್ಟು, ಜನರ ಮನಸ್ಸನ್ನು ಚಾರ್ವಾಕ ತತ್ವದಿಂದ ವಿಮುಖರನ್ನಾಗಿಸುವ ಪ್ರಯತ್ನ ಮಾಡಿದರು. ಸರ್ವದರ್ಶನ ಸಂಗ್ರಹದಲ್ಲಿ ಮಾಧವಾಚಾರ್ಯರು ಇಂಥ ಪ್ರಯತ್ನ ಮಾಡಿದರೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ'' (**ವಿಚಾರ ಸಾಹಿತ್ಯ,** ಪು. 125). ಸಾಲಮಾಡಿ ಒಡವೆ ಮಾಡಿಸಿಕೊಳ್ಳುವ, ಒಡವೆ ಮಾರಿ ಸಾಲ ತೀರಿಸುವ ಬದುಕಿನ ಬೋಧನೆ ಚಾರ್ವಾಕರದಲ್ಲ ಎಂಬ ಸ್ಪಷ್ಟತೆ ಇದರಿಂದ ನಿಷ್ಪನ್ನಗೊಳ್ಳುವುದು.

ದೇವರ ಬಗ್ಗೆ ಮೌನ ತಾಳಿದ, ಕಂದಾಚಾರಗಳ ವಿರುದ್ಧ ಸಿಡಿದೆದ್ದ ಬುದ್ಧ (ಈತನ ಕಾಲ ಕ್ರಿ. ಪೂ. 563-483) ಕೂಡ ಬಹಳಷ್ಟು ಸಂಗತಿಗಳಲ್ಲಿ ಚಾರ್ವಾಕರಿಂದ ಪ್ರೇರಿತನಾಗಿದ್ದಾನೆ. ಚಾರ್ವಾಕ ಮತ್ತು ಬುದ್ಧನ ತತ್ವಜ್ಞಾನಗಳ ಸಾಮ್ಯ-ವೈಷಮ್ಯಗಳ ಅಧ್ಯಯನ ವಾಗಲಿ, ಅಂತರಸಂಬಂಧೀ ಶೋಧನೆಯಾಗಲಿ ಒಂದು ಮಹತ್ತರ ಪ್ರಬಂಧವೇ ಆದೀತು.

ಕೊನೆಯದಾಗಿ ಎಸ್. ಜಿ. ಸರದೇಸಾಯಿಯವರ 'ಭಾರತೀಯ ತತ್ವಜ್ಞಾನ' ಕೃತಿಯ ಎರಡು ವ್ಯಾಖ್ಯಾನಗಳನ್ನು ಗಮನಿಸಬಹುದು :

''ನಮ್ಮಲ್ಲಿ ನಿರೀಶ್ವರವಾದಿ ತರ್ಕನಿಷ್ಠ ಭೌತಿಕವಾದಿ ದರ್ಶನವನ್ನು ದಲಿತ ಜನರ ಭೌತಿಕ ಉದ್ಧಾರದ ಪ್ರಶ್ನೆಯೊಂದಿಗೆ ತಳಕುಹಾಕುವ ಪ್ರಯತ್ನ ಗೌತಮ ಬುದ್ಧನೊಬ್ಬನಿಂದ ಮಾತ್ರ ನಡೆಯಿತು. ಲೋಕಾಯತರು ಬೌದ್ಧಿಕ ಕ್ಷೇತ್ರದಲ್ಲೇನೋ ಆ ಪ್ರಯತ್ನ ಮಾಡಿದರು. ಅದರಿಂದಾಚೆಗೆ ವ್ಯವಹಾರ ಕ್ಷೇತ್ರಕ್ಕೆ ಅವರು ಪ್ರವೇಶಿಸಲಿಲ್ಲ..... ಶ್ರಮಜೀವಿಗಳು ಶೋಷಣೆಯಿಂದ ವಿಮುಕ್ತಿ ಹೊಂದುವ ಆಕಾಂಕ್ಷೆಯೇ ಭೌತಿಕವಾದಿ ತತ್ವಶಾಸ್ತ್ರದ ಪ್ರೇರಕಶಕ್ತಿಯಾಗಿದೆ. ಆದರಿಂದಲೇ ಆ ತತ್ವಶಾಸ್ತ್ರವು ಒಂದು ಸಾಮಾಜಿಕ ಶಕ್ತಿಯಾಗಲು ಸಾಧ್ಯ'' (ಪು. 178). ಭೌತಿಕವಾದಿ ದರ್ಶನಗಳು ದಷ್ಟಪುಷ್ಟವಾಗಿ ಬೆಳೆಯಲು ಸಾಧ್ಯವಾಗದಿರುವುದಕ್ಕೆ ಇಲ್ಲೊಂದು ಸಕಾರಣ ಲಭ್ಯವಾಯಿತು.

''ಬೌದ್ಧಿಕ ಹಾಗೂ ದೈಹಿಕ ಶ್ರಮದ ವಿಂಗಡಣೆ ಹಾಗೂ ತಾರತಮ್ಯಗಳು ವರ್ಗಭೇದವುಳ್ಳ ಎಲ್ಲ ಸಮಾಜ ವ್ಯವಸ್ಥೆಯೊಳಗೂ ಮಾನವನ ಪ್ರಗತಿಗೆ ಅಡ್ಡಿಯಾಗಿದೆ. ನಮ್ಮ ದೇಶದಲ್ಲಂತೂ ವಂಶಪರಂಪರೆಯ ಜಾತಿಭೇದದ ಮೂಲಕ (ವೃತ್ತಿಭೇದ ಕೂಡ) ಅದು ಪರಾಕಾಷ್ಠೆಗೆ ಮುಟ್ಟಿತ್ತು. ಬೌದ್ಧಿಕ ಚಿಂತನೆಯ ಅಧಿಕಾರಸ್ಥರಿಗೆ (ಬ್ರಾಹ್ಮಣರಿಗೆ) ದೈಹಿಕಶ್ರಮದ ವೃತ್ತಿಗಳು ಕೀಳೆಂಬ ಕಾರಣದಿಂದ ನಿಷಿದ್ಧ; ದೈಹಿಕ ಶ್ರಮದ ವೃತ್ತಿಗಳನ್ನು ಜೀವನೋಪಾಯವಾಗಿ ಅನುಸರಿಸುವವರಿಗೆ (ಶೂದ್ರರಿಗೆ ಮತ್ತು ಅತಿಶೂದ್ರರಿಗೆ) ಜ್ಞಾನಾರ್ಜನೆಯ ಅಧಿಕಾರಕ್ಕೆ ನಿಷೇಧದ ಹೇರಿಕೆ ! ಇವುಗಳ ಒಟ್ಟಿನ ದುಷ್ಪರಿಣಾಮವಾಗಿ ಭಾರತದ ವೈಜ್ಞಾನಿಕ ಪ್ರಗತಿ ಕುಂಠಿತವಾಯಿತು'' (ಪು. 177). ಅಸಮಾನತೆಯ ಸಮಾಜದ ಬೇರುಗಳು ಎಲ್ಲಿವೆಯೆಂಬುದನ್ನು ಇದಕ್ಕಿಂತ ಸ್ಪಷ್ಟವಾಗಿ ಗುರುತಿಸಲು ಸದ್ಯಕ್ಕೆ ಸಾಧ್ಯವಾಗದು. ಎಲ್ಲ ಬಗೆಯ ಅಸಮಾನತೆ ಮತ್ತು ಮಾರ್ಗಭೇದದ ಗೊಂದಲಗಳು ಜಾತಿವಾದದಿಂದ ಸ್ಥಿರೀಕರಿಸಲ್ಪಡುತ್ತವೆ. ಈ ದೇಶದಲ್ಲಿ ಜಾತಿವ್ಯವಸ್ಥೆಯನ್ನು ನೈಜವೆಂದು ಬಿಂಬಿಸಲು ಕರ್ಮಸಿದ್ಧಾಂತದ ನೆರವು ಪಡೆಯಲಾಗಿದೆ. ಭಗವದ್ಗೀತೆಯಲ್ಲಿ ಪರಮಾತ್ಮನಿಂದಲೇ (ಆತ್ಮವೇ ಇಲ್ಲವೆಂದ ಮೇಲೆ ಪರಮ ಆತ್ಮನೆಲ್ಲಿಂದ ಬರಬೇಕು ?) ಅಪ್ಪಣೆ ಕೊಡಿಸಿಲ್ಲವೇ, ''ಚಾತುರ್ವರ್ಣ್ಯ ವ್ಯವಸ್ಥೆಯನ್ನು ನಾನೇ ಗುಣ ಮತ್ತು ಕರ್ಮಗಳ ಆಧಾರದಲ್ಲಿ ಸೃಷ್ಟಿಸಿರುವೆ,'' ಎಂದು !

ಮತಧರ್ಮಾತೀತ, ಪಂಥಾತೀತ, ಜಾತ್ಯತೀತ ದರ್ಶನವಾಗಿ ವೈಚಾರಿಕ, ವೈಜ್ಞಾನಿಕ ತಳಹದಿಯಲ್ಲಿ ಚಾರುವಾಕ ಸಿದ್ಧಾಂತ ರೂಪುಗೊಂಡಿತು. ಕುವೆಂಪು ಪ್ರಣೀತ ವಿಶ್ವಮಾನವ ತತ್ವದ ಸಾಕ್ಷಾತ್ಕಾರ ಮಾಡಲು ಹೊರಡಬೇಕಾದ ನಮ್ಮ ಯುವಜನತೆಗೆ ಚಾರ್ವಾಕ ಮಾರ್ಗವೇ ಆದರ್ಶನೀಯ ಮತ್ತು ಅನುಕರಣೀಯ.

ಡಾ|| ಮಂಜುರಾಜ್ ಎಚ್.ಎನ್.
ಕನ್ನಡ ಅಧ್ಯಾಪಕ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ - ೫೭೧ ೬೦೨

# ಆಜಾದ್ ಹಿಂದ್ ಫೌಜ್‌ನ ನೇತಾಜಿ ಬೋಸ್

''ಖಡ್ಗವನ್ನು ಝಳಪಿಸುತ್ತಿರುವ ಶತ್ರುವನ್ನು ಖಡ್ಗದಿಂದಲೇ ಎದುರಿಸಬೇಕು. ಅಸಹಕಾರ ಚಳವಳಿ ಸಶಸ್ತ್ರ ಸಂಗ್ರಾಮವಾಗಿ ಬೆಳೆಯಬೇಕು. ಯಾವಾಗ ಭಾರತೀಯರು ಅಗಾಧ ಪ್ರಮಾಣದಲ್ಲಿ ಅಗ್ನಿ ದೀಕ್ಷೆಯನ್ನು ಪಡೆಯುವರೋ ಆಗಲೇ ಅವರು ಸ್ವಾತಂತ್ರ್ಯಕ್ಕೆ ಅರ್ಹರಾಗುತ್ತಾರೆ.'' - ಹೀಗೆಂದು ಗರ್ಜಿಸಿದವರು ಸುಭಾಸ್ ಚಂದ್ರ ಬೋಸ್, ಜೂನ್ ೧೯, ೧೯೪೩ರಂದು ಸಿಂಗಾಪುರದ ಪತ್ರಿಕಾ ಗೋಷ್ಠಿಯಲ್ಲಿ.

ಜುಲೈ ೪, ೧೯೪೩ರಂದು ಭಾರತೀಯ ಸ್ವಾತಂತ್ರ್ಯ ಯೋಧರೆಂದು ಪ್ರಖ್ಯಾತರಾಗಿದ್ದ, ಜಪಾನಿನಲ್ಲಿ ನೆಲೆಸಿದ್ದ ಭಾರತೀಯ ಕ್ರಾಂತಿವೀರ ರಾಷ್ ಬಿಹಾರಿ ಬೋಸರು, ಸಿಂಗಾಪುರದ ಕ್ಯಾಥೇ ಥಿಯೇಟರಿನಲ್ಲಿ ನೆರೆದಿದ್ದ ಅಸಂಖ್ಯಾತ ಸಭಿಕರಿಗೆ ಸುಭಾಸರನ್ನು ಪರಿಚಯಿಸುತ್ತಾ ''ಭಾರತೀಯ ಯುವ ಜನಾಂಗದಲ್ಲಿ ಅತ್ಯಂತ ಶ್ರೇಷ್ಠನಾದ, ಅತ್ಯಂತ ಧೀರನಾದ, ಅತ್ಯಂತ ಕಾರ್ಯ ದಕ್ಷನಾದ ಸುಭಾಸ್ ಚಂದ್ರ ಬೋಸರನ್ನು ನಿಮಗೆ ಒಪ್ಪಿಸುತ್ತಿದ್ದೇನೆ. ಇನ್ನು ಮೇಲೆ ಅವರೇ ನಿಮ್ಮ ನಾಯಕರು,'' ಎಂದರು.

ಅದಕ್ಕೆ ಉತ್ತರವಾಗಿ ಬೋಸ್, ಸ್ವತಂತ್ರ ಭಾರತದ ತಾತ್ಕಾಲಿಕ ಸರ್ಕಾರವನ್ನು ರಚಿಸುವ ತಮ್ಮ ಇಚ್ಛೆಯನ್ನು ಪ್ರಕಟಿಸುತ್ತ ''೧೮೫೭ರಲ್ಲಿ ಪ್ರಾರಂಭಿಸಿದ ಭಾರತೀಯ ಸ್ವಾತಂತ್ರ್ಯ ಚಳವಳಿ ಉಚ್ಛ್ರಾಯ ಮಟ್ಟಕ್ಕೆ ಮುಟ್ಟಲು ಭಾರತದ ಹೊರಗೂ ಒಳಗೂ ಸಶಸ್ತ್ರ ಸಂಗ್ರಾಮಕ್ಕೆ ಜನರನ್ನು ಸಿದ್ಧಗೊಳಿಸಿ, ಪರಿಣಾಮಕಾರಿಯಾದ ಕ್ರಾಂತಿಯನ್ನು ಉಂಟುಮಾಡಲು ಉದ್ದೇಶಿಸಿದ್ದೇನೆ,'' ಎಂದರು.

ಈ ಉದ್ದೇಶವನ್ನು ಈಡೇರಿಸಲೋಸುಗ ಅಕ್ಟೋಬರ್ ೨೧, ೧೯೪೩ರಂದು ಸಿಂಗಾಪುರದ ಬೃಹತ್ ಬಹಿರಂಗ ಸಭೆಯಲ್ಲಿ ಆಜಾದ್ ಹಿಂದ್ ಸರಕಾರದ ಸ್ಥಾಪನೆಯ ಘೋಷಣೆ ಮಾಡಿ ತಮ್ಮ ಚಾರಿತ್ರಿಕ ಘೋಷಣೆಯನ್ನು ಸಾರಿದರು:

''ದೇವರ ಆಣೆಯಾಗಿ, ಭಾರತೀಯ ಜನತೆಯನ್ನು ಒಂದು ರಾಷ್ಟ್ರವಾಗಿ ಬೆಸೆದ, ಆಗಿಹೋದ ಅನೇಕ ತಲೆಮಾರುಗಳ ಆಣೆಯಾಗಿ, ಶೌರ್ಯ ಮತ್ತು ಆತ್ಮಾರ್ಪಣೆಯನ್ನು ನಮಗೆ ಬಳುವಳಿಯನ್ನಾಗಿ ಬಿಟ್ಟು ಹೋದ ಮೃತ-ಶೂರರ ಆಣೆಯಾಗಿ, ನಮ್ಮ ಬಾವುಟದ ಅಡಿಯಲ್ಲಿ ಒಂದಾಗಿ ಮುನ್ನುಗ್ಗಲು ಹಾಗೂ ಭಾರತದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಕಟ್ಟಕಡೆಯ ಹೋರಾಟವನ್ನು ಹೂಡಲು ಕರೆಕೊಡುತ್ತೇವೆ....''

ಆಜಾದ್ ಹಿಂದ್ ಸರ್ಕಾರವನ್ನು ಸ್ಥಾಪಿಸಿದ ಮೇಲೆ ಆಜಾದ್ ಹಿಂದ್ ಸೈನ್ಯ ಬರ್ಮಾ ಮಾರ್ಗವಾಗಿ ಭಾರತದ ಮೇಲೆ ದಂಡೆತ್ತಿ ಬಂತು. ಆಗ ಜವಹರಲಾಲ್ :

''ಒಂದು ವೇಳೆ ಸುಭಾಸ ಚಂದ್ರ ಬೋಸ್ ಜಪಾನ್ ಸೈನಿಕರ ಸಹಾಯದಿಂದ ಭಾರತದ ಮೇಲೆ ದಂಡೆತ್ತಿ ಬಂದದ್ದೇ ಆದರೆ ನಾನು ಖಡ್ಗಧಾರಿಯಾಗಿ ಅವರನ್ನು ಎದುರಿಸಿ ಹೋರಾಡುತ್ತೇನೆ,'' ಎಂದು ಗರ್ಜನೆ ಮಾಡಿದರು.

''ಅಹಮದ್ ನಗರ ಕೋಟೆಯ ಬಂದೀಖಾನೆಯಲ್ಲಿರುವ ನೀವು ಖಡ್ಗ ಹಿಡಿದು ಹೋರಾಡುವ ಮಾತೆಲ್ಲಿ ಬಂತು ?'' ಎಂದು ಸುಭಾಸರ ಅನುಯಾಯಿಗಳು ಜವಹರರನ್ನು ಮೂದಲಿಸಿದರು.

ಒಂದು ವೇಳೆ ಜವಹರರು ಆಜಾದ್ ಹಿಂದ್ ಸೈನಿಕರನ್ನು ಎದುರಿಸಿದ್ದರೆ, ಅವರು ಯಾವ ತುಕಡಿಯೊಡನೆ ಹೋರಾಡುತ್ತಿದ್ದರು ? ಭಾರತಕ್ಕೆ ದಂಡೆತ್ತಿ ಬರಲು ಸುಭಾಸರು ಮೂರು ಗೆರಿಲ್ಲಾ ಪಡೆಗಳನ್ನು ರಚಿಸಿದ್ದರು. ಒಂದನೆಯದು ಗಾಂಧೀಜಿ ಬೆಟಾಲಿಯನ್, ಎರಡನೆಯದು ನೆಹರೂ ಬೆಟಾಲಿಯನ್, ಮೂರನೆಯದು ಆಜಾದ್ ಬೆಟಾಲಿಯನ್! ಹಾಗಾದರೆ ನೆಹರು ಯಾವ ಬೆಟಾಲಿಯನ್ ವಿರುದ್ಧ ಹೋರಾಡುತ್ತಿದ್ದರು? ಗಾಂಧಿ ಬೆಟಾಲಿಯನ್? ನೆಹರೂ ಬೆಟಾಲಿಯನ್? ಆಜಾದ್ ಬೆಟಾಲಿಯನ್?

ಆಜಾದ್ ಹಿಂದ್ ಫೌಜ್ ಭಾರತದ ಸ್ವಾತಂತ್ರ್ಯಕ್ಕಾಗಿಯೇ ಬ್ರಿಟಿಷರ ವಿರುದ್ಧ ಸಶಸ್ತ್ರ ಹೋರಾಟ ನಡೆಸಿತ್ತು. ಗಾಂಧೀಜಿ ಕೂಡ ಅದೇ ಬ್ರಿಟಿಷರೊಡನೆ ಸತ್ಯಾಗ್ರಹ ಸಮರ ಹೂಡಿದ್ದರು. ಭಾರತದ ಜನತೆಗೆ 'ಮಾಡು ಇಲ್ಲವೇ ಮಡಿ' ಎಂಬ ಕರೆ ಕೊಟ್ಟಿದ್ದರು. ಬ್ರಿಟಿಷರು ಫ್ಯಾಸಿಸ್ಟ್ ಜರ್ಮನಿಯ ವಿರುದ್ಧ ಹೂಡಿದ್ದ ಯುದ್ಧ ಸಾಮ್ರಾಜ್ಯಶಾಹಿ ಯುದ್ಧವಾದ್ದರಿಂದ 'ಯುದ್ಧ ಸನ್ನಾಹಕ್ಕೆ ಸಹಾಯ ಮಾಡಬೇಡಿ' ಎಂದು ೧೯೪೦ರಲ್ಲೇ ವೈಯಕ್ತಿಕ ಸತ್ಯಾಗ್ರಹ ಹೂಡಿದ್ದರು. ಈಗ ಸುಭಾಸ್ ಅದೇ ಬ್ರಿಟಿಷರು ಹೂಡಿದ್ದ ಯುದ್ಧವನ್ನು ಶಸ್ತ್ರಸಜ್ಜಿತರಾಗಿ ಎದುರಿಸಿದ್ದರು. ಇಬ್ಬರ ಗುರಿಯೂ ಒಂದೇ ಆಗಿದ್ದ ಪಕ್ಷದಲ್ಲಿ ನೆಹರೂ ಸುಭಾಸರನ್ನು ಖಡ್ಗಧಾರಿಯಾಗಿ ವಿರೋಧಿಸುವ ಔಚಿತ್ಯವೇನು?

ನೆಹರೂ ಬ್ರಿಟಿಷರನ್ನು ವಿರೋಧಿಸಿದರೂ, ಫ್ಯಾಸಿಸ್ಟ್ ಜರ್ಮನಿ, ಅದರ ಮಿತ್ರ ಪಕ್ಷ ಜಪಾನ್, ಇಟಲಿ ಗೆಲ್ಲುವುದು ಅವರಿಗೆ ಬೇಕಾಗಿರಲಿಲ್ಲ. ಫ್ಯಾಸಿಸ್ಟ್ ಜರ್ಮನಿ ಗೆಲ್ಲಬಾರದೆಂದು ಆಗಿನ ಎಲ್ಲ ಪುರೋಗಾಮಿ, ಪ್ರಜಾಸತ್ತಾತ್ಮಕ ಪದ್ಧತಿಯ ಬೆಂಬಲಿಗರ ಇಚ್ಛೆ.

ಜವಹರರು ಸುಭಾಸರನ್ನು ವಿರೋಧಿಸಿದ್ದು ಸುಭಾಸರು ಜಪಾನ್ ಮತ್ತು ಜರ್ಮನಿಯಂಥ ಫ್ಯಾಸಿಸ್ಟ್- ಸೂಪರ್ ಸಾಮ್ರಾಜ್ಯಶಾಹಿ ಶಕ್ತಿಗಳ ಸಹಾಯ ಪಡೆದರೆಂದು ಆಪಾದನೆ ಇದ್ದುದರಿಂದ. ಸುಭಾಸರು ಫ್ಯಾಸಿಸ್ಟ್ ಶಕ್ತಿಗಳ ಊಳಿಗದ ಆಳೆಂದು ಬ್ರಿಟನ್ ಪ್ರಚಾರ ಮಾಡುತ್ತಿತ್ತು.



ದ್ವಿತೀಯ ಯುದ್ಧ ಕಾಲದಲ್ಲಿ ಬ್ರಿಟಿಷ್ ಸರ್ಕಾರ ಭಿತ್ತಿಪತ್ರಗಳನ್ನು ಪ್ರಚುರಪಡಿಸಿತ್ತು. ಹಿಟ್ಲರ್‌ನನ್ನು ಒಂದು ರಾಕ್ಷಸನಂತೆ ಚಿತ್ರಿಸಿ, ಅವನ ಕೈಯಲ್ಲೊಂದು ಗಾಂಧಿ ಟೊಪ್ಪಿಗೆಯ ಬೋಸರನ್ನು ಹೋಲುವ ಕುನ್ನಿಯನ್ನು ಧ್ವನಿವರ್ಧಕ ಯಂತ್ರದ ಮುಂದೆ ಹಿಡಿದೆತ್ತಿ ತೋರಿಸುವ ವ್ಯಂಗ್ಯಚಿತ್ರ. ಅಂಥ ಚಿತ್ರಗಳು ಗ್ರಾಮ ಪಂಚಾಯ್ತಿ ಗೋಡೆಗಳ ಮೇಲೆ, ತಾಲ್ಲೂಕು ಕಚೇರಿ, ಕಲೆಕ್ಟರ್ ಕಚೇರಿ ಗೋಡೆಗಳ ಮೇಲೆ ಎಲ್ಲೆಲ್ಲಿಯೂ ಕಾಣಿಸುತ್ತಿದ್ದವು.

ಈ ಅಪಪ್ರಚಾರವನ್ನು ಅಲ್ಲಗಳೆಯಲು ಸುಭಾಸರು ಆಜಾದ್ ಹಿಂದ್ ರೇಡಿಯೋ ಮೂಲಕ ಮಹಾತ್ಮಾಜಿಗೆ ಒಂದು ಬಿನ್ನಹ ಮಾಡಿಕೊಂಡರು :

'ಮಹಾತ್ಮಾಜಿ,

'ನಾನು ಜಪಾನಿಗೆ ಬಂದ ಮೇಲೆ ಇವರ ಪ್ರಧಾನಿ ಟೋಜೋ ಅವರನ್ನು ಭೆಟ್ಟಿ ಆದ ಮೇಲೆ, ಅವರು ಅಮೆರಿಕ ಮತ್ತು ಬ್ರಿಟನ್ನಿನ ಮೇಲೆ ಯುದ್ಧ ಸಾರಿದ ಮೇಲೆ ಅವರು ನಿಜವಾಗಿಯೂ ಸಾಮ್ರಾಜ್ಯಶಾಹಿಗಳಲ್ಲ ಎಂಬುದು ನನಗೆ ಮನವರಿಕೆ ಆಗಿದೆ. ಅವರಿಗಿರುವ ಏಕಮಾತ್ರ ಉದ್ದೇಶ ಬ್ರಿಟಿಷ್ ಸಾಮ್ರಾಜ್ಯದ ವಿನಾಶ. ಭಾರತದ ಸ್ವಾತಂತ್ರ್ಯ...' ಇದು ಜುಲೈ ೬, ೧೯೪೪ರಂದು ಕಳಕಳಿಯಿಂದ ಮಾಡಿಕೊಂಡ ಬಿನ್ನಹ. ಹಾಗೂ ತಮ್ಮ ಸಶಸ್ತ್ರ ಹೋರಾಟವನ್ನು ಸಮರ್ಥಿಸುತ್ತ ಅವರೆಂದರು :

'ರಕ್ತಪಾತವಿಲ್ಲದೆ ಭಾರತಕ್ಕೆ ಸ್ವಾತಂತ್ರ್ಯ ಪಡೆಯಬೇಕೆಂದು ನಿಮ್ಮ ಇಡೀ ಜೀವಮಾನದಲ್ಲಿ ಪ್ರತಿಪಾದಿಸುತ್ತ ಬಂದಿರುವ ಪದ್ಧತಿಯಿಂದ ಸ್ವಾತಂತ್ರ್ಯ ಸಿಕ್ಕುವುದಾದರೆ ಸ್ವದೇಶದಲ್ಲಿ ಆಗಲಿ ವಿದೇಶದಲ್ಲಿ ಆಗಲಿ ಸಂತೋಷ ಪಡದ ಒಬ್ಬಾನೊಬ್ಬ ಭಾರತೀಯನೂ ಇರಲಾರ. ಆದರೆ

**ಕೋ. ಚೆನ್ನಬಸಪ್ಪ**

ವಸ್ತುಸ್ಥಿತಿ ಹಾಗಿಲ್ಲ. ನಾವು ಸ್ವಾತಂತ್ರ್ಯವನ್ನು ಬಯಸುವುದಾದರೆ ರಕ್ತದ ಹೊಳೆಯಲ್ಲಿ ಹಾದುಹೋಗುವುದಕ್ಕೆ ನಾವು ಸಿದ್ಧರಾಗಲೇಬೇಕೆಂದು ನನಗೆ ದಿಟವಾಗಿದೆ... ನಾನು ಅಕ್ಷಶಕ್ತಿ (Axis powers) ಗಳ ಸಹಾಯವನ್ನು ಪಡೆದದ್ದು ಭಾರತ ಸ್ವಾತಂತ್ರ್ಯ ಪಡೆಯಲಿಕ್ಕಾಗಿ. ಭಾರತದ ಹಿತ, ಮರ್ಯಾದೆ, ಆತ್ಮಗೌರವಕ್ಕೆ ಧಕ್ಕೆ ತರುವ ರೀತಿಯಲ್ಲಿ ನಾನು ವರ್ತಿಸಿಲ್ಲ ಎಂಬುದಕ್ಕೆ ವಿದೇಶದಲ್ಲಿರುವ ನನ್ನ ದೇಶಬಾಂಧವರು ಸಾಕ್ಷಿಯಾಗಿದ್ದಾರೆ.''

ಇದೇ ಬಾನುಲಿ ಮನವಿಯನ್ನು ಮುಕ್ತಾಯಗೊಳಿಸುತ್ತಾ ಬೋಸ್ ಕಳಕಳಿಯಿಂದ ಭಿನ್ನವಿಸಿದರು :

''ಭಾರತ ಸ್ವಾತಂತ್ರ್ಯದ ಕೊನೆಯ ಸಮರ ಪ್ರಾರಂಭವಾಗಿದೆ. ಆಜಾದ್ ಹಿಂದ್ ಸೈನ್ಯದ ವೀರಯೋಧರು ಈಗ ಭಾರತದ ಭೂಮಿಯಲ್ಲಿ ವೀರಾವೇಶದಿಂದ ಹೋರಾಡುತ್ತಿದ್ದಾರೆ.... ಬ್ರಿಟಿಷರನ್ನು ಭಾರತದಿಂದ ಹೊಡೆದೋಡಿಸುವ ತನಕ ಹಾಗೂ ನವದೆಹಲಿಯ ವೈಸ್ರಾಯ್ ಭವನದ ಮೇಲೆ ನಮ್ಮ ತ್ರಿವರ್ಣ ಬಾವುಟ ಹಾರುವ ತನಕ ಸಶಸ್ತ್ರ ಹೋರಾಟ ನಡೆಯುತ್ತದೆ.

''ರಾಷ್ಟ್ರಪಿತನೆ ! ಭಾರತ ಸ್ವಾತಂತ್ರ್ಯದ ಈ ಪವಿತ್ರ ಸಂಗ್ರಾಮದಲ್ಲಿ ನಿಮ್ಮ ಆಶೀರ್ವಾದಗಳನ್ನು ಶುಭೇಚ್ಛೆಗಳನ್ನು ಬೇಡುತ್ತೇನೆ. ಜೈ ಹಿಂದ್ !''

ಸುಭಾಸ್ ಚಂದ್ರ ಬೋಸರು ೧೯೪೧ರಲ್ಲಿ ಕಲ್ಕತ್ತೆಯ ತಮ್ಮ ಗೃಹಬಂಧನದಿಂದ ತಪ್ಪಿಸಿಕೊಂಡು ಪಠಾಣರಂತೆ ವೇಷ ಮರೆಸಿಕೊಂಡು, ಮೂಗನಂತೆ ನಟಿಸಿ ಆಫಘಾನಿಸ್ತಾನದ ಮೂಲಕ ಸೋವಿಯೆತ್ ರಷ್ಯಾ ದಾಟಿ ಬರ್ಲಿನ್‌ಗೆ ಹೋಗಿ ಹಿಟ್ಲರನೊಡನೆ ಸ್ನೇಹ ಮಾಡಿಕೊಂಡದ್ದು ಭಾರತದ ರಾಷ್ಟ್ರೀಯ ಮುಖಂಡರಿಗೆ ಅಸಮಾಧಾನವನ್ನುಂಟುಮಾಡಿತು. ಜರ್ಮನಿಯಲ್ಲಿ ಜ್ಯೂ ಜನಾಂಗವನ್ನು ವಿಷವಾಯು ಗುಹೆಗಳಲ್ಲಿ ಕೂಡಿ ಅರವತ್ತು ಲಕ್ಷ ಜ್ಯೂ ಜನರನ್ನು ಕಗ್ಗೊಲೆ ಮಾಡಿದ ಮಹಾಪಾತಕ ಹಿಟ್ಲರನ ಸಂಗ ಮಾಡಿದ್ದು, ಅಪ್ಪಟ ರಾಷ್ಟ್ರೀಯವಾದಿಗಳಿಗೆ, ಮಾನವತಾವಾದಿಗಳಿಗೆ ಆತಂಕವನ್ನುಂಟುಮಾಡಿತ್ತು. ಹಿಟ್ಲರನ 'ನಾಝಿಜಂ'- ವರ್ಣದ್ವೇಷ, ಜನಾಂಗೀಯ ದ್ವೇಷ ಬ್ರಿಟಿಷರ ಸಾಮ್ರಾಜ್ಯಶಾಹೀ ಪ್ರವೃತ್ತಿಗಿಂತ ಹೀನವಾದದ್ದು, ಹೇಯವಾದದ್ದು ಎಂಬುದು ಲೋಕಕ್ಕೆ ಗೊತ್ತಿತ್ತು. ಅದು ಬೋಸರಿಗೂ ಗೊತ್ತಿರಲೇಬೇಕು. ಗೊತ್ತಾಗಿತ್ತು. ಹಿಟ್ಲರ್ ಅಧಿಕಾರಕ್ಕೆ ಬಂದ ಕಾಲಾವಧಿ (೧೯೩೧-೩೩) ಯಲ್ಲಿ ಬೋಸ್ ಯುರೋಪಿನಲ್ಲಿದ್ದರು. ಅವನ ರಾಕ್ಷಸೀ ಮಹತ್ವಾಕಾಂಕ್ಷೆ ಅವರಿಗೆ ಗೊತ್ತಿತ್ತು. ಬ್ರಿಟಿಷರೊಡನೆ ಹಿಟ್ಲರ್ ಯುದ್ಧ ಹೂಡಿದ್ದು ಅವರು ಸಾಮ್ರಾಜ್ಯಶಾಹಿಗಳೆಂಬ ಕಾರಣದಿಂದಲ್ಲ. ಪ್ರಪಂಚದ ಸಾಮ್ರಾಜ್ಯಶಾಹೀ ಒಡೆತನದಲ್ಲಿ ಜರ್ಮನಿಗೆ ಪಾಲಿಲ್ಲದಂತೆ ಮಾಡಿದ್ದಾರೆಂಬುದೆ ಮುಖ್ಯ ಕಾರಣವಾಗಿತ್ತು. ಅಂಥ ದುಷ್ಟ ಶಕ್ತಿ 'ನಾಝಿಜಂ' ಸರ್ವಾಧಿಕಾರಿಯೊಡನೆ ಬೋಸ್ ಕೈ ಜೋಡಿಸಿದ್ದು ಪ್ರಜಾತಂತ್ರ ಪ್ರಿಯರಿಗೆ ಅತ್ಯಂತ ಘೋರ ಅಪಚಾರವೆನಿಸಿತು.

ಬೋಸರು ಜರ್ಮನಿಗೆ ಹೋದದ್ದು ಅನಿವಾರ್ಯವಾಗಿದ್ದ ಆಕಸ್ಮಿಕ ಘಟನೆ. ಅವರ ಗುರಿಯಿದ್ದದ್ದು ರಷ್ಯಾ; ಮಾಸ್ಕೋ. ಆದರೆ ಅವರಿಗೆ ರಷ್ಯನ್ ವೀಸಾ, ಆಶ್ರಯ ಸಿಗಲಿಲ್ಲ. ಅವರಿಗೆ ಸಿಕ್ಕಿದ್ದು ಇಟಲಿ ದೇಶಕ್ಕೆ. ಇಟಲೀ ದೇಶದವರೆಂಬ ಛದ್ಮ ಹೆಸರಿನಲ್ಲಿ. ಇಟಲಿಗೂ ಜರ್ಮನಿಗೂ ಮೈತ್ರಿ ಇದ್ದುದರಿಂದ ಅವರು ಜರ್ಮನಿಯಲ್ಲಿ ಉಳಿಯಬೇಕಾಯಿತು. ಆದರೆ ಅಲ್ಲಿಯೂ ಅವರ ಏಕಮಾತ್ರ ಗುರಿ ಮಾರಣಾಂತಿಕ ಜಾಗತಿಕ ಸಂಗ್ರಾಮದಲ್ಲಿ ಸಿಕ್ಕು ವಿಲಿವಿಲಿ ಒದ್ದಾಡುತ್ತಿದ್ದ ಬ್ರಿಟನ್ನನ್ನು ಹಣಿದು ಮೆತ್ತಗೆ ಮಾಡುವುದೇ ಆಗಿತ್ತು. ಆಗ ಅವರು ಅಲ್ಲಿದ್ದಾಗ ನಾಝೀ ಜರ್ಮನಿಯ ವಿದೇಶಾಂಗ ಮಂತ್ರಿ, ರಿಬನ್‌ಟ್ರಾಪ್, ಭಾರತದ ಸ್ವಾತಂತ್ರ್ಯ ಹೋರಾಟದ ಪ್ರಯತ್ನಕ್ಕೆ ಬೆಂಬಲ ಕೊಡುವುದಾಗಿ ವಾಗ್ದಾನ ಮಾಡಿದ. ಆದರೆ ಭಾರತದ ತಾತ್ಕಾಲಿಕ ಸರ್ಕಾರಕ್ಕೆ ಮನ್ನಣೆ ಕೊಡಲು ಒಪ್ಪಲಿಲ್ಲ. ಜರ್ಮನಿ ರಷ್ಯಾದ ಮೇಲೆ ಯುದ್ಧ ಸಾರಿ ದಂಡೆತ್ತಿ ಹೋದಾಗ ಬೋಸ್, ಭಾರತೀಯರು ರಷ್ಯಾ ಪರವಾಗಿದ್ದರೆಂಬುದನ್ನು ಸ್ಪಷ್ಟವಾಗಿ ಹಿಟ್ಲರ್‌ಗೆ ತಿಳಿಸಿದರು. ಆದ್ದರಿಂದ ಜರ್ಮನರು ಬೋಸರ ಚಟುವಟಿಕೆಗಳ ಮೇಲೆ ನಿಗಾ ಇಟ್ಟೇ ಇದ್ದರು. ಬೋಸ್ ೧೯೪೩ರಲ್ಲಿ ಜರ್ಮನಿಯನ್ನು ಬಿಟ್ಟು ದೂರದ ಪ್ರಾಚ್ಯ ಏಷ್ಯಾಕ್ಕೆ ಹೊರಟಾಗ, ಇಂಡಿಯನ್ ಲೀಜನ್‌ನ ಅಧಿಕಾರಿಗಳು ಯಾರೂ ರಷ್ಯಾದೊಡನೆ ಯುದ್ಧ ಮಾಡಬಾರದೆಂದು ಕಟ್ಟಾಜ್ಞೆ ಮಾಡಿದ್ದರು. ಹಾಗಿದ್ದರೂ, ಅವರು ಜರ್ಮನಿಯಲ್ಲಿ ಕೆಲವು ಕಾಲ ಇದ್ದು ಅವರ ಪರವಾಗಿ ಬಾನುಲಿಯಲ್ಲಿ ಭಾಷಣ ಮಾಡಿದರು. ಏಕೆ ? ಹೇಗೆ ?

ಸುಭಾಸರಿಗೆ ಇದ್ದ ಏಕಮಾತ್ರ ಉದ್ದೇಶ ಮತ್ತು ಗುರಿ- ಭಾರತದ ಸ್ವಾತಂತ್ರ್ಯ. ಅದೂ ಸಶಸ್ತ್ರ ಸಂಗ್ರಾಮದಿಂದಲೇ ಸಾಧ್ಯ ಎಂಬುದು ದೃಢವಾಗಿತ್ತು! ಅದು ಆದದ್ದೂ ಹಾಗೆಯೇ. ೧೯೪೩ರ ಮಧ್ಯಭಾಗಕ್ಕೇ ಚಲೇಜಾವ್ ಚಳವಳಿ ತಣ್ಣಗಾಗಿಹೋಗಿತ್ತು. ಅದರಿಂದ ಬ್ರಿಟಿಷ್ ಸಾಮ್ರಾಜ್ಯದ ಒಂದು ಸ್ತಂಭವೂ ಅಲುಗಾಡಿರಲಿಲ್ಲ. ಆಗ ಆಜಾದ್ ಹಿಂದ್ ಫೌಜ್, ಪೂರ್ವ ಗಡಿಯಲ್ಲಿ ನುಗ್ಗಿಬಂದು ಭಾರತ ಭೂಮಿಯ ಮೇಲೆ ತ್ರಿವರ್ಣ ಬಾವುಟ ಹಾರಿಸಿತು. ಭಾರತದಲ್ಲಿ ರಾಯಲ್ ಇಂಡಿಯನ್ ನೇವಿ (ನೌಕಾದಳ) ದಂಗೆ ಎದ್ದಿತು. ಭಾರತೀಯ ಸೈನಿಕರು ಆ ದಂಗೆಯನ್ನು ಸದೆಬಡಿಯಲು ನಿರಾಕರಿಸಿದರು. ಸೈನ್ಯ ತಿರುಗಿಬಿದ್ದರೆ ೧೮೫೭ರ ಸಿಪಾಯಿ ದಂಗೆಗಿಂತ ಘನಘೋರ ವಿಪತ್ತು ಬಂದೀತೆಂದು ಬ್ರಿಟಿಷರು ತಾವಾಗಿಯೇ ತೊಲಗಲು ನಿಶ್ಚಯಿಸಿದರೆಂದು, ಅಂದು ಗೃಹಖಾತಾ ಸದಸ್ಯರಾಗಿದ್ದ ಫಿಲಿಫ್ ಮ್ಯಾಸನ್ 'A Shaft of Sunlight' ಎಂಬ ತನ್ನ ಆತ್ಮ ವೃತ್ತಾಂತದಲ್ಲಿ ಹೇಳುತ್ತಾನೆ. It was a good thing we did what we did... The congress forgot the INA as quickly as they conveniently could... Dhargalkon, who had been confined to the cage and who gave evidence against INA, rose after independence to the rank of Lt. General and represented India in Korea."

'ಆಜಾದ್ ಹಿಂದ್ ಫೌಜ್'ನ ಕಥೆಯನ್ನು "The Forgotten Army" ಎಂಬ ಗ್ರಂಥದಲ್ಲಿ Peter Ward Fay ಎಂಬ ಅಮೆರಿಕನ್ ಲೇಖಕ ಸವಿಸ್ತಾರವಾಗಿ ಬರೆದಿದ್ದಾನೆ. ಅದು ಬೋಸರ ಚರಿತ್ರೆಯೂ ಹೌದು.

ಕೋ. ಚೆನ್ನಬಸಪ್ಪ
ನಂ. ೧೨೭, ರಾಜಾಜಿನಗರ, ವೆಸ್ಟ್ ಆಫ್ ಕಾರ್ಡ್ ರೋಡ್,
ಬೆಂಗಳೂರು- ೫೬೦ ೦೮೬

# ಉದ್ದಾಮ ಸಮಾಜಶಾಸ್ತ್ರಜ್ಞ ಡಾ|| ಎಂ. ಎನ್. ಶ್ರೀನಿವಾಸ್

ನಮ್ಮ ದೇಶದ ಸಮಕಾಲೀನ ಬೌದ್ಧಿಕ ಜೀವನಕ್ಕೆ ಶಾಶ್ವತ ಕೊಡುಗೆಯನ್ನು ಕೊಟ್ಟಂತಹ ಕನ್ನಡಿಗರ ಸಾಲಿನಲ್ಲಿ ಪ್ರೊ|| ಎಂ. ಎನ್. ಶ್ರೀನಿವಾಸ್ ಅವರ ಸ್ಥಾನ ಅತ್ಯಂತ ಪ್ರಮುಖವಾದುದು. ಪ್ರಾಚ್ಯ ಭಾರತೀಯ ಶಾಸ್ತ್ರಾಧ್ಯಯನದ ದೃಷ್ಟಿಕೋನದಿಂದ ವಿಶ್ಲೇಷಣೆಗೆ ಗುರಿಯಾಗಿದ್ದ, ಅದೇ ಪ್ರಧಾನ ಪರಂಪರೆಯ ಸುಳಿಯಲ್ಲಿ ಸಿಲುಕಿ ದಶಕಗಳವರೆಗೆ ಸುತ್ತುತ್ತಿದ್ದ ಭಾರತೀಯ ಸಮಾಜಶಾಸ್ತ್ರವನ್ನು ಅಲ್ಲಿಂದ ಹೊರಗೆಳೆಯುವ ಕಾರ್ಯದಲ್ಲಿ ಶ್ರೀನಿವಾಸ್ ಅವರು ಪ್ರಮುಖ ಪಾತ್ರ ವಹಿಸಿದ್ದರು. ಭಾರತೀಯ ಸಮಾಜಶಾಸ್ತ್ರೀಯ ಕ್ಷೇತ್ರಕ್ಕೆ ಇವರ ಆಗಮನವು ಹೊಸಗಾಳಿಯ ಅಲೆಯನ್ನು ತಂದಿತು. ಭಾರತೀಯ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ಆವರೆಗೆ ಚರ್ವಿತ ಚರ್ವಣನಾಗಿದ್ದ 'ಪುಸ್ತಕ ದೃಷ್ಟಿ'ಯನ್ನು ಸ್ಥಾನಪಲ್ಲಟಗೊಳಿಸಿ 'ಕ್ಷೇತ್ರದೃಷ್ಟಿ'ಯು ಆ ಸ್ಥಾನವನ್ನು ಆವರಿಸುವಂತೆ ಮಾಡಿದ್ದು ಶ್ರೀನಿವಾಸ್ ಅವರ ಮಹತ್ತರ ಕೊಡುಗೆ. ಸಹಭಾಗೀ ಅವಲೋಕನ ಪದ್ಧತಿ ಮತ್ತು ಶ್ರಮದಾಯಕ ಕ್ಷೇತ್ರಕಾರ್ಯಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟ ಶ್ರೀನಿವಾಸ್ ಅವರ ಶ್ರಮದಿಂದ ಐವತ್ತರ ಮತ್ತು ಅರವತ್ತರ ದಶಕಗಳ ಕ್ಷೇತ್ರ ಅಧ್ಯಯನಗಳು ಸ್ಫೂರ್ತಿ ಪಡೆದಿವೆ. ಅವರಲ್ಲಿ ಶಿಷ್ಯವೃತ್ತಿ ಕೈಗೊಂಡ ನೂರಾರು ವಿದ್ಯಾರ್ಥಿಗಳ ಮೇಲೆ ಅಪಾರ ಪ್ರಭಾವವನ್ನು ಬೀರಿದ ಶ್ರೀನಿವಾಸರಿಗೆ ಭಾರತದ ಇಂದಿನ ಪ್ರಮುಖ ಸಮಾಜಶಾಸ್ತ್ರಜ್ಞರೆಲ್ಲ ಒಂದಲ್ಲ ಒಂದು ಹಂತದಲ್ಲಿ ಶಿಷ್ಯರೇ ಆಗಿದ್ದರು.



*ಡಾ|| ಎಂ. ಎನ್. ಶ್ರೀನಿವಾಸ್*
*(1916-1999)*

ಜಾತಿ ಮತ್ತು ವರ್ಣ, ಇವುಗಳ ನಡುವೆ ವ್ಯತ್ಯಾಸಗಳನ್ನು ಗುರುತಿಸುವ ಸ್ಪಷ್ಟ ರೇಖೆಯನ್ನು ಎಳೆದವರಲ್ಲಿ ಬಹುಶಃ ಶ್ರೀನಿವಾಸ್ ಅವರು ಮೊದಲಿಗರೆಂದು ತೋರುತ್ತದೆ. ಭಾರತದಲ್ಲಿ ಗ್ರಾಮ ಅಧ್ಯಯನಗಳ ಮಹತ್ವವನ್ನು ಕುರಿತಾದ ಅವರ ಪ್ರಾರಂಭಿಕ ಪ್ರಬಂಧ ಒಂದರಲ್ಲಿ, ಶ್ರೀನಿವಾಸ್ ಅವರು, ಆರಾಮ ಕುರ್ಚಿಯಲ್ಲಿ ಕುಳಿತೇ ಸಿದ್ಧಾಂತೀಕರಿಸುವ ಪ್ರವೃತ್ತಿಯ ಅಪಾಯಗಳನ್ನು ಬಹಳ ಸಮರ್ಥವಾಗಿ ನಿರೂಪಿಸಿದ್ದಾರೆ. ಭಾರತೀಯ ಸಮಾಜ ಮತ್ತು ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ಶಾಸ್ತ್ರೀಯ ಸಂಸ್ಕೃತ ಗ್ರಂಥಗಳನ್ನು ಅತಿಯಾಗಿ ಅವಲಂಬಿಸುವ ಪ್ರವೃತ್ತಿಯನ್ನು ಶ್ರೀನಿವಾಸ್ ತೀಕ್ಷ್ಣವಾಗಿ ಟೀಕಿಸಿದ್ದಾರೆ. ಉದಾಹರಣೆಗೆ, ನಮ್ಮ ಶಾಸ್ತ್ರ ಗ್ರಂಥಗಳು ಗೋವನ್ನು ಪವಿತ್ರವೆಂದು ಸಾರಿದ್ದರೂ ಸಹ ಅದನ್ನಾಧರಿಸಿ ತೀರ್ಮಾನ ಕೈಗೊಳ್ಳುವಂತಿಲ್ಲ, ಏಕೆಂದರೆ ನಮ್ಮ ಗ್ರಾಮಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುವಂತಹವು ಎಮ್ಮೆಗಳು, ಎಂದು ಅವರು ವಾದಿಸಿದ್ದಾರೆ.

ಜಾತಿ ವ್ಯವಸ್ಥೆಯ ಬಿಗಿ ಅಂತಸ್ತುಗಳ ನಡುವೆಯೂ ನಡೆಯುವ ಚಲನೆಯನ್ನು ವಿವರಿಸಲು ಅವರು ಬಳಕೆಗೆ ತಂದಂತಹ ಸಂಸ್ಕೃತೀಕರಣ ಪರಿಕಲ್ಪನೆಯು ಅವರನ್ನು ಅಂತರರಾಷ್ಟ್ರೀಯ ಖ್ಯಾತಿಗೆ ಕೊಂಡೊಯ್ದಿತು. ಭಾರತೀಯ ಸಮಾಜವನ್ನು ಕುರಿತಾದ ಪ್ರತಿಯೊಂದು ವಿಚಾರಗೋಷ್ಠಿ ಮತ್ತು ಸಮ್ಮೇಳನ, ಸಂಸ್ಕೃತೀಕರಣ ಪ್ರಕ್ರಿಯೆಯನ್ನು ಕುರಿತು ಕನಿಷ್ಠ ಒಂದು ದಶಕದವರೆಗೂ ಒಂದಲ್ಲಾ ಒಂದು ರೀತಿಯಲ್ಲಿ ಚರ್ಚೆ ಮಾಡ ಬೇಕಾಯಿತು. ಸಮಕಾಲೀನ ಭಾರತೀಯ ವಾಸ್ತವತೆಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಅವರ ಅತ್ಯಂತ ಪ್ರಮುಖ ಕೊಡುಗೆಯೆಂದರೆ ಅದು ಜಾತಿಯ ಪ್ರಾಬಲ್ಯದ ಕಲ್ಪನೆ. ಈ ಪರಿಕಲ್ಪನೆಯು ಭಾರತೀಯ ಸಮಾಜದ ವರ್ಣ ಮಾದರಿಯನ್ನು ಬದಿಗೊತ್ತಿದುದಲ್ಲದೆ, ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ರೂಪುಗೊಳ್ಳುತ್ತಿರುವ ಅಧಿಕಾರದ ರಚನೆಯ ಕಡೆ ನಮ್ಮ ಗಮನವನ್ನು ಸೆಳೆಯಿತು.

ಅವರು ಏನು ಹೇಳಿದರು ಮತ್ತು ಬರೆದರು ಎಂಬುದಕ್ಕಾಗಿ ಅಷ್ಟೇ ಅಲ್ಲ, ಅವರ ಬರವಣಿಗೆಯ ಶೈಲಿಗಾಗಿಯೂ ಶ್ರೀನಿವಾಸ್ ಅವರು ಅಪಾರ ಗೌರವ ಮತ್ತು ಪ್ರಶಂಸೆಯನ್ನು ಗಳಿಸಿದರು. ಅವರ ಗದ್ಯ ಬರವಣಿಗೆಯು ಸ್ಪಷ್ಟ ಮತ್ತು ಸರಳವಾಗಿದ್ದುದಲ್ಲದೆ, ಅನಾವಶ್ಯಕ ಶಬ್ದಾಡಂಬರಗಳಿಂದ ಮುಕ್ತವಾಗಿತ್ತು. ಗ್ರಾಮ ಸಮಾಜವನ್ನು ಕುರಿತಂತೆ ಶ್ರೇಷ್ಠವಾದ ಸಮಾಜಶಾಸ್ತ್ರೀಯ ವಿವರಣೆಗಾಗಿ ಅಲ್ಲದೆ ಅದರ ಸಾಹಿತ್ಯಿಕ ಗುಣಮಟ್ಟಕ್ಕಾಗಿ ಸಹ ಅವರ *Remembered Village* ಗ್ರಂಥವು ಒಂದೆರಡು ಪ್ರಶಸ್ತಿಗಳನ್ನು ಗಳಿಸಬಹುದಿತ್ತು.

ಅವರು ತಮ್ಮ ಎಲ್ಲ ಬರವಣಿಗೆಗಳಲ್ಲಿಯೂ ಸೂಕ್ತ ಪದಗಳು ಮತ್ತು ಅಭಿವ್ಯಕ್ತಿಗಳನ್ನು ಆಯ್ಕೆ ಮಾಡಿ ಬಳಸಲು ಆಸಕ್ತಿಯನ್ನು ತೋರುತ್ತಿದ್ದರು. ವಾಸ್ತವ ಮಾಹಿತಿ ಮತ್ತು ತಮ್ಮ ಸುತ್ತಲಿನ ಸಾಮಾಜಿಕ ಜೀವನದ ವಿವರಣೆಗಾಗಿ ಅವರಲ್ಲಿದ್ದ ಒಲವೇ ಅವರ ವೈಶಿಷ್ಟ್ಯವಾಗಿತ್ತು ಮತ್ತು ಅವರು ಒಬ್ಬ ಗ್ರಾಮೀಣ ಕಸುಬುಗಾರರಾಗಿ ಕಾರ್ಯ ನಿರ್ವಹಿಸಿದರೇ ಹೊರತು, ಕೇವಲ ಒಬ್ಬ ಪಂಡಿತರಾಗಿ ಅಲ್ಲ.

ಸಾಮಾಜಿಕ ಮಾನವಶಾಸ್ತ್ರದ ಬ್ರಿಟಿಷ್ ಪಂಥದಲ್ಲಿ ಇದ್ದ ಅವರ ಆಳವಾದ ಬೇರುಗಳು ಅವರಲ್ಲಿ ಸ್ವಲ್ಪ ಮಟ್ಟಿಗೆ ಇತಿಹಾಸದಿಂದ ಹೊರತಾದ ದೃಷ್ಟಿಕೋನವನ್ನು ಬೆಳೆಸಲು ಕಾರಣವಾದವು. ಸಾಮಾಜಿಕ ಮಾಹಿತಿ ಮತ್ತು ವಿವರಣೆಗಳಿಗಾಗಿ ಅವರಲ್ಲಿದ್ದ ಅತಿಯಾದ ವ್ಯಾಮೋಹದ ಪರಿಣಾಮವಾಗಿ ಅವರು ಅಭ್ಯಸಿಸಿದ ಭಾರತೀಯ ಸಮಾಜಶಾಸ್ತ್ರದಲ್ಲಿ ಸೈದ್ಧಾಂತಿಕ ಶೂನ್ಯತೆ ಉಂಟಾಯಿತು. ಆದ್ದರಿಂದಲೇ, ಶತಮಾನದಷ್ಟು ಹಳೆಯದಾದ ಭಾರತೀಯ ಸಮಾಜಶಾಸ್ತ್ರವು ಮಹತ್ವಪೂರ್ಣವಾದ ಯಾವುದೇ ಸಾಮಾಜಿಕ ಸಿದ್ಧಾಂತವನ್ನು ಇನ್ನೂ ರೂಪಿಸಬೇಕಾಗಿದೆ.

ಸಮಾಜ ವಿಜ್ಞಾನದ ಗ್ರಂಥಗಳನ್ನು ಭಾರತೀಯ ಭಾಷೆಗಳಲ್ಲಿ ಬರೆಯುವ ಅಂಶ, ನನ್ನ ಮನಸ್ಸಿಗೆ ಬರುವ ಮತ್ತೊಂದು ವಿಚಾರ. ನಮ್ಮ ಅತ್ಯಂತ ಶ್ರೇಷ್ಠ ಸಮಾಜಶಾಸ್ತ್ರಜ್ಞರೂ ಸಹ ತಮ್ಮ ಮಾತೃಭಾಷೆಯಲ್ಲಿ ಬರೆಯುವ ಪ್ರಯತ್ನವನ್ನು ಮಾಡಲಿಲ್ಲ ಏಕೆ? ಕನ್ನಡ ಭಾಷೆಯ ಮೇಲೂ ಗಣನೀಯ ಸಾಮರ್ಥ್ಯವನ್ನು ಹೊಂದಿದ್ದ ಶ್ರೀನಿವಾಸ್ ಅವರು ತಮ್ಮ Remembered Village ಪುಸ್ತಕವನ್ನು ಕನ್ನಡದಲ್ಲಿಯೂ ಬರೆಯ ಬಹುದಿತ್ತು ಎಂದು ಅನಿಸುತ್ತದೆ. ಅವರ ವಿಚಾರಗಳು ಕನ್ನಡದಲ್ಲಿ ಇದ್ದಿದ್ದರೆ, ಅವುಗಳಿಗೆ ತುಂಬಾ ಭಿನ್ನವಾದ ಸ್ವಾಗತವು ಸಿಗಬಹುದಿತ್ತೋ ಏನೋ.

ಡಾ|| ಜಿ. ಎಸ್. ಆರ್. ಕೃಷ್ಣನ್
ಸಮಾಜಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

*ಡಾ|| ಆರ್. ಶಾಮಾಶಾಸ್ತ್ರಿಗಳು ಮೈಸೂರಿನ ಒಬ್ಬ ಉನ್ನತ ಮಟ್ಟದ ವಿದ್ವಾಂಸರು, ಸಂಶೋಧಕರು. ಕೌಟಿಲ್ಯನ 'ಅರ್ಥಶಾಸ್ತ್ರ'ದ ಹಸ್ತಪ್ರತಿಯನ್ನು ಮೊದಲಿಗೆ ಕಂಡುಕೊಂಡು ಪ್ರಕಟಿಸಿದವರು. ಮಹಾರಾಜರೊಮ್ಮೆ ವಿದೇಶಕ್ಕೆ ಹೋಗಿದ್ದರಂತೆ. ಆಗ ಯಾರೋ ವಿದ್ವಾಂಸರು ಅವರನ್ನು ಕೇಳಿದರು : ''ಓ, ನೀವು ಶಾಮಾಶಾಸ್ತ್ರಿಗಳ ಮೈಸೂರಿನವರೇನು ?'' ಹಿಂದಿರುಗಿದ ಮೇಲೆ ಕೂಡಲೆ ಶಾಮಾಶಾಸ್ತ್ರಿ ಗಳನ್ನು ಕರೆಸಿಕೊಂಡು ಮಹಾರಾಜರು ಅವರಿಗೆ ಈ ವಿಷಯ ತಿಳಿಸಿದರಂತೆ. ಶಾಮಾಶಾಸ್ತ್ರಿಗಳಿಗೆ ಸಮಾನರು ಎಂ. ಹಿರಿಯಣ್ಣನವರು. ಅಂತಹ ವಿದ್ವತ್ತಿನ ಪರಂಪರೆಗೆ ಸೇರುವ ಇನ್ನೊಬ್ಬ ಮೈಸೂರಿನ ವ್ಯಕ್ತಿಯೆಂದರೆ ಶ್ರೀನಿವಾಸರು. ಅವರು ಇತ್ತೀಚೆಗೆ ತೀರಿಕೊಂಡುದು ವಿದ್ವತ್ಪ್ರಪಂಚದಲ್ಲಿ ಒಂದು ದೊಡ್ಡ ಕೊರತೆಗೆ ಕಾರಣವಾಯಿತೆನ್ನುವುದು ಕೇವಲ ಔಪಚಾರಿಕವಾದ ಮಾತಲ್ಲ.*

# ಹಲ್ಲುಗಳು ಮತ್ತು ಆರೋಗ್ಯ

ಡಾ॥ ಎಚ್. ಎನ್. ಶಾಮರಾವ್ , ಡಾ॥ ಕೆ. ಎಸ್. ನಾಗೇಶ್, ಡಾ॥ ವೆಂಕಟೇಶ್ ಬಾಬು
ಪರಿಷ್ಕರಣೆ : ಡಾ॥ ಸಿ. ಆರ್. ಚಂದ್ರಶೇಖರ್

**ಬಾ**ಯಿ ನಮ್ಮ ದೇಹದ ಹೆಬ್ಬಾಗಿಲು. ಅದರ ಮೂಲಕವೇ ಅನೇಕ ರೋಗಕಾರಕ ಜೀವಿಗಳೂ, ವಸ್ತುಗಳೂ ನಮ್ಮ ದೇಹದೊಳಕ್ಕೆ ಬರುತ್ತವೆ. ಬಾಯಿ ಆರೋಗ್ಯ ಪೂರ್ಣವಾಗಿದ್ದು, ದೇಹದ ಆರೋಗ್ಯ ರಕ್ಷಕನಾಗಬೇಕಾದರೆ, ಹಲ್ಲುಗಳು ಮತ್ತು ಒಸಡುಗಳು ದೃಢವಾಗಿದ್ದು, ಆರೋಗ್ಯದಿಂದಿರಬೇಕು. ಹಲ್ಲುಗಳಲ್ಲಿ ನಾಲ್ಕು ಬಗೆಗಳಿವೆ.

೧. **ಬಾಚಿಹಲ್ಲು** : ಕೆಳಗೆ ನಾಲ್ಕು, ಮೇಲೆ ನಾಲ್ಕು ಬಾಯಿ ಮುಂದಣ ಭಾಗದ ಎಂಟು ಹಲ್ಲುಗಳು, ಆಹಾರವನ್ನು ಕಚ್ಚಿ, ತುಂಡರಿಸುತ್ತವೆ. ಸಮನಾಗಿದ್ದರೆ, ಮುಖದ ಅಂದವನ್ನು ಹೆಚ್ಚಿಸುತ್ತವೆ.

೨. **ಕೋರೆಹಲ್ಲು** : ಬಾಯಿಯ ಮೂಲೆಯಲ್ಲಿ, ಮೊನಚಾದ ನಾಲ್ಕುಹಲ್ಲುಗಳು. ಇವುಗಳಿಗೆ 'ಕೆನೈನ್ ಟೀತ್' ಎಂದೂ ಹೆಸರು. ನಾಯಿ, ಹುಲಿಗಳಂತಹ ಪ್ರಾಣಿಗಳಲ್ಲಿ ಇವು ಪ್ರಧಾನವಾಗಿ ಕಾಣುತ್ತವೆ.

೩. **ಬದಿಯ ಕೋರೆಯಲ್ಲು** : 'ಪ್ರೀಮೋಲಾರ್ ಟೀತ್' ಎನ್ನಲಾಗುವ ಈ ಹಲ್ಲುಗಳ ಸಂಖ್ಯೆ ಎಂಟು. ಆಹಾರವನ್ನು ಹಿಡಿದು ಅರೆಯುತ್ತವೆ.

೪. **ದವಡೆ ಹಲ್ಲು** : ಇವು ಒಟ್ಟು ಹನ್ನೆರಡು. ಎಲ್ಲಕ್ಕಿಂತ ಹಿಂದಿದ್ದು ಆಹಾರವನ್ನು ಅರೆಯುತ್ತವೆ.

## ಹಲ್ಲಿನ ವಿವಿಧ ಭಾಗಗಳು

ಒಸಡಿನ ಹೊರಗಿನ ಬಿಳಿಯ ಭಾಗಕ್ಕೆ 'ಕ್ರೌನ್' ಎನ್ನುತ್ತಾರೆ. ದವಡೆಯ ಮೂಳೆಯೊಳಗೆ ಅಡಗಿರುವ




ಭಾಗಕ್ಕೆ 'ರೂಟ್'-ಬೇರು ಎನ್ನುತ್ತಾರೆ. ಇವೆರಡರ ನಡುವಿನ ಭಾಗಕ್ಕೆ ಕೊರಳು-'ನೆಕ್' ಎಂದು ಹೆಸರು. ಬೇರು ಮತ್ತು ಮೂಳೆಯ ಮಧ್ಯೆ 'ಪೆರಿಯೋಡಾಂಟಲ್ ಮಂಬ್ರೇನ್' (ತೆಳುಪೊರೆ) ಇದೆ. ಈ ಪೊರೆಯು ಹಲ್ಲುಗಳ ತಾಕಲಾಟಗಳಿಂದ ಉಂಟಾಗುವ ಆಘಾತವನ್ನು ಹೀರಿಕೊಳ್ಳುತ್ತದೆ. ಬೇರಿನ ಕೆಳತುದಿ ಅಥವಾ ಶೃಂಗ (ಎಪೆಕ್ಸ್)ದಲ್ಲಿ ರಂಧ್ರವಿದ್ದು ಅದರ ಮೂಲಕ ರಕ್ತನಾಳಗಳು, ನರತಂತುಗಳು ಹಾಯ್ದು, ಹಲ್ಲಿನ ನಡು ಭಾಗದತ್ತ ಸಾಗುತ್ತವೆ. ಕ್ರೌನ್‌ನ ಮೇಲ್ಪದರ ಅತಿ ಗಟ್ಟಿಯಾಗಿದ್ದು ಅದಕ್ಕೆ 'ಎನಾಮೆಲ್' ಎಂದು ಹೆಸರು. ಇದು ಹಲ್ಲಿನ ಒಳಭಾಗ-'ಡೆಂಟೈನ್'ನ್ನು ರಕ್ಷಿಸುತ್ತದೆ. ಈ ಎನಾಮೆಲ್ ಮತ್ತು ಡೆಂಟೈನ್‌ಗಳು ಸುಣ್ಣ (ಕ್ಯಾಲ್ಸಿಯಂ), ರಂಜಕ (ಫಾಸ್ಪರಸ್)ನಂತಹ ವಸ್ತುಗಳಿಂದ ಮಾಡಲ್ಪಟ್ಟಿವೆ. ಡೆಂಟೈನ್ ಒಳಭಾಗದಲ್ಲಿ ರಕ್ತನಾಳ, ನರತಂತುಗಳ ಸಮುಚ್ಚಯವಿದ್ದು ಇದಕ್ಕೆ 'ತಿರುಳು' ಎನ್ನುತ್ತಾರೆ. ಡೆಂಟೈನ್‌ನಿಂದಲೇ ಮಾಡಲಾಗಿರುವ ಹಲ್ಲಿನ ಬೇರುಗಳನ್ನು ಆವರಿಸಿಕೊಂಡು, 'ಸಿಮೆಂಟಮ್' ಎಂಬ ತೆಳುವಾದ ಪೊರೆಯಿದೆ. ಇದರೊಳಗೆ ಒಂದು ಕಡೆ ಪೆರಿಯೋಡಾಂಟಲ್ ಪೊರೆ ತೂರಿಕೊಂಡಿದ್ದು, ಇನ್ನೊಂದೆಡೆ, ಆಲ್‌ವಿಯೋಲಾರ್ ಮೂಳೆ ಅಥವಾ ದವಡೆ ಮೂಳೆ ಸೇರಿಕೊಂಡಿವೆ. ಎನಾಮೆಲ್ ಬಿಟ್ಟರೆ, ಉಳಿದೆಲ್ಲ ಭಾಗಗಳು, ಕಾಲಕಾಲಕ್ಕೆ ಬದಲಾಗುತ್ತವೆ. ಹಲ್ಲು-ಒಸಡುಗಳಿಗೆ ಬರುವ ಸೋಂಕು ರೋಗಗಳಿಂದ ಇಡೀ ದೇಹದ ಆರೋಗ್ಯ ಸ್ಥಿತಿಯ ಮೇಲೆ ದುಷ್ಪರಿಣಾಮ ಉಂಟಾಗಬಹುದು.

ಹಲ್ಲುಗಳು, ಮಗುವಿಗೆ ಆರೇಳು ತಿಂಗಳುಗಳಾಗಿದ್ದಾಗ ಕಾಣಿಸಿಕೊಳ್ಳುತ್ತವೆ. ಸುಮಾರು ಎರಡೂವರೆ ವರ್ಷಗಳ ಹೊತ್ತಿಗೆ ಎಲ್ಲ ಹಲ್ಲುಗಳೂ ಹುಟ್ಟಿರುತ್ತವೆ. ಇವು ತಾತ್ಕಾಲಿಕ ಹಲ್ಲುಗಳಾಗಿದ್ದು, ಇವಕ್ಕೆ 'ಹಾಲು ಹಲ್ಲುಗಳು' ಎಂಬ ಹೆಸರಿದೆ. ಇವು ಬಿದ್ದು ಹೋಗಿ, ಶಾಶ್ವತ ಹಲ್ಲುಗಳು ಆರನೇ ವರ್ಷದಿಂದ ಹುಟ್ಟಲಾರಂಭಿಸಿ ೨೫ ವರ್ಷಗಳ ಹೊತ್ತಿಗೆ ಪೂರ್ಣಗೊಳ್ಳುತ್ತವೆ.

ಹಲ್ಲುಗಳು ಸಾಮಾನ್ಯವಾಗಿ ಮೂರು ಬಗೆಯ ಕಾರ್ಯಗಳನ್ನು ನಿರ್ವಹಿಸುತ್ತವೆ. ೧. ಜಗಿಯುವಿಕೆ, ೨. ಮುಖದ ಆಕಾರ ಮತ್ತು ಅಂದದ ರಕ್ಷಣೆ ೩. ಮಾತು. ಹಲ್ಲುಗಳು ಬಿದ್ದುಹೋದಾಗ ಬೊಚ್ಚು ಬಾಯಿಯಾಗಿ, ವ್ಯಕ್ತಿಯ ಮಾತಿನ ಉಚ್ಚಾರಣೆ ಏರುಪೇರಾಗುವುದನ್ನು ಕಾಣಬಹುದು.

## ಹುಳುಕು ಹಲ್ಲು

ಹುಳುಕು ಹಲ್ಲು ಅತ್ಯಂತ ಸಾಮಾನ್ಯವಾಗಿ ಬಹುತೇಕ ಜನರಲ್ಲಿ ಕಂಡುಬರುವ ಹಲ್ಲಿನ ತೊಂದರೆ. ಈ ನೋವನ್ನು ಅನುಭವಿಸಿದವರಿಗೇ ಅದರ ತೀವ್ರತೆ ಗೊತ್ತು. ಇದರಿಂದಾಗಿ ಕೆಲಸದ ಸ್ಥಳಗಳಲ್ಲಿ ಉಂಟಾಗುವ ಗೈರು ಹಾಜರಿ ಹಾಗೂ ಅಮೂಲ್ಯವಾದ ಸಮಯದ ನಷ್ಟ ಗಣನೀಯವಾದದ್ದು. ಬೆಕ್ಟೀರಿಯಾದಂತಹ ರೋಗಾಣುಗಳ ಸೋಂಕಿನಿಂದ ಸಣ್ಣಪ್ರಾಯದಲ್ಲೇ ಹಲ್ಲುಗಳ ಕ್ರೌನ್ ಭಾಗವು ನಶಿಸಿ, ಬಿದ್ದು ಹೋಗುತ್ತದೆ. ಪ್ರೌಢವ್ಯಕ್ತಿಗಳಲ್ಲಿ ಈ ರೋಗಾಣುಗಳು ಹಲ್ಲಿನ ಬೇರಿನತ್ತ ಪಸರಿಸಬಹುದು. ಒಸಡಿನ ಮೇಲೂ ದುಷ್ಪರಿಣಾಮವುಂಟಾಗಿ ಒಸಡಿನ ಹಿಂಜರಿತ, ಅದು ಟೊಳ್ಳಾಗುವ ಸಾಧ್ಯತೆ ಇದೆ. 'ಕೇರೀಸ್ ಟೂತ್' ಎಂಬ ಪದವನ್ನು ಕಣರೂಪದ ದಂತಕ್ಷಯ



*ತೀವ್ರರೂಪದ ಕೇರಿಪ್ಸ್-ದಂತಕ್ಷಯ*

(ಮಾಲೆಕ್ಯುಲರ್ ಡಿಕೇ) ಎಂಬರ್ಥದಲ್ಲಿ ಉಪಯೋಗಿಸಲಾಗುತ್ತದೆ.

**ಸಿಹಿ ಪದಾರ್ಥಗಳಿಂದ ಅಪಾಯ** : ಸಿಹಿಮಿಠಾಯಿ, ಟಾಫಿ, ಕೇಕ್, ಬಿಸ್ಕತ್ತು, ಕುಕೀ ಇತ್ಯಾದಿ ಶುದ್ಧೀಕೃತ ಕಾರ್ಬೋಹೈಡ್ರೇಟುಗಳುಳ್ಳ ತಿನಿಸುಗಳು ಹಲ್ಲುಗಳಿಗೆ ಅಂಟಿಕೊಂಡು, ಹುದುಗುವ ಪ್ರಕ್ರಿಯೆಯಿಂದ, ಜೈವಿಕ ಆಮ್ಲ (ಆರ್ಗ್ಯಾನಿಕ್ ಆಸಿಡ್)ಗಳನ್ನು ಉತ್ಪತ್ತಿ ಮಾಡುತ್ತವೆ. ಈ ಆಮ್ಲಗಳು ಹಲ್ಲಿನ ಎನಾಮೆಲನ್ನು ಕರಗಿಸಿ, ಡೆಂಟೈನ್ ಭಾಗ ಹೊರಗೆ ಇಣುಕುವಂತೆ ಮಾಡುತ್ತವೆ. ಪ್ರತಿಯೊಬ್ಬರ ಬಾಯಿಯಲ್ಲಿ, ಅದು ಸ್ವಚ್ಛವಾಗಿದ್ದರೂ ಕೂಡ ಅಸಂಖ್ಯ ಬ್ಯಾಕ್ಟೀರಿಯಾಗಳು ವಾಸವಾಗಿರುತ್ತವೆ. ಕೆಲಬಗೆಯ ಬ್ಯಾಕ್ಟೀರಿಯಾಗಳು ಮತ್ತು ಆಹಾರ ಪದಾರ್ಥಗಳ ನಡುವಿನ ಜೈವಿಕ ಪ್ರಕ್ರಿಯೆಗಳೇ ದಂತಕ್ಷಯಕ್ಕೆ ಕಾರಣ ಎಂದು ರುಜುವಾತಾಗಿದೆ. ಅಂಟು ಅಂಟಾದ ಸಿಹಿ ಪದಾರ್ಥಗಳು ಹಲ್ಲುಗಳಿಗೆ ಅಂಟಿಕೊಂಡು ಹಾನಿಗೆ ಎಡೆಮಾಡಿಕೊಡುತ್ತವೆ.

ಹುಳುಕು ಹಲ್ಲುಗಳಿಗೆ ಪ್ರಮುಖ ಕಾರಣಗಳಿವು : ೧. ಆಮ್ಲ ವಾತಾವರಣವನ್ನು ತಾಳಿಕೊಳ್ಳುವ ಬ್ಯಾಕ್ಟೀರಿಯಾಗಳು. ೨. ರೋಗಕ್ಕೆ ಒಳಾಗಾಗಬಹುದಾದ ಹಲ್ಲಿನ ರಚನೆ. ೩. ಹುದುಗಬಲ್ಲ ಶರ್ಕರ ಪಿಷ್ಟಗಳು ೪. ಸೂಕ್ತವಾದ ರಾಸಾಯನಿಕ ಕಿಣ್ವ, ೫. ಹಲ್ಲಿನ ಮೇಲೆ ಸಾವಯವ ಪೊರೆ (ಆರ್ಗ್ಯಾನಿಕ್ ಫಿಲ್ ಅಥವಾ ಪ್ಲಾಕ್) ಇವೆಲ್ಲ ಒಟ್ಟಾಗಿ

ಒಂದು ಸರಪಳಿಯಂತೆ ಕಾರ್ಯವೆಸಗುತ್ತವೆ. ಈ ಸರಪಳಿಯಲ್ಲಿ ಯಾವುದೇ ಒಂದು ಅಂಶವನ್ನು ನಿವಾರಿಸಿದರೂ, ದಂತಕ್ಷಯವನ್ನು ತಡೆಯಬಹುದು. ದಂತಕ್ಷಯ ಒಮ್ಮೆ ಶುರುವಾದಲ್ಲಿ ಆದಷ್ಟು ಬೇಗ ಚಿಕಿತ್ಸೆ ಮಾಡುವುದು ಅಗತ್ಯ. ಇಲ್ಲವಾದಲ್ಲಿ, ಹುಳುಕು ಹಲ್ಲಿನ ಆಳವಾದ ಪದರುಗಳಿಗೆ ಹರಡಿ, ಕೊನೆಗೆ ಹಲ್ಲಿನ ಬೇರು ಇದ್ದಲ್ಲಿ ಕೀವಿನ ಗಂಟಾಗಬಹುದು. (ಟೂತ್ ಅಬ್ಸೆಸ್).

**ಹುಳುಕು ಹಲ್ಲಿನ ನಿವಾರಣೆ**

ಕನಿಷ್ಠ ದಿನಕ್ಕೆರಡು ಬಾರಿ ಹಲ್ಲುಗಳನ್ನು ತೀರಾ ಗಟ್ಟಿಯಾಗೂ ಅಲ್ಲದ ತೀರಾ ಮೃದುವೂ ಅಲ್ಲದ ಉತ್ತಮ ಬ್ರಶ್‌ನಿಂದ ಉಜ್ಜಿ ಸ್ವಚ್ಛಗೊಳಿಸುವುದರಿಂದ ದಂತಕ್ಷಯವನ್ನು ಬಹುಮಟ್ಟಿಗೆ ತಡೆಯಬಹುದು. ಪ್ರತಿಸಲ ಆಹಾರ ತಿಂದ ಮೇಲೆ, ಬಾಯನ್ನು ನೀರಿನಿಂದ ಚೆನ್ನಾಗಿ ಮುಕ್ಕಳಿಸಬೇಕು. ಅಂತೆಯೇ ದಿನನಿತ್ಯದ ಆಹಾರದ ಬಗೆಗೂ ಎಚ್ಚರವಹಿಸಬೇಕು.

ಒಮ್ಮೆ ಹಲ್ಲಿನಲ್ಲಿ ಹುಳುಕುಂಟಾದರೆ, ಹಲ್ಲು ನೋವು ಬಂದರೆ ತಂಪು ಅಥವಾ ಬಿಸಿ ಆಹಾರ ಹಲ್ಲಿಗೆ ಸೋಕಿದರೆ ಜುಮ್ ಎನ್ನುತ್ತಿದ್ದರೆ ದಂತ ವೈದ್ಯರಿಗೆ ತೋರಿಸಬೇಕು. ರಂಧ್ರವನ್ನು ತುಂಬಿಸಬೇಕು. (ಫಿಲ್ಲಿಂಗ್)

ಕ್ಷಾರೀಯ ಅಥವಾ ಆಮ್ಲೀಯವಲ್ಲದ, ತಟಸ್ಥ ಗುಣವುಳ್ಳ ದಂತಚೂರ್ಣ ಅಥವಾ ಟೂತ್ ಪೇಸ್ಟನ್ನು ಬಳಸುವುದು ಒಳ್ಳೆಯದು. ಮಕ್ಕಳಲ್ಲಿ ಫ್ಲೋರೈಡ್ ದ್ರಾವಣವನ್ನು ಹಲ್ಲುಗಳಿಗೆ ಹಚ್ಚುವುದರಿಂದ ಹುಳುಕು ಹಲ್ಲನ್ನು ತಡೆಯಬಹುದು. ಇದನ್ನು ದಂತವೈದ್ಯರೇ ಮಾಡಬೇಕು. ಪಾಶ್ಚಿಮಾತ್ಯ ದೇಶಗಳಲ್ಲಿ ದಂತಕ್ಷಯವನ್ನು ತಡೆಗಟ್ಟಲು ಈ ವಿಧಾನದ ಬಳಕೆಯಿಂದ ಶೇ. ೪೦ರಷ್ಟು ಯಶಸ್ಸನ್ನು ಸಾಧಿಸಲಾಗಿದೆ. ಈಗೀಗ ಭಾರತದಲ್ಲಿ ಇದನ್ನು ಬಳಸಲಾಗುತ್ತಿದೆ.

ಹಲ್ಲಿನ ಮೇಲೆ ಫ್ಲೋರೈಡ್ ದ್ರಾವಣ ಲೇಪಿಸುವುದಲ್ಲದೆ, ರಾತ್ರಿ ನಿದ್ರಿಸುವಾಗ, ನಿಧಾನವಾಗಿ ಕರಗುವಂತಹ ಫ್ಲೋರೈಡ್ ಮಾತ್ರೆಗಳನ್ನು ಮಕ್ಕಳಿಗೆ ನೀಡುವುದು ಇನ್ನೊಂದು ವಿಧಾನ. ಇದಲ್ಲದೆ ಫಾಸ್ಫೇಟ್ ಇರುವ ಬಾಯೊಳ್ತೆಯುವ ದ್ರವ, ನೀರಿನಲ್ಲಿ ಕರಗುವ ಜೆಲ್ ಮತ್ತು ಚೂಯಿಂಗ್ ಗಮ್‌ನಂತಹ ಪದಾರ್ಥಗಳಲ್ಲೂ ಫ್ಲೋರೈಡ್ ಬೆರೆಸಿ ಬಳಸಬಹುದು. ಇತ್ತೀಚಿನ ನವೀನ ತಂತ್ರವೆಂದರೆ, ಪ್ಲಾಸ್ಟಿಕ್ ವಿನ್ಯೆಲ್ ಮೌತ್ ಪೀಸಿನ ಬಳಕೆ. ಬಾಯಲ್ಲಿ ಇರಿಸಲಾಗುವ ಮೌತ್ ಪೀಸ್, ಶೇ. ೦.೫ ಫ್ಲೋರೈಡ್ ಇರುವ, ನೀರಿನಲ್ಲಿ ಕರಗುವ ಜೆಲ್‌ನಿಂದ ಲೇಪಿಸಲ್ಪಟ್ಟಿರುತ್ತದೆ. ಈ ವಿಧಾನವನ್ನು ಶಾಲಾ ದಂತ ಸ್ವಾಸ್ಥ್ಯದ ಕಾರ್ಯಕ್ರಮದಲ್ಲಿ ಅಳವಡಿಸಬಹುದು.

ದಂತಕ್ಷಯದ ಹಾವಳಿ ವಿಪರೀತ ಇರುವ ಕೆಲವು ದೇಶಗಳಲ್ಲಿ ನೀರಿಗೆ ಫ್ಲೋರೈಡ್ ಸೇರಿಸಲಾಗುತ್ತದೆ. ಇದು ನಮ್ಮ ದೇಶದಲ್ಲಿ ಅಗತ್ಯವಿಲ್ಲ.

**ಒಸಡಿನ ಸಮಸ್ಯೆಗಳು**

ನಮ್ಮ ದೇಹದಲ್ಲಿ ಹಲ್ಲುಗಳಷ್ಟೇ ಪ್ರಮುಖ ಭಾಗ ಒಸಡು. ಹಲ್ಲುಗಳ ಅಳಿವು ಉಳಿವು ಒಸಡಿನ ಆರೋಗ್ಯದ





*ಒಸಡಿನ ಸಮಸ್ಯೆಗಳು*

ಮೇಲೆ ಅವಲಂಬಿತವಾಗಿರುತ್ತದೆ. ಒಸಡಿನ ರೋಗ (ಪೆರಿಯೋಡಾಂಟಲ್ ಡಿಸೀಸ್) ನಮ್ಮ ದೇಶದಲ್ಲಿ ಸರ್ವೇಸಾಮಾನ್ಯ. ಹದಿನಾರು ವರ್ಷ ಪ್ರಾಯಕ್ಕೆ, ವ್ಯಕ್ತಿಗಳಲ್ಲಿ ಈ ರೋಗ ಗೋಚರಿಸಿ, ಹಲ್ಲುಗಳು ಬಿದ್ದು ಹೋಗಲು ಏಕೈಕ ಕಾರಣವಾಗುತ್ತವೆಂದು ತಿಳಿದುಬರುತ್ತದೆ. ದುರದೃಷ್ಟದಿಂದ ಈಗೀಗ ಮಕ್ಕಳಲ್ಲೂ ಒಸಡಿನ ರೋಗ ಹೆಚ್ಚುತ್ತಿರುವುದು ಕಂಡುಬರುತ್ತದೆ. ಈ ರೋಗದ ಮುಂದುವರೆದ ಸ್ಥಿತಿಯಲ್ಲಿ 'ಪಯೋರಿಯಾ' ಎನ್ನುತ್ತಾರೆ.

**ಜಿಂಜಿವೈಟಿಸ್**

ಒಸಡಿನ ಬದಿಯಲ್ಲಿ ಈ ರೋಗ ಆರಂಭವಾಗುತ್ತದೆ. ಶುರುವಿನಲ್ಲಿ ಒಸಡಿನ ಬಾವುಂಟಾಗುತ್ತದೆ. ಕ್ರಮೇಣ ಇದು ಪಯೋರಿಯಾ ಅಥವಾ ಪೆರಿಯೋಡಾಂಟೈಸ್ ಆಗಿ ಪರಿವರ್ತಿತವಾಗುತ್ತದೆ. ಈ ರೋಗ ಸ್ಥಿತಿಯಲ್ಲಿ ಯಾವುದೇ ನೋವುಂಟಾಗುವುದಿಲ್ಲವಾಗಿ ವ್ಯಕ್ತಿ ಇದನ್ನು ಉದಾಸೀನ ಮಾಡುತ್ತಾನೆ. ಈ ರೋಗದ ಮೂಲ ಕಾರಣ ಬಾಯಿಯ ಸ್ವಚ್ಛತೆಯ ಅಭಾವ. ಆಹಾರ ಸೇವಿಸಿದ ನಂತರ ಬಾಯಿ ಮುಕ್ಕಳಿಸದೇ ಇರುವುದರಿಂದ, ಆಹಾರದ ಕಣಗಳು ಹಲ್ಲುಗಳ ಬುಡದಲ್ಲಿ ಶೇಖರಗೊಳ್ಳುತ್ತವೆ. ಇವು ಸೂಕ್ಷ್ಮಾಣು ಜೀವಿಗಳೊಂದಿಗೆ ಹಾಗೂ ಜೊಲ್ಲಿನ ಲವಣ ಪದಾರ್ಥಗಳೊಂದಿಗೆ ಬೆರೆತು 'ಕ್ಯಾಲ್‌ಕುಲಸ್' ಅಥವಾ 'ಟಾರ್ಟಾರ್' ಎಂಬ ವಸ್ತುವಾಗಿ ರೂಪುಗೊಳ್ಳುತ್ತವೆ. ದಂತ ವೈದ್ಯರು ಈ ಟಾರ್ಟಾರನ್ನು ಕೆರೆದು ತೆಗೆದು ಬಾಯಿಯನ್ನು ಶುಭ್ರಗೊಳಿಸಿ, ಜಿಂಜಿವೈಟಿಸ್‌ಗೆ ಚಿಕಿತ್ಸೆ ಮಾಡಬಲ್ಲರು. ಜಿಂಜಿವೈಟಿಸ್ ಆದಾಗ ಒಸಡು ಕೆಂಪಾಗಿರುತ್ತದೆ. ಮೃದುವಾಗಿರುತ್ತದೆ. ಬ್ರಶ್‌ನಿಂದ ಹಲ್ಲುಜ್ಜುವಾಗ ಒಸರುತ್ತದೆ. ಆರಂಭದಲ್ಲಿ ಇದು ಒಸಡಿನ ಬದಿಗಳಿಗೆ ಸೀಮಿತವಾಗಿರುತ್ತದೆ. ಅಲಕ್ಷಿಸಿದರೆ, ಒಳಗಿನ ಆಳದ ಊತಕಗಳಿಗೆ ಹಬ್ಬುತ್ತದೆ. ಪೌಷ್ಟಿಕಾಂಶಗಳ ಕೊರತೆ, ಹಾರ್ಮೋನ್‌ಗಳ ವ್ಯತ್ಯಯ, ದೇಹದ ಸಾಮರ್ಥ್ಯವನ್ನು ಕುಗ್ಗಿಸುವ ಇತರ ಕಾಯಿಲೆಗಳು ಜಿಂಜಿವೈಟಿಸ್‌ನ ತೀವ್ರತೆಯನ್ನು, ಹರಡುವಿಕೆಯನ್ನೂ ಹೆಚ್ಚಿಸುತ್ತವೆ. ಸಿಹಿ ಮೂತ್ರರೋಗ, ದಡಾರ ಮತ್ತು ಇತರ ಜ್ವರಗಳಲ್ಲಿ ಜಿಂಜಿವೈಟಿಸ್ ತಲೆದೋರಬಹುದು. ಆ ಕಾಯಿಲೆಗಳನ್ನು ಹತೋಟಿಗೆ ತಂದರೆ, ಜಿಂಜಿವೈಟಿಸ್ ಕೂಡ ತಗ್ಗುತ್ತದೆ.

**ಪಯೋರಿಯಾ**

ದಂತ ನೈರ್ಮಲ್ಯದ ಅಭಾವ ಮತ್ತು ಜಿಂಜಿವೈಟಿಸನ್ನು ಉದಾಸೀನ ಮಾಡುವುದರಿಂದ ಈ ಪಯೋರಿಯಾ ಕಾಣಿಸಿಕೊಳ್ಳುತ್ತದೆ. ಒಸಡಿನೊಳಗೆ ಆಳವಾದ ಹೊಂಡ 'ಪಾಕೆಟ್'ಗಳಾಗುತ್ತವೆ. ಈ ಹೊಂಡದಲ್ಲಿ ಆಹಾರದ ಕಣಗಳು, ಸೂಕ್ಷ್ಮಾಣು ಜೀವಿಗಳು ಸೇರಿಕೊಂಡು ಹಲ್ಲಿಗೆ ಆಧಾರ ನೀಡುವ ಮೂಳೆಯ ಮೇಲೆ ಆಕ್ರಮಣ ಮಾಡಿ ನಿಧಾನವಾಗಿ ಅದನ್ನು ನಾಶಗೊಳಿಸುತ್ತವೆ. ಈ ಪಾಕೆಟ್‌ಗಳ ಮುಖ್ಯ ಲಕ್ಷಣಗಳೆಂದರೆ, ಕೀವು ಒಸಡನ್ನು ಅದುಮಿದರೆ, ಉಜ್ಜಿದರೆ ಕೀವು ರಕ್ತ ಹೊರಬರುತ್ತದೆ. ದುರ್ವಾಸನೆ ಇರುತ್ತದೆ. ಪಯೋರಿಯಾ ಒಂದು ಗಂಭೀರ ರೋಗ. ಇದರ ದುಷ್ಪ್ರಭಾವ ಹಲ್ಲುಗಳ ಮೇಲಷ್ಟೇ ಅಲ್ಲ, ವ್ಯಕ್ತಿಯ ಇಡೀ ದೇಹಾರೋಗ್ಯದ ಮೇಲೆ ಆಗುತ್ತದೆ. ಇತರ ಕಾಯಿಲೆಗಳು, ಸೋಂಕುಗಳು ನಮ್ಮ ಮೇಲೆ ಧಾಳಿ ಮಾಡಲು ಇದು ಪ್ರೇರಣೆ ನೀಡುತ್ತದೆ. ಸೋಂಕು, ರಕ್ತನಾಳಗಳ ಮೂಲಕ, ದೇಹದ ಯಾವುದೇ ಮೂಲೆಯನ್ನು ತಲುಪಬಹುದು. ಪಯೋರಿಯಾ ಪಾಕೆಟ್ಟುಗಳು ರೋಗಾಣುಗಳ ಭದ್ರ ನೆಲೆಯಾಗುತ್ತದೆ. ಪಯೋರಿಯಾವನ್ನು ಗುಣಮಾಡುವಂತಹ ಅನೇಕ ವಿಧಾನಗಳಿವೆ.

**ಪೆರಿಯೊಡೊಂಟೋಸಿಸ್**

ಹಲ್ಲು ಹಾಳಾಗುತ್ತಾ ಬರುವ ಈ ಸ್ಥಿತಿ ಹೆಚ್ಚಾಗಿ ೧೬ರಿಂದ ೨೫ ವರ್ಷ ಪ್ರಾಯದ ತರುಣಿಯರಲ್ಲಿ ಗಮನಾರ್ಹವಾಗಿ ಕಂಡುಬರುತ್ತದೆ. ಇದರ ಲಕ್ಷಣಗಳೆಂದರೆ, ಮುಂದಿನ ಹಾಗೂ ಹಿಂದಿನ ಕೆಲವು ಹಲ್ಲುಗಳು ವಾಯಿದೆಗಿಂತ ಮೊದಲೇ ಸಡಿಲಗೊಳ್ಳುವುದು. ತೋರಿಕೆಗೆ ಹಲ್ಲುಗಳು ಆರೋಗ್ಯ ಪೂರ್ಣವಾಗಿಯೇ ಕಂಡರೂ ಆಳದೊಳಗಿನ ಮೂಳೆಗಳಲ್ಲಿ ವ್ಯತ್ಯಾಸ ಉಂಟಾಗುತ್ತಿದ್ದು, ಹಲ್ಲುಗಳ ಮಧ್ಯೆ ಸಂದುಗಳು ಏರ್ಪಡುತ್ತವೆ. ಹಲ್ಲುಗಳು ಹೊರಚಾಚಲು ತೊಡಗುತ್ತವೆ. ಪ್ರಾರಂಭದಲ್ಲೇ ದಂತ ವೈದ್ಯರನ್ನು ಕಂಡು ಚಿಕಿತ್ಸೆ ಪಡೆಯಬೇಕು.

**ಸೊಟ್ಟ ಹಲ್ಲುಗಳಿಗೆ ಚಿಕಿತ್ಸೆ**

ಸೊಟ್ಟ ಹಲ್ಲುಗಳು ಯುವ ಜನರಲ್ಲಿಯೇ ಹೆಚ್ಚು. ಅದರಿಂದ ಅವರು ಚಿಂತಾಕ್ರಾಂತರಾಗುತ್ತಾರೆ. ಕೀಳರಿಮೆ ಯಿಂದ ಬಳಲುತ್ತಾರೆ. ಸೊಟ್ಟ ಹಲ್ಲುಗಳಿಂದ ಆಹಾರವನ್ನು ಅರೆಯುವ ಪ್ರಕ್ರಿಯೆಗೂ ತೊಂದರೆಯಾಗುತ್ತದೆ. ಹಲ್ಲುಗಳನ್ನು ಸರಿಯಾಗಿ ಸ್ವಚ್ಛಮಾಡಲಾಗದೇ ಹುಳುಕು ಒಸಡಿನ ರೋಗಗಳೂ ಬರುತ್ತವೆ. ಸೊಟ್ಟ ಹಲ್ಲುಗಳನ್ನು ಎಳೆಯ ಪ್ರಾಯದಲ್ಲೇ ಸರಿಪಡಿಸಬೇಕು. ವಿಶೇಷ ತಜ್ಞರಾದ ಆರ್ಥೊಡಾಂಟಿಸ್ಟ್‌ರನ್ನು ಕಾಣಬೇಕು. ಸೊಟ್ಟ ಹಲ್ಲುಗಳಿಗೆ ಕಾರಣಗಳು :

೧. ಆನುವಂಶಿಕ
೨. ಹುಟ್ಟುವಾಗ ಒಸಡು, ದವಡೆಗೆ ಆದ ಆಘಾತಗಳು
೩. ಪೌಷ್ಟಿಕಾಂಶಗಳ ಕೊರತೆ
೪. ದುರಭ್ಯಾಸಗಳು : ಬೆರಳು ಚೀಪುವಿಕೆ, ಹಲ್ಲುಗಳನ್ನು ನಾಲಿಗೆಯಿಂದೊತ್ತುವುದು, ಬಾಯಲ್ಲಿ ಉಸಿರಾಡುವುದು, ಹಲ್ಲು ಕಡಿಯುವುದು, ಕೈಗಳನ್ನು ಮುಖದಡಿಯಲ್ಲಿರಿಸಿಕೊಂಡು ಮಲಗುವುದು.
೫. ಹಲ್ಲುಗಳ ಸಂಖ್ಯೆ ಹೆಚ್ಚಿರುವುದು/ಕಡಿಮೆಯಿರುವುದು.
೬. ಹಲ್ಲು ಬೀಳುವ ಸಮಯಕ್ಕಿಂತ ಮೊದಲೇ ಬೀಳುವುದು.
೭. ಹುಳುಕು ಅಥವಾ ಏಟಿನಿಂದ ಹಲ್ಲು ನಾಶವಾಗುವುದು.
೮. ಕಾಯಿಲೆಗಳು
೯. ಹಾರ್ಮೋನುಗಳ ಏರುಪೇರು

ಆರು ವರ್ಷಗಳಿಂದ ಹನ್ನೆರಡು ವರ್ಷ ವಯಸ್ಸಿನ ಅವಧಿಯಲ್ಲಿ ಸೊಟ್ಟ ಹಲ್ಲುಗಳನ್ನು ರಿಪೇರಿ ಮಾಡಿಸಬೇಕು. ಸರಿಪಡಿಸಲು ೧೮ರಿಂದ ೨೪ ತಿಂಗಳುಗಳ ಸಮಯ ಬೇಕಾಗುತ್ತದೆ.

**ಕೃತಕ ದಂತಪಂಕ್ತಿಗಳು**

೪೫ ವಯಸ್ಸಿನಲ್ಲಿ ಅಥವಾ ಅದಕ್ಕೂ ಮುಂಚೆ, ಹಲ್ಲುಗಳು ಬಿದ್ದು ಹೋಗಿದ್ದರೆ ಅಥವಾ ಹಲ್ಲುಗಳೇ ಇಲ್ಲವಾದರೆ ಕೃತಕ ಹಲ್ಲುಗಳನ್ನು ಕಟ್ಟಬೇಕಾಗುತ್ತದೆ. ತೆಗೆದುಹಾಕುವ ಅಥವಾ ಅಲ್ಲೇ ಶಾಶ್ವತವಾಗಿರುವಂತೆ ಕಟ್ಟಬಹುದು. ಹೊಸ ಕೃತಕ ಹಲ್ಲುಗಳಿಗೆ ಹೊಂದಿಕೊಳ್ಳಲು ಸ್ವಲ್ಪ ಕಾಲ ಬೇಕು.

**ತಪ್ಪು ನಂಬಿಕೆಗಳು**

೧. ಮಗು ಹುಟ್ಟಿದಾಗಲೇ ಹಲ್ಲಿದ್ದರೆ, ಅಶುಭ. ಹಾಗೇನಿಲ್ಲ. ತಾಯಿಯ ಮೊಲೆ ಚೀಪುವಾಗ ತಾಯಿಗೆ ತೊಂದರೆಯಾಗುವುದರಿಂದ ಅದನ್ನು ತೆಗೆಯಲು ವೈದ್ಯರು ಸೂಚಿಸುತ್ತಾರೆ.
೨. ಹಾಲು ಹಲ್ಲು ಬಿದ್ದಾಗ, ಕೀಳಿಸಿದಾಗ, ಅದನ್ನು ಸಗಣಿ ಉಂಡೆಯಲ್ಲಿಟ್ಟು ಮನೆಯ ಮೇಲೆ ಎಸೆದರೆ, ಶಾಶ್ವತ ಹಲ್ಲು ಬೇಗ- ಚೆನ್ನಾಗಿ ಹುಟ್ಟುತ್ತದೆ. ಇದಕ್ಕೆ ಯಾವ ಆಧಾರವೂ ಇಲ್ಲ.
೩. ಬುದ್ಧಿ ಹಲ್ಲು (ವಿಸ್‌ಡಮ್ ಟೂತ್) : ೧೮ರಿಂದ ೨೫ನೇ ವರ್ಷ ವಯಸ್ಸಿನಲ್ಲಿ ಕಾಣಿಸಿಕೊಳ್ಳುವ ಹಲ್ಲಿಗೂ, ಬುದ್ಧಿಗೂ ಯಾವ ಸಂಬಂಧವೂ ಇಲ್ಲ.
೪. ಹಲ್ಲು ಕೀಳಿಸಿದರೆ ಕಣ್ಣಿಗೆ ಹಾನಿ : ಇದು ತಪ್ಪು ನಂಬಿಕೆ.
೫. ಕೋರೆ ಹಲ್ಲಿನ ಮೇಲೆ ಹುಟ್ಟುವ ಹಲ್ಲು ಅದೃಷ್ಟ ಸೂಚಕ. ಯಾವ ಆಧಾರವಿಲ್ಲ.
೬. ಗರ್ಭಿಣಿಯರಿಗೆ ಹಲ್ಲು ಕೀಳಿಸಿದರೆ ಗರ್ಭಸ್ಥ ಶಿಶುವಿಗೆ ತೊಂದರೆ ಎಂದು ನಂಬಲಾಗುತ್ತದೆ. ಯಾವ ತೊಂದರೆಯೂ ಇಲ್ಲ.
೭. ಹಲ್ಲುಗಳನ್ನು ಹೆಚ್ಚು ಸ್ವಚ್ಛ ಮಾಡಿದರೆ, ಹೆಚ್ಚು ಬ್ರಶ್ ಮಾಡಿದರೆ, ಅವು ಸಡಿಲವಾಗುತ್ತವೆ. ಸಂದು ಬಿಡುತ್ತವೆ. ಈ ರೀತಿ ಏನೂ ಆಗುವುದಿಲ್ಲ. ಪ್ರತಿಸಲ ಆಹಾರ ತಿಂದ ಮೇಲೆ ಕನಿಷ್ಠ ದಿನಕ್ಕೆರಡು ಸಲ ಹಲ್ಲುಗಳನ್ನು ಸ್ವಚ್ಛ ಮಾಡಲೇಬೇಕು.

ಹಲ್ಲುಗಳ ರಕ್ಷಣೆಯನ್ನು ನೀವು ಮಾಡಿ,
ಅವು ನಿಮ್ಮ ಆರೋಗ್ಯದ ರಕ್ಷಣೆ ಮಾಡುತ್ತವೆ.

# ಗೋಪಾಲನನ್ನರಸುವ ಗೋವು

ಡಾ|| ಬಿ. ಎಸ್. ಶೈಲಜಾ




ರಾತ್ರಿಯ ಶುಭ್ರ ಆಕಾಶದಲ್ಲಿ ನೆತ್ತಿಯ ಮೇಲೆ ಕಂಗೊಳಿಸುವುವು ಗುರು ಮತ್ತು ಶನಿ ಗ್ರಹಗಳು. ಅವುಗಳ ಸಮೀಪವೇ ಕಾಣುವ ಇಂಗ್ಲಿಷ್‌ನ V ಆಕಾರದ ನಕ್ಷತ್ರಗಳ ಗುಂಪು ನಿಮ್ಮನ್ನು ಆಕರ್ಷಿಸುವುದು. ಹೈಯಡೆಸ್ ಎಂದು ಈ ಗುಂಪಿಗೆ ಹೆಸರು. ಇದರ ಪಕ್ಕಕ್ಕೇ ಕಾಣುವ ಪ್ಲೆಯಡಿಸ್ ಅಥವಾ ಕೃತ್ತಿಕಾ ನಕ್ಷತ್ರ ಸಮೂಹವೂ ಇದೇ ರಾಶಿಗೆ ಸೇರಿದೆ. ರಾಶಿಯ ಹೆಸರು ಟಾರಸ್; ಅಂದರೆ ಗೂಳಿ, ಬಸವ, ವೃಷಭ. ಈ ಯಾವುದೇ ಹೆಸರಿಗೆ ಮೂಲ V ಆಕಾರದ ಕೊಂಬು. ಆದ್ದರಿಂದ ಇದನ್ನು ಹಸು, ಗೋವು, ಧೇನು ಎಂದೂ ಕರೆಯಬಹುದು. ಇದಕ್ಕೆ ಆಸುಪಾಸಿನಲ್ಲಿರುವ ಆರಿಗ (ಪಂಚಕೋಣಾಕೃತಿಯ ಗುಂಪು)ವನ್ನು ವಿಜಯಸಾರಥಿ ಎಂದೂ, ಅದರ ಪಕ್ಕದ ಪರ್ಸಿಯುಸ್‌ಅನ್ನು ಪಾರ್ಥ ಎಂದು ಕರೆದರು ಡಾ|| ಆರ್. ಎಲ್. ನರಸಿಂಹಯ್ಯನವರು. ಕೊಳಲಿನ ಧ್ವನಿಗಾಗಿ ಕಾಯುತ್ತಿರುವ ಧೇನುವನ್ನು ಇಲ್ಲಿ ಕಲ್ಪಿಸಿಕೊಳ್ಳಬಹುದು. ಆದರೆ ಹಾಗಾಗದು - ಏಕೆಂದರೆ ಆರಿಗ ಎಂಬುದು ಐರೋಪ್ಯ ಹೆಸರು. ಆತ ದೇವತೆಗಳಿಗೆ ಮೊದಲನೆಯ ರಥವನ್ನು ಆವಿಷ್ಕರಿಸಿಕೊಟ್ಟವನಂತೆ. ಟಾರಸ್ ಎಂಬುದು ವೃಷಭವೇ ಆಗುವುದು ಇದೇ ಕಾರಣಕ್ಕೆ.

ಹೆಸರು ಏನಾದರೇನು? ಆಕಾಶದಲ್ಲಿ ಇವನ್ನು ಗುರುತಿಸಲು ಕಲಿತರೆ ಸಾಕು. ಪೂರ್ವದಲ್ಲಿ ಮಿಥುನ-ಕಟಕಗಳು, ಪಶ್ಚಿಮದಲ್ಲಿ ಕುಂಭ, ಮೀನಗಳು ಕಾಣುತ್ತವೆ. ದಕ್ಷಿಣಕ್ಕೆ ತಿರುಗಿದರೆ, ಗುರು-ಶನಿಯ ಪ್ರತಿಸ್ಪರ್ಧಿಗಳಂತೆ ಮಿನುಗುತ್ತವೆ, ಸಿರಿಯಸ್ (ಲುಬ್ಧಕ) ಮತ್ತು ಕನೋಪಸ್ (ಅಗಸ್ತ್ಯ). ಉತ್ತರದಲ್ಲಿಯ ರಾಜಮನೆತನ ಪಶ್ಚಿಮಕ್ಕೆ ಸರಿದಿರುತ್ತದೆ.

ನಮ್ಮ ಮಾರ್ಗದರ್ಶಿ ಚಂದ್ರ ಜನವರಿ 3ರಂದು ಬೆಳಿಗ್ಗೆ ಶುಕ್ರಗ್ರಹದ ಸಮೀಪ ಕಾಣುತ್ತದೆ. ಅದರ ಆಸುಪಾಸಿನಲ್ಲೇ ಇರುವ ವೆಸ್ಟಾ ಎಂಬ ಕ್ಷುದ್ರ ಗ್ರಹವನ್ನು ಆಚ್ಛಾದಿಸುತ್ತದೆ (ಮರೆಮಾಚುತ್ತದೆ). ಈ ಅಪೂರ್ವ ನೋಟ ಅಮೆರಿಕನ್ನರಿಗೆ ಲಭ್ಯ. 7ರಂದು ಬೆಳಗಿನ 5.30ಕ್ಕೆ ಅಮಾವಾಸ್ಯೆ. ಅಂದು ಬೆಳಗ್ಗೆ ಶುಕ್ರನನ್ನು ಕೆಂಪುನಕ್ಷತ್ರ ಜ್ಯೇಷ್ಠಾದ ಬಳಿ ನೋಡಬಹುದು.

8ರಂದು ಸಂಜೆ ಚಂದ್ರ ನೆಪ್ಚೂನ್ ಗ್ರಹವನ್ನು ಆಚ್ಛಾದಿಸುತ್ತದೆ. ಆದರೆ ದಿಗಂತದ ಅಂಚಿನಲ್ಲಿರುವುದರಿಂದ ನೋಡಲು ಕಷ್ಟವಾಗಬಹುದು. 9ರಂದು ಯುರೇನಸ್‌ಅನ್ನು ಆಚ್ಛಾದಿಸುತ್ತದೆ. ಇದು ನಮ್ಮ ಹಗಲಿನಲ್ಲಿ ನಡೆಯುವ ಘಟನೆಯಾದ್ದರಿಂದ ರಾತ್ರಿ ಅವೆರಡೂ ಪಕ್ಕಪಕ್ಕದಲ್ಲಿರುವುದನ್ನು ಮಾತ್ರ ನೋಡಬಹುದು. (ದುರ್ಬೀನಿನ ಸಹಾಯ ಬೇಕು). ಇದೇ ರೀತಿ 10ರಂದು ಚಂದ್ರನ ಪಕ್ಕದಲ್ಲಿ ಕಾಣುವ ಕೆಂಪುಗ್ರಹವೇ ಮಂಗಳ. ಈ ಆಚ್ಛಾದನೆ ನಡೆಯುವುದು ಮಧ್ಯರಾತ್ರಿ. ನಮ್ಮ ದಿಗಂತದಿಂದ ಚಂದ್ರ ಅಷ್ಟು ಹೊತ್ತಿಗೆ ಮುಳುಗಿಹೋಗಿರುತ್ತದೆ.

14ರಂದು ಚಂದ್ರ ಗುರುಗ್ರಹದ ಸಮೀಪ, 15ರಂದು ಶನಿಗ್ರಹದ ಸಮೀಪ ಕಾಣುತ್ತದೆ. 17ರಂದು ಚಂದ್ರ ರೋಹಿಣಿಯ ಪಕ್ಕದಲ್ಲೇ ಕಾಣುತ್ತದೆ. ಮಧ್ಯರಾತ್ರಿಯ ಆಚ್ಛಾದನೆ ನಮಗೆ ಕಾಣದು.

21ರಂದು ಬೆಳಿಗ್ಗೆ 10.30ಕ್ಕೆ ಹುಣ್ಣಿಮೆ; ಚಂದ್ರಗ್ರಹಣವೂ ಉಂಟು. ಆದರೆ ಗ್ರಹಣದ ನೋಟ ನಮಗಿಲ್ಲ.

ಛಳಿಗಾಲದ ಮೃದು ಬಿಸಿಲು ಚರ್ಮವನ್ನು ಒಣಗಿಸುತ್ತದೆ. ಈ ಬಿಸಿಲು ಕಡಿಮೆ ಆಗಲು ಕಾರಣವೇನು? ಅನೇಕರು ಇದಕ್ಕೆ ಭೂಮಿಯ ದೀರ್ಘವೃತ್ತದ ಕಕ್ಷೆಯೇ ಕಾರಣ ಎಂದುಕೊಳ್ಳುತ್ತಾರೆ. ಅಂದರೆ ಭೂಮಿಯಿಂದ ಸೂರ್ಯನ ದೂರ ಕನಿಷ್ಠವಾದಾಗ ಬೇಸಿಗೆ; ಗರಿಷ್ಠವಾದಾಗ ಛಳಿಗಾಲ ಎಂದು. ಆದರೆ ವಾಸ್ತವವಾಗಿ ಜನವರಿ 3ರಂದು ಸೂರ್ಯ ಭೂಮಿ ದೂರ ಕನಿಷ್ಠ ಮುಟ್ಟುತ್ತದೆ. (1,474 ಮಿಲಿಯನ್ ಕಿ.ಮೀ.ಗಳು) ಶುಭ್ರ ನೀಲಿ ಆಕಾಶದಲ್ಲಿ ಒಂದೆರಡು ಉಲ್ಕೆಗಳು ಕಾಣುವ ಸಂಭವವಿದೆ. ಮೊದಲ ವಾರದಲ್ಲಿ ಉಂಟಾಗುವ ವೃಷ್ಟಿ 3-4ರಂದು ಗರಿಷ್ಠ ಮುಟ್ಟುತ್ತದೆ. ಕ್ವಾಡ್ರಾಂಟಿಡ್ಸ್ ಎಂಬ ಈ ಹೆಸರು ನೂರು ವರ್ಷಗಳಿಗೂ ಹಿಂದೆ ಚಾಲ್ತಿಯಲ್ಲಿದ್ದ ನಕ್ಷತ್ರ ಪುಂಜದ ಹೆಸರಿನಿಂದ ಬಂದದ್ದು. ಇಂದು ಇದು ಹರ್ಕ್ಯುಲಿಸ್ ಎಂಬ ನಕ್ಷತ್ರ ಪುಂಜಕ್ಕೆ (ಸೆಪ್ಟೆಂಬರ್ ತಿಂಗಳಲ್ಲಿ ಹನುಮಂತ ನಾಗಿದ್ದುದು ನೆನಪಿದೆಯೇ?) ಸೇರ್ಪಡೆಯಾಗಿದೆ. ಬೆಳಗಿನ ಝಾವ ಈಶಾನ್ಯ ದಿಕ್ಕಿನಲ್ಲಿ ಉದಯಿಸುವ ಈ ಪುಂಜದಿಂದ ಉಲ್ಕೆಗಳು ಹೊರಟ ಹಾಗೆ ಕಾಣುವುವು. ಇದನ್ನು ಸೃಷ್ಟಿಸುವ ಧೂಮಕೇತು ಯಾವುದು ಎಂದು ಪತ್ತೆಯಾಗಿಲ್ಲ.



# ಬದಲಾಗುತ್ತಿರುವ ಮಾಸ್ಕೋ

ಡಾ|| ಆರ್. ಜಿ. ಗಿಡದ ಹುಬ್ಬಳ್ಳಿ

60ರ ದಶಕದಲ್ಲಿ ನಾನು ಐದು ವರ್ಷ ಮಾಸ್ಕೋದಲ್ಲಿ ಅಭ್ಯಾಸ ಮಾಡಿದ್ದೆ. ಅನಂತರ ಅನೇಕ ಬಾರಿ ನಾನು ಅಲ್ಲಿಗೆ ಹೋಗಿದ್ದೇನೆ. ಮಾಸ್ಕೋ ನನಗೇನು ಹೊಸತಲ್ಲ. ಸೋವಿಯತ್ ರಷ್ಯಾ ಬಿರುಕುಗೊಂಡ ಏಳು ವರ್ಷಗಳ ಅನಂತರ ಅಲ್ಲಿಗೆ ಹೋದಾಗ ಅಲ್ಲಿನ ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಗಳು ಅತೀವವಾಗಿ ಬದಲಾಗಿವೆ, ಅಲ್ಲಿ ಅನೇಕ ವೈರುಧ್ಯಗಳಿವೆ ಎಂಬುದು ಗೊತ್ತಾಯಿತು. ನಾನಲ್ಲಿ ಗಮನಿಸಿದ ಅಂಶಗಳನ್ನು ಹಂಚಿಕೊಳ್ಳಬಯಸುತ್ತೇನೆ.

## ನಿರುದ್ಯೋಗ ಸಮಸ್ಯೆ

ಹಳೆಯ ಸೋವಿಯತ್ ಒಕ್ಕೂಟದಲ್ಲಿ ಜನತೆಗೆ ನೀಡಿದ್ದ ಸಾಮಾಜಿಕ ಭದ್ರತೆ ಈಗ ಕಾಣೆಯಾಗಿದೆ. ಆಗ ಎಲ್ಲರಿಗೂ ಉದ್ಯೋಗವಿತ್ತು. ಈಗ ನಿರುದ್ಯೋಗ ಸಮಸ್ಯೆ ದಿನೇ ದಿನೇ ಹೆಚ್ಚುತ್ತಿದೆ. ಹದಿನೈದರಿಂದ ಇಪ್ಪತ್ತು ವರ್ಷ ಸೇವೆ ಸಲ್ಲಿಸಿದ ಕಾರ್ಮಿಕರು ಇಂದು ಮೂಲೆ ಪಾಲಾಗಿದ್ದಾರೆ. ಕೆಲವರು ಅರೆಕಾಲಿಕರಾಗಿದ್ದಾರೆ. ಅವರಿಗೆ ಈಗ ಸಿಗುವ ಸಂಬಳವೂ ಅಷ್ಟಕಷ್ಟೇ. ಮಹಿಳೆಯರ ಸ್ಥಿತಿಯಂತೂ ಮತ್ತಷ್ಟು ಹೀನಾಯವಾಗಿದೆ. ವಯಸ್ಸಾದ ಹೆಂಗಸರು, ಮುದುಕಿಯರು ನೆಲಮಾಳಿಗೆಯ ರೈಲು ನಿಲ್ದಾಣಗಳಲ್ಲಿಯೋ ಇನ್ನೆಲ್ಲಿಯೋ ಸಣ್ಣಪುಟ್ಟ ಸಾಮಾನುಗಳನ್ನು ಮಾರುವುದನ್ನು ಕಾಣಬಹುದು. ತಾಂತ್ರಿಕವಾದ ವಿಷಯದಲ್ಲಿ ಉನ್ನತವಾದ ಅಧ್ಯಯನಗೈದ ಮಹಿಳೆಯರಿಗೂ ಕೆಲಸವಿಲ್ಲವಾಗಿದೆ. ನಾನು ಯಾವತ್ತೂ ಭೇಟಿ ನೀಡುತ್ತಿದ್ದ ಅಕಾಡೆಮಿ ಆಫ್ ಸೈನ್ಸ್‌ನ ಗ್ರಂಥಾಲಯದಲ್ಲಿ ಕೆಲಸ ಮಾಡುತ್ತಿರುವ 'ತನ್ಯಾ' ಮೆಕಾನಿಕಲ್ ಇಂಜಿನಿಯರಿಂಗ್ ಪದವೀಧರೆಯಾದರೂ ಅರೆಕಾಲಿಕ ಸೇವೆಯನ್ನು ಸಲ್ಲಿಸುತ್ತಿದ್ದಾಳೆ. ಅದೇ ರೀತಿ ಟೆಕ್ಸ್‌ಟೈಲ್ ಇಂಜಿನಿಯರಿಂಗ್ ಓದಿದ ಮಹಿಳೆಯೊಬ್ಬಳು ಮತ್ತೊಂದು ಕಡೆ ಚಹಾ ಮಾರಾಟಮಾಡುತ್ತಿರುವುದು ನನ್ನ ಗಮನಕ್ಕೆ ಬಂದಿತು.

## ಶಿಕ್ಷಣ ಕ್ಷೇತ್ರ

ಸೋವಿಯತ್ ಆಡಳಿತದ ಕಾಲದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗೆ ಉಚಿತ ಶಿಕ್ಷಣ ಲಭ್ಯವಿತ್ತು. ಸಾಕ್ಷರತಾ ಪ್ರಮಾಣ ಹೆಚ್ಚು ಕಡಮೆ ಶೇ. ನೂರರಷ್ಟಿತ್ತು. ಜನರ ಸರಾಸರಿ ಜೀವಮಾನವು 72 ವರ್ಷಗಳಾಗಿದ್ದು ಮುಂದುವರೆದ ಪಾಶ್ಚಿಮಾತ್ಯ ದೇಶಗಳಿಗೆ ಸರಿದೊರೆಯಾಗಿತ್ತು. ಈಗ ರಾಜಕೀಯ ಸ್ಥಿತ್ಯಂತರಗಳಿಗೆ ಇವೆರಡೂ ಕ್ಷೇತ್ರಗಳು ಬಲಿಯಾಗಿವೆ. ಸರಕಾರದಲ್ಲಿ ಅನುದಾನ ಪೂರ್ಣವಾಗಿ ನಿಂತಿದೆ. ಈಗ ಉನ್ನತ ಶಿಕ್ಷಣ ಸಂಸ್ಥೆಗಳು ಸ್ವಾವಲಂಬಿಗಳಾಗಬೇಕಾದ ಅನಿವಾರ್ಯತೆಯು ಅಲ್ಲಿದೆ. ಆದುದರಿಂದಲೇ ಸಹಜವಾಗಿಯೇ ಈ ಸಂಸ್ಥೆಗಳು ಶಿಕ್ಷಣ ಶುಲ್ಕ ಹಾಗೂ ಕ್ಯಾಪಿಟೇಶನ್ ಶುಲ್ಕಗಳನ್ನು ತೆಗೆದುಕೊಳ್ಳುತ್ತಿವೆ. ಉದಾಹರಣೆಗೆ ಮಾಸ್ಕೋ ವಿಶ್ವವಿದ್ಯಾಲಯದಲ್ಲಿ ಪ್ರವೇಶಾವಕಾಶ, ಸ್ನಾತಕೋತ್ತರ ವಿದ್ಯಾಭ್ಯಾಸಗಳೆನ್ನುವುದು ಹೆಚ್ಚಿನ ರಷ್ಯನ್ ವಿದ್ಯಾರ್ಥಿಗಳಿಗೆ ಕನಸಿನ ಗಂಟೇ ಆಗಿದೆ. 90ರ ದಶಕದಲ್ಲಿ ಅಸ್ತಿತ್ವಕ್ಕೆ ಬಂದ ಮ್ಯಾನೇಜ್‌ಮೆಂಟ್ ಮಾರ್ಕೆಟಿಂಗ್ ಮುಂತಾದವುಗಳ ತರಬೇತಿ ಸಂಸ್ಥೆಗಳೂ ಇದೇ ಮಾದರಿಯವೇ ಆಗಿವೆ. ಹೊಸದಾಗಿ ಈ ಸಂಸ್ಥೆಗಳಲ್ಲಿ ಶಿಕ್ಷಣ ಶುಲ್ಕವೇ ಸಾವಿರಾರು ಡಾಲರುಗಳಾಗಿರುವುದರಿಂದ ಕೇವಲ ಶ್ರೀಮಂತ ವರ್ಗಕ್ಕೆ ಮಾತ್ರವೇ ಇವುಗಳ ಪ್ರವೇಶಾವಕಾಶಗಳು ಮೀಸಲಾದಂತಾಗಿವೆ.

ಇನ್ನು ಶಿಕ್ಷಣದ ಪೂರಕ ಉಪಕರಣಗಳಾದ ಪಠ್ಯ ಪುಸ್ತಕಗಳು, ಪರಾಮರ್ಶನ ಗ್ರಂಥಗಳಂತೂ ಬಹಳ ತುಟ್ಟಿಯೇ ಆಗಿವೆ. ಈ ಹಿನ್ನೆಲೆಯಲ್ಲಿ ಮಧ್ಯಮ ಮತ್ತು ಕೆಳಮಧ್ಯಮ ವರ್ಗದವರಿಗೆ ಮಕ್ಕಳ ಉನ್ನತ ಶಿಕ್ಷಣ ವೆಚ್ಚವನ್ನು ಭರಿಸಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ, ಭವಿಷ್ಯದ ಜನಾಂಗದಲ್ಲಿ ಅನಕ್ಷರತೆಯು ಹೆಚ್ಚಬಹುದೆಂದು ಅಲ್ಲಿಯ ಪ್ರಜ್ಞಾವಂತರು ಆತಂಕಿತರಾಗಿದ್ದಾರೆ.

## ರೋಗಗ್ರಸ್ತ ಆರೋಗ್ಯ ವ್ಯವಸ್ಥೆ

ರಷ್ಯಾದ ಸಾರ್ವಜನಿಕ ಆರೋಗ್ಯ ಇಲಾಖೆಯೂ ಅಸ್ತವ್ಯಸ್ತವಾಗಿದೆ. ಸಮಾಜವಾದಿ ರಷ್ಯಾದಲ್ಲಿ ಪ್ರಚಲಿತವಾಗಿದ್ದ ಉಚಿತ ವೈದ್ಯಕೀಯ ಸೌಲಭ್ಯಗಳ ಜಾಗದಲ್ಲಿ ಈಗ ವೈದ್ಯಕೀಯ ಸೇವೆಯು ದುಬಾರಿ ದರಗಳಿಗೆ ಮಾತ್ರ ದೊರೆಯುತ್ತದೆ. ಸರಕಾರೀ ರುಗ್ಣಾಲಯಗಳೇನೋ ಇವೆ. ಆದರೆ ಅವು ಆರ್ಥಿಕ ಸಂಕಷ್ಟಗಳಿಂದ ಬಳಲುತ್ತಿವೆ. ಅಸಮರ್ಪಕ ವೈದ್ಯಕೀಯ ಸೌಲಭ್ಯಗಳ ದುಷ್ಪರಿಣಾಮವನ್ನು ವೃದ್ಧರೂ ರೋಗಿಗಳೂ ಅನುಭವಿಸಬೇಕಾಗಿದೆ. ಔಷಧಿಗಳ ಕ್ರಯವಂತೂ ವಿಷವೇರಿದಂತೆ ಏರುತ್ತಿದೆ. ಸ್ಥಳೀಯ ಫಾರ್ಮಸ್ಯೂಟಿಕಲ್ ಕಾರ್ಖಾನೆಗಳು ಬೇಕಾದಷ್ಟು ಔಷಧವನ್ನು ಪೂರೈಸುವಲ್ಲಿ ವಿಫಲವಾಗುತ್ತಿವೆ. ಆದುದರಿಂದ ಅವುಗಳನ್ನು ಆಯಾತ ಮಾಡಿಕೊಳ್ಳುವುದು ಇಂದಿನ ರಷ್ಯಾಕ್ಕೆ ಅನಿವಾರ್ಯವಾಗಿದೆ. ಮಾರಕ ರೋಗಗಳಾದ ಕ್ಷಯ ಮುಂತಾದವುಗಳು ಇಲ್ಲಿ ವ್ಯಾಪಕವಾಗಿ ಹಬ್ಬುತ್ತಿವೆ. ಶಿಶುಗಳ ಮರಣದ ಪ್ರಮಾಣವೂ ಹೆಚ್ಚಾಗುತ್ತಿದೆ. ಕಳೆದ ಏಳು ವರ್ಷಗಳಲ್ಲಿ ರಷ್ಯಾದ ಜನಸಂಖ್ಯೆ 2 ಮಿಲಿಯಗಳಷ್ಟು ಕಡಿಮೆಯಾಗಿದೆ. ಇದು ಅಕ್ಟೋಬರ್ ಕ್ರಾಂತಿಯ ಅನಂತರದ ಮೊದಲನೆಯ ಮಹಾಯುದ್ಧ ಮತ್ತು ಅಂತರ್ಯುದ್ಧಗಳಲ್ಲಿ ನಷ್ಟವಾದ ಜನಸಂಖ್ಯೆಗಿಂತಲೂ ಅಧಿಕವೆನ್ನುವುದು ಆತಂಕಕಾರಿಯಾಗಿದೆ.

## ಆರ್ಥಿಕ ಮುಗ್ಗಟ್ಟು

ಆರ್ಥಿಕ ಪ್ರಗತಿಯೇ ರಷ್ಯಾವನ್ನು 21ನೆಯ ಶತಮಾನಕ್ಕೆ ಕೈಹಿಡಿದು ಕರೆದೊಯ್ಯಬೇಕಾಗಿದೆ. ಸೋವಿಯತ್ ವ್ಯವಸ್ಥೆ ಕುಸಿದ ಮೇಲೆ ರಷ್ಯಾದಲ್ಲಿ ಕಳೆದ ಎಂಟು ವರ್ಷಗಳಲ್ಲಿ ನಡೆದ ವಿವಿಧ ನಮೂನೆಯ ಹಿನ್ನಡೆ ಹಾಗು ಬಿಕ್ಕಟ್ಟಿನಿಂದಾಗಿ ಸದ್ಯಕ್ಕಂತೂ ಅದು ಚೇತರಿಸಿಕೊಳ್ಳುವ ಹಾಗೆ ಕಾಣುವುದಿಲ್ಲ. ರಷ್ಯಾದ ಈ ದುಸ್ಥಿತಿಗೆ ಕಾರಣ ನಿಯಮಗಳ ನಿರ್ಮಾಪಕರು ಹಾಗು ಅವುಗಳನ್ನು ಬೇಕಾಬಿಟ್ಟಿಯಾಗಿ ಜಾರಿಗೆ ತಂದ ಕ್ರಮಗಳು.

ಷಾಕ್ ಚಿಕಿತ್ಸೆ ನಿಯಮಗಳು, ಪೂರ್ಣ ಆರ್ಥಿಕ ಉದಾರ ನೀತಿ, ಒಮ್ಮೆಲೆ ಎಲ್ಲಾ ಖಾಸಗೀಕರಣ 1992ರಲ್ಲಿ ಮೊದಲ ಪ್ರಧಾನಿ ಈಗೋರ್ ಗೈದರ್ ರಷ್ಯಾದಲ್ಲಿ ಅತಿ ಕಡಿಮೆ ಅವಧಿಯಲ್ಲಿ ಕಮ್ಯುನಿಸಂ ಬದಲಿಗೆ ಬಂಡವಾಳವಾದಿ ಪದ್ಧತಿಯನ್ನು ತರಬಯಸಿದ್ದು ಬಹುದೊಡ್ಡ ಮೂರ್ಖತನವೆಂಬುದು ಈಗ ಗುಟ್ಟಾಗಿ ಉಳಿದಿಲ್ಲ. ಹಾಗೆಯೇ



ವಿದೇಶೀ ಸಾಹಿತ್ಯ, ಸಿಗರೇಟ್ ಕೋಕಕೋಲಾ ಇತ್ಯಾದಿ ಭೋಗವಸ್ತುಗಳ ಭರಾಟೆ!

1992-93ರಲ್ಲಿ ಚುಬಾಯ್ಸ್ ಜಾರಿಗೆ ತಂದ ವೇತನಗಳಿಗೆ ಬದಲಾಗಿ ಕಾರ್ಮಿಕರಿಗೆ ಷೇರುಗಳನ್ನು ನೀಡುವ ಖಾಸಗೀಕರಣ ನೀತಿಯಿಂದಾಗಿ ನಾಗರಿಕರು ಕಾರ್ಖಾನೆಗಳು ಪಾಲುದಾರರೇನೋ ಆದರು. ಆದರೆ ಇದರಲ್ಲಿ ಬೇಳೆ ಬೇಯಿಸಿಕೊಂಡು 'ಸೂಪರ್ ಶ್ರೀಮಂತ ವರ್ಗ ಸಾಮಾನ್ಯ ಜನರ ಕಣ್ಣಿಗೆ ಸುಣ್ಣ ಹಚ್ಚಿದರು. ರಷ್ಯಾದ ಆರ್ಥಿಕ ಸ್ಥಿತಿಗತಿಯು ಈಗ ಬೆರೆಜೋವಸ್ಕಿ, ಲುಸ್ಕೋವ್ ಮೊದಲಾದವರ ನಿಯಂತ್ರಣದಲ್ಲಿದೆ. ಇವರು ದೊಡ್ಡ ದೊಡ್ಡ ಕಾರ್ಖಾನೆಗಳ ಮಾಲೀಕರೂ ಹೌದು. ಪತ್ರಿಕೆ, ದೂರದರ್ಶನ ಚಾನೆಲ್ ಮೊದಲಾದ ಸುದ್ದಿ ಮಾಧ್ಯಮಗಳು ಇವರ ಸ್ವಾಧೀನದಲ್ಲಿವೆ. ಬೆಲೆಗಳ ನಿಯಂತ್ರಣದಲ್ಲಾದ ಹಠಾತ್ ವೈಪರೀತ್ಯ, 1992ರ ಜನವರಿ-ಎಪ್ರಿಲ್‌ದಲ್ಲಿ ಜನಾವಶ್ಯಕ ವಸ್ತುಗಳನ್ನು ಇತಿಮಿತಿಯಿಲ್ಲದೆ ಆಮದು ಮಾಡಿಕೊಂಡದ್ದು ಮೊದಲಾದ ಅಂಶಗಳು ತೀವ್ರವಾದ ಹಣದುಬ್ಬರಕ್ಕೆ ಕಾರಣವಾದವು. ಇದರಿಂದ 30-40% ಕಾರ್ಮಿಕ ವರ್ಗ ಆರ್ಥಿಕವಾಗಿ ಹಿಂದುಳಿದವರ ಬದುಕು ನರಕ ಸದೃಶವಾಯಿತು. 1999 ಆಗಸ್ಟ್ ತಿಂಗಳ ವರದಿಯ ಪ್ರಕಾರ ಸುಮಾರು 40% ರಷ್ಯಾದ ಜನರು ಕನಿಷ್ಠ ಅಗತ್ಯಗಳ ರೇಖೆಗಳ ಕೆಳಗೆ ಜೀವನ ನಡೆಸುತ್ತಿದ್ದಾರೆ. ನಿರಂತರವಾದ ಆಮದು ನೀತಿಯಿಂದಾಗಿ ದೇಶೀಯವಾದ ಕೈಗಾರಿಕೆಗಳು ನೆಲಕಚ್ಚಿವೆ. 1992-1999ರ ಮಧ್ಯೆ ಇಂಜಿನಿಯರಿಂಗ್, ರಾಸಾಯನಿಕ, ಲಘು ಕೈಗಾರಿಕೆಗಳು ಹಾಗೂ ಆಹಾರ ತಯಾರಿಕಾ ಘಟಕಗಳ ಉತ್ಪಾದನೆ 50ರಿಂದ 60% ಕುಸಿದಿದೆ ಎಂಬುದು ಕೈಗಾರಿಕಾ ವಲಯದಲ್ಲಿ ಮತ್ತಷ್ಟು ಕಳವಳವನ್ನುಂಟುಮಾಡಿದೆ.

ರಷ್ಯಾ ಎಣ್ಣೆ, ನೈಸರ್ಗಿಕ ಅನಿಲ, ಅರಣ್ಯ ಉತ್ಪನ್ನ ಮೊದಲಾದ ಕ್ಷೇತ್ರಗಳಲ್ಲಿ ಸ್ವಾವಲಂಬನೆ ಗಳಿಸಿದ್ದಾಗಲೂ ಕಷ್ಟಪಟ್ಟು ಗಳಿಸಿದ ಹಣದಿಂದ ಮನಬಂದಂತೆ



ಮಾಸ್ಕೋ ವಿಶ್ವವಿದ್ಯಾಲಯದ ಹಿನ್ನೆಲೆ
ವಿದೇಶೀಯರಿಗೆ ಸೊವೆನೀರ್ ಮಾರಾಟದ ತಯಾರಿ

ಲಂಗುಲಗಾಮಿಲ್ಲದೆ ವಿದೇಶಿ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತಿರುವುದು ಆ ರಾಷ್ಟ್ರದ ಅಭಿವೃದ್ಧಿಗೆ ಮಾರಕವಾಗಿದೆ. ಇಂದು ಪರಿಸ್ಥಿತಿ ಎಲ್ಲಿಗೆ ಬಂದು ಮುಟ್ಟಿದೆಯೆಂದರೆ, ರಷ್ಯಾ ಕಚ್ಚಾ ವಸ್ತುಗಳನ್ನು ರಫ್ತು ಮಾಡಿ ಸಿದ್ಧ ವಸ್ತುಗಳನ್ನು ಯಾವುದೇ ತೃತೀಯ ರಾಷ್ಟ್ರಗಳಿಂದ ಕಣ್ಣುಮುಚ್ಚಿ ತರಿಸಿಕೊಳ್ಳುತ್ತಿದೆ.

### ಸಾಲದ ಹೊರೆ

ಅಸಮರ್ಪಕವಾದ ಆರ್ಥಿಕ ನೀತಿಯಿಂದಾಗಿ ರಷ್ಯಾ ಅಗಾಧವಾದ ದೇಶಿ ಹಾಗು ವಿದೇಶಿ ಸಾಲಗಳ ಹೊರೆಯನ್ನು ಹೊರಬೇಕಾಗಿ ಬಂದಿದೆ. ಅಲ್ಪಾವಧಿಯ ಬಾಂಡುಗಳ ಮೂಲಕ ಅತಿ ಹೆಚ್ಚು ಬಡ್ಡಿ ಕೊಡುವುದಾಗಿ ನಂಬಿಸಿ ನಾಗರಿಕರನ್ನು ಕೊಳ್ಳೆ ಹೊಡೆಯಲಾಗಿದೆ. ತೀವ್ರವಾದ ಹಣಕಾಸು ಮುಗ್ಗಟ್ಟಿನಿಂದಾಗಿ ರಷ್ಯಾ ಸರಕಾರ 1998ನೆಯ ಸಾಲಿನ ಬ್ಯಾಂಕುಗಳ ಬಾಕಿಯನ್ನು ತೀರಿಸಲಾಗದೇ ಹೆಣಗಾಡುತ್ತಿದೆ. ರಷ್ಯಾದ ವಿದೇಶಿ ಸಾಲವೂ ಈಗ 170-180 ಬಿಲಿಯನ್ ಡಾಲರಿಗೆ ಜಿಗಿದಿದೆ. ಇದರಲ್ಲಿ ಮೂರನೆ



ಯೆಲ್ಟ್ಸಿನ್ ವಿರೋಧಕ್ಕಾಗಿ ಕಮ್ಯೂನಿಸ್ಟರ ಒಂದು ತಂಡವು ಕ್ರೆಮ್ಲಿನ್‌ಸತ್ತ ಹೋಗುತ್ತಿರುವುದು

ಒಂದು ಭಾಗದಷ್ಟು ಹಿಂದಿನ ಸೋವಿಯತ್ ಯುಗದ ಬಳುವಳಿ. ಉಳಿದೆಲ್ಲವೂ ಅನಂತರದವು. ಹಣಕಾಸು ಸುಧಾರಣೆಗಾಗಿ ಐ.ಎಂ.ಎಫ್. ವಿಶ್ವ ಬ್ಯಾಂಕ್ ಹಾಕಿದ ಕರಾರಿನ ನೊಗಕ್ಕೆ ರಷ್ಯಾ ಈಗ ಕುತ್ತಿಗೆ ಒಡ್ಡಿದೆ. ಕೆಲವು ಲೆಕ್ಕಾಚಾರಗಳ ಪ್ರಕಾರ ಪ್ರತಿ ತಿಂಗಳು ಎರಡು ಬಿಲಿಯನ್ ಡಾಲರ್ ಹಣವನ್ನು ದೇಶದಿಂದ ಹೊರಕ್ಕೆ ಸಾಗಿಸಲಾಗುತ್ತಿದೆ. ಇದನ್ನು ಅಮೆರಿಕಾ, ಯೂರೋಪ್ ಮೊದಲಾದ ದೇಶಗಳ ಬ್ಯಾಂಕ್‌ಗಳಲ್ಲಿ ಗೌಪ್ಯವಾಗಿ ಇಡಲಾಗುತ್ತಿದೆ ಇಲ್ಲವೇ ವಿದೇಶಗಳಲ್ಲಿ ಬಂಗ್ಲೆ, ನಿವೇಶನಗಳನ್ನು ಖರೀದಿಸಲು ಬಳಸಲಾಗುತ್ತಿದೆ. ಈ ಸೋರಿಕೆಯನ್ನು ತಡೆಗಟ್ಟುವಲ್ಲಿ ರಷ್ಯಾ ಸರಕಾರ ವಿಫಲವಾಗಿದೆ. ಇದು ಮುಂಬರುವ ದಿನಗಳಲ್ಲಿ ದೇಶವನ್ನು ಮತ್ತಷ್ಟು ಸಂಕಷ್ಟಕ್ಕೆ ಗುರಿಮಾಡದೇ ಇರದು.

### ಜನಜೀವನದಲ್ಲಿ ವಿಪರ್ಯಾಸ

ರಷ್ಯಾದ ಸಮಾಜ ಒಂದೆಡೆ ಹೋಳಾಗುತ್ತಿದ್ದರೆ ಮತ್ತೊಂದು ಕಡೆ ವಿಭಿನ್ನ ಧ್ರುವಗಳನ್ನು ಸೃಷ್ಟಿಸುತ್ತಿದೆ. ಹಳೆಯ ತಲೆಮಾರಿನ ಜನರು ಕಷ್ಟಪಟ್ಟು ಜೀವನದುದ್ದಕ್ಕೂ ಉಳಿತಾಯ ಮಾಡಿದ ಅಮೂಲ್ಯವಾದ ಸಾವಿರಾರು ರೂಬಲುಗಳು ಹಣದುಬ್ಬರದಲ್ಲಿ, ಬ್ಯಾಂಕ್ ದಿವಾಳಿಗಳಲ್ಲಿ ಕೊಚ್ಚಿಹೋಗಿವೆ. ತೊಂದರೆಗೊಳಗಾದವರಿಗೆ ಏಳು ವರ್ಷವಾದರೂ ಪರಿಹಾರ ನೀಡಲು ರಷ್ಯಾ ಸರಕಾರದಿಂದ ಸಾಧ್ಯವಾಗಿಲ್ಲ. ಸರಕಾರ ನೀಡಿದ್ದ ಭರವಸೆಗಳೆಲ್ಲ ಈಗ ಪೊಳ್ಳಾಗಿ ಕಾಣುತ್ತಿವೆ. ಈಗ ಹಿರಿಯ ನಾಗರಿಕರಿಗೆ ಸಿಗುವ ಪಿಂಚಣಿಯೂ ಅಷ್ಟಕ್ಕಷ್ಟೆ. ಸಿಗುವ 500ರಿಂದ 800 ರೂಬಲ್‌ವರೆಗೆ ಪಿಂಚಣಿ ಎರಡು ಹೊತ್ತಿನ ಊಟಕ್ಕೂ ಸಾಲದು.

ಈ ಎಲ್ಲಾ ವಿದ್ಯಮಾನಗಳಿಂದ ರಷ್ಯಾದಲ್ಲಿ ಮತ್ತೊಂದು ಸಾಮಾಜಿಕ ಪಿಡುಗು ಆರಂಭವಾಗಿದೆ. ಅದೇ ಭಿಕ್ಷಾಟನೆ. ಕೆಲವು ಕಡೆಗಳಲ್ಲಿ ವೃದ್ಧ ಮಹಿಳೆಯರು ಮತ್ತು ಮುದುಕರು ಕೆಲವೊಮ್ಮೆ ಹೆಂಗಸರು, ಚಿಕ್ಕ ಮಕ್ಕಳನ್ನು ಮಡಿಲಲ್ಲಿ ಇಟ್ಟುಕೊಂಡು ಮಾರುಕಟ್ಟೆಗಳಲ್ಲಿ ಜನಸಂದಣಿ ಇರುವಲ್ಲಿ ಭಿಕ್ಷೆ ಬೇಡುತ್ತಿರುವುದನ್ನು ಯಾರೂ ಕಾಣಬಹುದಾಗಿದೆ. ಈ ಎಲ್ಲಾ ವೈರುಧ್ಯಗಳ ನಡುವೆ ಕೆಲವು ಮಂದಿ ರಷ್ಯನ್ನರು ಅಲ್ಪಾವಧಿಯಲ್ಲೇ ಆಗರ್ಭ ಶ್ರೀಮಂತರಾಗಿ ವಿದೇಶಿ ಕಾರುಗಳನ್ನು ಕೊಂಡು ವಿಲಾಸಿ ಬದುಕಿನಲ್ಲಿ ತೇಲಾಡುತ್ತಿದ್ದಾರೆ.

### ಇಂದಿನ ಯುವಜನಾಂಗ

ಹೊಸ ತಲೆಮಾರಿನ ಕೆಲವರು ಖಾಸಗಿ ಸಂಸ್ಥೆಗಳಲ್ಲಿ ಒಳ್ಳೆಯ ಉದ್ಯೋಗದಲ್ಲಿದ್ದಾರೆ. ಕೆಲವು ಅದೃಷ್ಟವಂತ ಯುವಕರು ಕಂಪೆನಿಗಳಲ್ಲಿ ಸೇರಿಕೊಂಡು ಉತ್ತಮ ಸಂಬಳ ಸಾರಿಗೆಯಿಂದ ಸಂತೃಪ್ತಿಯ ಜೀವನ ನಡೆಸುತ್ತಿದ್ದಾರೆ. ಯುವ ಜನಾಂಗದ ವೇಷಭೂಷಣಗಳಲ್ಲಿ ಬಹಳಷ್ಟು ಬದಲಾವಣೆಯಾಗಿದೆ.

ಧೂಮಪಾನವಂತೂ ಯುವಕರಲ್ಲಿ ಮಿತಿ ಮೀರಿದೆ. ಕ್ರೆಮ್ಲಿನ್ ಬಳಿಯ ಅಲೆಗ್ಸಾಂಡ್ರೊವ್ಸ್ಕಿ ಉದ್ಯಾನದಲ್ಲಿ ನಾನೊಂದು ಸಂಜೆ ಕುಳಿತು ಕೊಂಡಿದ್ದಾಗ ಯುವಕ ಯುವತಿಯರ ಗುಂಪೊಂದು ಬಂದಿತು. ಅವರಲ್ಲಿ ಹತ್ತರಲ್ಲಿ ಎಂಟು ಮಂದಿಯ ಕೈಯಲ್ಲಿ ಸಿಗರೇಟು ಇರುವುದು ನನ್ನ ಗಮನಕ್ಕೆ ಬಂದಿತು. ಯುವ ಜನಾಂಗದ ಮಿತಿಮೀರಿದ ಧೂಮ ಪಾನವೂ ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ.

ಧೂಮಪಾನವಲ್ಲದೆ ರಷ್ಯಾದ ಯುವಕರ ಕುಡಿತ ಮತ್ತು ಮಾದಕ ಪದಾರ್ಥಗಳ ಸೇವನೆಗೂ ಶರಣಾಗಿದ್ದಾರೆ. ಡಾ|| ಒಲೆಗ್ ಮಾಲೆರೊವ್ ಅವರ ಪ್ರಕಾರ ರಷ್ಯಾದ ಯುವ ಜನಾಂಗ ಹಾದಿ ತಪ್ಪುತ್ತಿರುವುದಕ್ಕೆ ರಾಜಕೀಯ ಸ್ಥಿತಿಗತಿ ಹಾಗೂ ಸಮತೋಲನ ತಪ್ಪಿರುವ ಆರ್ಥಿಕ ಬದಲಾವಣೆಯೂ ಕಾರಣವಾಗಿದೆ. ಟಿ.ವಿ ಚಾನೆಲ್‌ಗಳಲ್ಲಿ ತೋರಿಸಲಾಗುತ್ತಿರುವ ಅತಿಯಾದ ಲೈಂಗಿಕತೆ ಹಾಗೂ ಅಪರಾಧಗಳನ್ನು ಉತ್ತೇಜಿಸುವಂತಹ ಧಾರವಾಹಿಗಳು ಸಹ ಯುವಕರ ಮೇಲೆ ತೀವ್ರತರದ ಪರಿಣಾಮ ಬೀರಿದೆ. ರಾತ್ರಿ ಕ್ಲಬ್ಬುಗಳು, ಅಶ್ಲೀಲ ಸಾಹಿತ್ಯ (ಇದನ್ನು ಮಾಸ್ಕೋದ ಎಲ್ಲೆಡೆ ಬಹಿರಂಗವಾಗಿ ಮಾರಲಾಗುತ್ತಿದೆ.) ದೊರಕುವಂತಾದುದು ಸೋವಿಯತ್ ಯುಗದ ಅನಂತರವೇ.

### ಸಾರಿಗೆ ವ್ಯವಸ್ಥೆ

ಮಾಸ್ಕೋದ ಸಾರಿಗೆ ಸಂಪರ್ಕದ ವ್ಯವಸ್ಥೆಗೆ ಹೊಸ ಚೈತನ್ಯ ಬಂದದ್ದೇ ಸೋವಿಯತ್ ಕಾಲದಲ್ಲಿ. ಮಹಾನಗರಗಳ ಜೋಡಣೆ, ಸುರಂಗ ಮಾರ್ಗದ ರೈಲು ಓಡಾಟ, ಸುವ್ಯವಸ್ಥಿತ ಟ್ರಾಮ್ ಹಾಗೂ ಬಸ್‌ಗಳ ಓಡಾಟದಿಂದ ಸಂಚಾರ ಸುಗಮ ಗೊಂಡಿದೆ. ಇತ್ತೀಚೆಗೆ ವಿನಾಯಿತಿಯಲ್ಲಿ ಭಾರೀ ಕಡಿತ ಮಾಡಿದ್ದರಿಂದ ಪ್ರಯಾಣದರಗಳು ಅತೀವವಾಗಿ ಹೆಚ್ಚಿವೆ. ಮೆಟ್ರೋದಲ್ಲಿ ಒಂದು ಬಾರಿಯ ಏಕಮುಖ ಪ್ರಯಾಣಕ್ಕೆ ಹಿಂದೆ 5 ಕೋಪೆಕ್ಸ್ ಕೊಟ್ಟರೆ ಸಾಕಿತ್ತು. ಆದರೆ ಈಗ ಅದು 4 ರೂಬೆಲ್‌ಗೆ ಜಿಗಿದಿದೆ. ಅಂದರೆ 80 ಪಟ್ಟು ಹೆಚ್ಚಾದಂತಾಗಿದೆ. 10-20 ಬಾರಿ ಓಡಾಡಬಹುದಾದ ಪಾಸ್ ತೆಗೆದುಕೊಂಡರೆ ಸ್ವಲ್ಪ ಉಳಿತಾಯವಾಗುತ್ತದೆ. ಬಸ್ ಹಾಗೂ ಟ್ರಾಮ್ ಗಳನ್ನು ಹತ್ತಿ ಇಳಿದರೆ ಎರಡು ಮೂರು ರೂಬೆಲ್ ಕೊಡಬೇಕಾಗಿ ಬಂದಿದೆ. ಇಲ್ಲಿಯೂ 70-100 ಪಟ್ಟು ಪ್ರಯಾಣ ದರ ಜಾಸ್ತಿಯಾಗಿದೆ. ಒಂದು ಸಮಾಧಾನದ ಸಂಗತಿಯೆಂದರೆ ಅರವತ್ತು ವರ್ಷ ಮೀರಿದ ರಷ್ಯಾದ ನಾಗರಿಕರು ಸಾರ್ವಜನಿಕ ಸಾರಿಗೆ ವ್ಯವಸ್ಥೆಯಲ್ಲಿ ಪುಕ್ಕಟೆಯಾಗಿ ಓಡಾಡಬಹುದು. ಪ್ರಯಾಣ ದರಗಳು ಮುಗಿಲು ಮುಟ್ಟಿರುವುದರಿಂದ ಸಾಮಾನ್ಯ ಜನತೆಗೆ ಸ್ಥಳೀಯ ಓಡಾಟವೂ ಮತ್ತಷ್ಟು ಹೊರೆಯಾಗಿದೆ. 1990ರಲ್ಲಿ ಅಲ್ಲಿನ ಸಾಮಾನ್ಯ ಜನರ ಆದಾಯ 100 ರೂಬೆಲ್ ಇದ್ದದ್ದು ಈಗ ಅದು 1500ಕ್ಕೆ ಏರಿದೆ. ಅದೆಂದರೆ 15% ಹೆಚ್ಚಿದಂತಾಯಿತು. ಉಳಿದೆಲ್ಲ ಏರಿಕೆಗೂ ಆದಾಯ ಏರಿಕೆಗೂ ಅಜಗಜಾಂತರವಿದೆ. ಇದೇ ರೀತಿ ಇಂದು ಒಂದು ಹೊತ್ತಿನ ತಿಂಡಿ ಕಾಫಿಗೆ 20-25 ರೂಬೆಲ್ ತೆರಬೇಕಾಗಿದೆ. ಹಿಂದೆ ಅದು 50-60 ಕೋಪೆಕ್ಸ್ ಗಳಷ್ಟಿತ್ತು. 70 ವರ್ಷಗಳ ಸೋವಿಯತ್ ವ್ಯವಸ್ಥೆಯಲ್ಲಿದ್ದ ಶಿಸ್ತು ಸಮೃದ್ಧಿ ಎಲ್ಲವೂ ಈಗ ಅದೃಶ್ಯ. ಈಗಿರುವುದು ಅವ್ಯವಸ್ಥೆ ಅಶಿಸ್ತು ಸಿಕ್ಕಿದ್ದನ್ನು ದೋಚುವ ಸ್ವಭಾವ, ಹಿಂದಿನದೆಲ್ಲ ತಿರುಗು- ಮುರುಗು.

**ಆರ್. ಜಿ. ಗಿಡದ ಹುಬ್ಳಿ**
ಯು. ಜಿ. ಸಿ. ಎಮೆರಿಟಸ್ ಪ್ರೊಫೆಸರ್, ನಿವೃತ್ತ ನಿರ್ದೇಶಕರು,
ಸೋವಿಯೆತ್ ಸ್ಟಡಿ ಸೆಂಟರ್, ಮುಂಬಯಿ ವಿಶ್ವವಿದ್ಯಾಲಯ

# ಯೋಗಪ್ರವೇಶ - ೭

**ಜಿ. ರಾಮಕೃಷ್ಣ**

ನನಗೆ ತಿಳಿದಿರುವ ಅನೇಕ 'ಯೋಗಿ'ಗಳ ಪೈಕಿ ಇಬ್ಬರ ವಿಷಯ ಪ್ರಸ್ತಾಪಿಸಬಯಸುತ್ತೇನೆ. ಅವರಲ್ಲಿ ಒಬ್ಬರು ಬೆಂಗಳೂರಿನವರೇ ಆಗಿದ್ದ ಕೃಷ್ಣ ಅಯ್ಯಂಗಾರ್ ಎಂಬುವರು. ಯೋಗಿ ರಾಮಾನಂದ ಎಂಬ ಹೆಸರಿನಿಂದ ಅವರು ಪ್ರಸಿದ್ಧರು. ಅವರ ಅಪಾರ ಹೆಗ್ಗಳಿಕೆಗಳ ಬಗ್ಗೆ ನಾನು ಅಷ್ಟೇನೂ ಗೌರವ ನೀಡದ ಆರ್ಥರ್ ಕೋಸ್ಲರ್ (ಅಥವಾ ಕೆಸ್ಲರ್) ತನ್ನ 'ಲೋಟಸ್ ಅಂಡ್ ದ ರೋಬೋ' ಎಂಬ ಪುಸ್ತಕದಲ್ಲಿ ದೀರ್ಘವಾಗಿ ಬರೆದಿದ್ದಾನೆ. ಮೊದಲಿಗೆ ಅವರು 'ಭೂಗರ್ಭ ಸಮಾಧಿ' ಮಾಡುತ್ತಿದ್ದವರು. (ಅದನ್ನು ನಾವು ಯಾರು ಬೇಕಾದರೂ ಮಾಡಬಹುದೆಂಬುದನ್ನು ಹಿಂದೆಯೇ ವಿವರಿಸಲಾಗಿದೆ.) ಖ್ಯಾತ ಮನೋವಿಜ್ಞಾನಿ ಶ್ರೀ ಗೋವಿಂದ ಸ್ವಾಮಿಯವರು ಅವರ ಯೋಗಾಭ್ಯಾಸದ ಮೇಲೆ ಅನೇಕ ಪ್ರಯೋಗಗಳನ್ನು ನಡೆಸಿ ಲೇಖನಗಳನ್ನು ಪ್ರಕಟಿಸಿದ್ದಾರೆ. ಅಂತೆಯೇ ಸ್ವಾಮಿ ಕುವಲಯಾನಂದ ಮತ್ತು ಡಾ॥ ಎಸ್. ಎಲ್. ವೀಣೇಕರ್ ಅವರೂ ರಾಮಾನಂದರ ಮೇಲೆ ಪ್ರಯೋಗಗಳನ್ನು ನಡೆಸಿದ್ದರು.

ಯೋಗಿ ರಾಮಾನಂದರ ವೈಶಿಷ್ಟ್ಯವೇನೆಂದರೆ ಅವರು ಖೇಚರಿ ಸಾಧನೆ ಮಾಡುತ್ತಿದ್ದರು. ಆಸನ- ಪ್ರಾಣಾಯಾಮಗಳಲ್ಲಿ ಅವರು ಅಪರಿಮಿತ ಯಶಸ್ಸನ್ನು ಗಳಿಸಿದ್ದರು. ಖೇಚರಿಯಿಂದ ಅಮೃತತ್ವವನ್ನು ಪಡೆಯುವುದಲ್ಲದೆ ಅನೇಕ ಸಿದ್ಧಿಗಳನ್ನೂ ಪಡೆಯುವ ಸೌಭಾಗ್ಯ ತಮ್ಮದಾಗುವುದೆಂದು ಖಚಿತವಾಗಿ ನಂಬಿದ್ದವರು ಅವರು. ಉತ್ತರ ಪ್ರದೇಶದ ದೇವರಹಾ ಬಾಬಾನನ್ನು ಭೇಟಿಯಾಗಿ ಆತನ ಆಶೀರ್ವಾದ ಪಡೆದಿದ್ದುದಾಗಿ ಪದೇಪದೇ ಹೇಳುತ್ತಿದ್ದರು. ೬೦ರ ದಶಕದ ಆದಿಯಲ್ಲಿ ಇವರು ಆತನನ್ನು ಸಂಧಿಸಿದಾಗ ಆತನಿಗೆ ೧೫೦ ಅಥವಾ ೧೮೦ ವರ್ಷ ವಯಸ್ಸಾಗಿತ್ತೆಂದು ಅವರು ನಂಬಿದ್ದರು. 'ಧರ್ಮಯುಗ' ಎಂಬ ಹಿಂದಿ ವಾರಪತ್ರಿಕೆಯಲ್ಲಿ ಪ್ರಕಟವಾಗಿದ್ದ ಒಂದು ಲೇಖನವನ್ನು ಆಧಾರವಾಗಿ ತೋರಿಸುತ್ತಿದ್ದರು. ಖೇಚರಿಯಲ್ಲಿ ನಾಲಿಗೆಯ ಕೆಳಭಾಗವನ್ನು ಕ್ರಮೇಣ ಕತ್ತರಿಸುತ್ತಾ ಅದನ್ನು ನಾಸಿಕರಂಧ್ರದತ್ತ ಎತ್ತಿ ನಿಲ್ಲಿಸುವುದೂ ಸೇರಿದೆ. ರಾಮಾನಂದರು ನಾಲಿಗೆಯನ್ನು ಬುಡದವರೆಗೂ ಕತ್ತರಿಸಿದ್ದರು, ಚಾಲನ-ದೋಹನ ಮಾಡುತ್ತಿದ್ದರು, ಮಾತನಾಡಲು ತೊದಲುತ್ತಿದ್ದರು. ಯೋಗದ ತುತ್ತತುದಿಯನ್ನು ತಲುಪುವ ಆಶಯವನ್ನು ಹೊತ್ತಿದ್ದ ಅವರು ಮಾನಸಿಕವಾಗಿ ಬಹಳ ಅಸ್ಥಿಮಿತರಾಗಿದ್ದರು, ವ್ಯಾಕುಲರಾಗಿದ್ದರು, ಏಕಾಗ್ರತೆಯನ್ನು ಸಾಧಿಸುವುದರಲ್ಲಿ ಸೋತಿದ್ದರು. (ಕೇರಂ ಆಟದಲ್ಲಿ ಅವರು ಸೋಲುತ್ತಿದ್ದುದು ಬಹಳ ಅಪರೂಪ). ನನಗೆ ಬಹಳ ಆಪ್ತರಾಗಿದ್ದ ಅವರು ಅಚ್ಚಾಗಿದ್ದುದೆಲ್ಲಾ ಪರಮಸತ್ಯವೆಂದು ಬಗೆಯುತ್ತಿದ್ದ ನಿರಾಡಂಬರ ವ್ಯಕ್ತಿ. ಅವರ ಮಕ್ಕಳು ಈಗಲೂ ಬೆಂಗಳೂರಿನಲ್ಲಿದ್ದಾರೆ.

ಇನ್ನೊಬ್ಬರು ನನಗೆ ಬಹಳ ಆಪ್ತರೇನಲ್ಲ. ಅವರನ್ನು ದೂರದಿಂದ ಚೆನ್ನಾಗಿ ಬಲ್ಲೆ. ಅವರೊಡನೆ ಒಂದು ದಿನ ಮಾತ್ರ ಕಳೆದಿದ್ದೇನೆ. ಬೆಂಗಳೂರಿನ ಸುಪ್ರಸಿದ್ಧ ಯೋಗ ಕೇಂದ್ರವೊಂದರ ನಿರ್ದೇಶಕರು ಅವರು. ವಿದ್ವಾಂಸರು, ಪ್ರಭಾವಿ ಉಪನ್ಯಾಸಕರು, ವೈದ್ಯಕೀಯದಲ್ಲಿ ನಿಷ್ಣಾತರು, ಒಳ್ಳೆಯ ಸಂಘಟಕರು, ಎಂದೆಲ್ಲಾ ಅವರ ಬಗೆಗೆ ಕೇಳಿ ತಿಳಿದಿದ್ದೇನೆ. ಅವರನ್ನು ಭೇಟಿಯಾದದ್ದು ಮತ್ತು ಅವರ ಕೇಂದ್ರಕ್ಕೆ ಕೆಲತಿಂಗಳುಗಳ ಹಿಂದೆ ಅವರೊಡನೆ ಹೋಗಿಬಂದದ್ದು ಯಾವಾಗಲೂ ನೆನಪಿನಲ್ಲಿ ಉಳಿಯುವ ಅನುಭವ. ಆಗ ನಾನು ಹೋಗಿದ್ದುದು ಲೋನಾವ್ಲಾದ ಕೈವಲ್ಯಧಾಮ ಯೋಗ ಸಂಸ್ಥೆಯ ಕಾರ್ಯದರ್ಶಿಯವರೊಡನೆ. ಅನೇಕ ವಿಷಯಗಳನ್ನು ಚರ್ಚಿಸುತ್ತಾ ಅವರಿಬ್ಬರೂ ಅಂದಿನ ಒಂದು ಸರ್ಕಾರಿ ಆಜ್ಞೆಯ ಬಗ್ಗೆ ಜಿಜ್ಞಾಸೆ ನಡೆಸಿದ್ದರು. ಆಯ್ಕೆಗೊಂಡ ಕೆಲವು ವಿಶ್ವವಿದ್ಯಾಲಯಗಳಲ್ಲಿ ಯೋಗ ತರಬೇತಿ ನೀಡಲು ವಿಶ್ವವಿದ್ಯಾಲಯ ಧನಸಹಾಯ ಆಯೋಗವು ಅದೆಷ್ಟೋ ಹಣವನ್ನು ಮಂಜೂರು ಮಾಡಿತ್ತು. ಆದರೆ ೧೯೯೮-೯೯ರಲ್ಲಿ ಅದರಲ್ಲಿ ಮೂರನೆಯ ಒಂದು ಭಾಗದಷ್ಟು ಕಡಿತ ಉಂಟಾಗಿತ್ತು. ಅದರಿಂದಾಗಿ ಯೋಗಕೇಂದ್ರಗಳಿಗೆ ಸ್ವಲ್ಪ ಪೆಟ್ಟು ಬಿದ್ದಿತ್ತು. ಅದನ್ನು ತಪ್ಪಿಸಲು ಮಾರ್ಗೋಪಾಯಗಳ ಬಗ್ಗೆ ಇಬ್ಬರೂ ಚರ್ಚೆ ನಡೆಸುತ್ತಿದ್ದರು.

ಕೇಂದ್ರಮಂತ್ರಿ ಮುರಲಿ ಮನೋಹರ ಜೋಶಿಯವರು ಒಂದು ರೀತಿ ಅಸಹಾಯಕರಾಗಿದ್ದರು. ಏಕೆಂದರೆ ಅರ್ಥ ಸಚಿವರು ಶಿಕ್ಷಣ ಖಾತೆಗೆ ಹಣದಲ್ಲಿ ಖೋತಾ ಮಾಡಿದ್ದರು. ನಮ್ಮ ಯೋಗಿ ಮಿತ್ರರಿಗೆ ಅದು ತಿಳಿದಿತ್ತೋ ಇಲ್ಲವೋ ಗೊತ್ತಿಲ್ಲ.



*ಆಳವಾದ ಧ್ಯಾನಾವಸ್ಥೆಯಲ್ಲಿ ಮನಸ್ಸಿನ ಗಾಂಭೀರ್ಯವನ್ನು ತೋರಿಸುವ ಪ್ರಾಯೋಗಿಕ ಅಧ್ಯಯನ. (ಇದೊಂದು ಇ.ಇ.ಜಿ., ಅಂದರೆ ಎಲೆಕ್ಟ್ರೋ ಎನ್‌ಕೆಫೆಲೋ ಗ್ರಾಫ್)*

ಬೆಂಗಳೂರು ಕೇಂದ್ರದ ನಿರ್ದೇಶಕರು ಹೇಳುತ್ತಿದ್ದರು : ''ಆ ಯು.ಜಿ.ಸಿ. ಅಧ್ಯಕ್ಷೆ ಇದ್ದಾರಲ್ಲ, ಆಕೆ ಕಮ್ಯುನಿಷ್ಟಳಂತೆ. ಅದಕ್ಕೇ ಆಕೆಗೆ ಯೋಗದ ಬಗ್ಗೆ ಮಮತೆ ಇಲ್ಲ. ಆದ್ದರಿಂದ ಹಣವನ್ನು ಕಡಿತಗೊಳಿಸಿದ್ದಾಳೆ. ನಾವು ಮಂತ್ರಿಗೆ ಹೇಳಿ ಏನಾದರೂ ಮಾಡಬೇಕು.'' ಆಮೇಲೆ ಅವರೇನಾದರೂ ಮಾಡಿದರೋ ಇಲ್ಲವೋ ನನಗೆ ಗೊತ್ತಿಲ್ಲ. ಒಂದು ವಿಷಯವಂತೂ ನಿಜ: ಅದೇನೆಂದರೆ, ಯೋಗಾಭ್ಯಾಸದಿಂದ ಸಮಚಿತ್ತ ಪಡೆದಿರಬೇಕಾಗಿದ್ದ ನಿರ್ದೇಶಕರು ಹರಿದಾಡುತ್ತಿದ್ದ ಮನಸ್ಸನ್ನು, ಉದ್ವೇಗವನ್ನು, ತಡೆಹಿಡಿಯಲು ಅಶಕ್ತರಾಗಿದ್ದರು; ಕಾರ್ಯ-ಕಾರಣ ವಿವೇಚನೆಗೆ ಅವರು ಸೊಪ್ಪುಹಾಕಿರಲಿಲ್ಲ.

ಗ್ರಂಥಗಳನ್ನು ಅಭ್ಯಾಸ ಮಾಡಿ ಉಪನ್ಯಾಸ ನೀಡುವುದಕ್ಕೂ ಪ್ರಾಯೋಗಿಕವಾಗಿ ಮನಸ್ಸನ್ನು ಸ್ಥಿಮಿತಗೊಳಿಸುವುದಕ್ಕೂ ವ್ಯತ್ಯಾಸವಿದೆ. ಗೀತೆಯಲ್ಲಿ ಹೀಗೆ ಹೇಳಿದೆ, ಉಪನಿಷತ್ತಿನಲ್ಲಿ ಹಾಗೆ ಹೇಳಿದೆ, ಯೋಗದಿಂದ ಮನಸ್ಸಿಗೆ ಕಡಿವಾಣ ಹಾಕಬಹುದು, ಶಾಂತತೆ-ಪ್ರಸನ್ನತೆಗಳನ್ನು ಹೊಂದಬಹುದು, ಇತ್ಯಾದಿ ಭಾಷಣ ಮಾಡುವುದು ಕಷ್ಟವೇನಲ್ಲ. ಆದರೆ ಅನುಷ್ಠಾನದಲ್ಲಿ ಅದಾವುದೂ ಗೋಚರಕ್ಕೆ ಬಾರದೆ ಉಳಿಯಬಹುದು. ಇದಕ್ಕೆ ಭಿನ್ನವಾಗಿ, ಬಹಳ ವ್ಯಗ್ರನಾಗಿರುವವನಂತೆ ತೋರುವವನು ನಿಜಕ್ಕೂ ಸಹನೆ-ಸಮಚಿತ್ತಗಳನ್ನು ಸಿದ್ಧಿಸಿಕೊಂಡಿರಬಹುದು. ಎಲ್ಲ ದುಗುಡಗಳನ್ನೂ ಬದಿಗೊತ್ತಿ ಶಾಂತಚಿತ್ತದಿಂದ ಆಗುಹೋಗುಗಳನ್ನು ಪರಿಶೀಲಿಸುವ ಸ್ವಭಾವವನ್ನು ಬೆಳೆಸಿಕೊಂಡಿರಬಹುದು. ನನಗೆ ಸುಪರಿಚಿತರಾದ ಹಿರಿಯ ಕಾರ್ಮಿಕ ನಾಯಕರೊಬ್ಬರು ಈ ರೀತಿ ಇರುವುದನ್ನು ಅಚ್ಚರಿಯಿಂದ ಗಮನಿಸುತ್ತಾ ಬಂದಿದ್ದೇನೆ. ಒಂದಿಬ್ಬರು ಶತಾಯುಷಿಗಳಂತೂ ಅದರಲ್ಲಿ ಪೂರ್ಣ ನಿಷ್ಣಾತರೇ ಆಗಿದ್ದಾರೆ.

ಹಾಗಿದ್ದರೆ ಇದರ ಗುಟ್ಟೇನು? ಮನಸ್ಸು ಎಂಬುದರ ವಿಚಿತ್ರ ವರ್ತನೆಯನ್ನು ಅರ್ಥೈಸುವುದಾದರೂ ಹೇಗೆ? ಧ್ಯಾನಕ್ಕೂ ಇದಕ್ಕೂ ಏನಾದರೂ ಸಂಬಂಧ ಉಂಟೆ? ಅದಕ್ಕೆ ಪೂರ್ವಭಾವಿಯಾಗಿ ಸಿದ್ಧತೆಗಳೇನಾದರೂ ಅವಶ್ಯಕವೆ? ನಮ್ಮ ಯೋಗ ಗ್ರಂಥಗಳಲ್ಲಿ ಇವನ್ನು ಸವಿಸ್ತಾರವಾಗಿ ಚರ್ಚಿಸಲಾಗಿದೆ.

''ಆಸನೇನ ತಮೋ ಹಂತಿ ಪ್ರಾಣಾಯಾಮೇನ ಕಿಲ್ಬಿಷಮ್'' ಎಂಬ ಒಂದು ಮಾತಿದೆ. ಯೋಗಾಸನಗಳನ್ನು ಮಾಡುವುದರಿಂದ ಆಲಸ್ಯ ಅಥವಾ ಜಡತ್ವವನ್ನು ದೂರ ಮಾಡಬಹುದು ಮತ್ತು ಪ್ರಾಣಾಯಾಮದ ಅಭ್ಯಾಸವು ರೋಗವನ್ನು ತೊಡೆದುಹಾಕುತ್ತದೆ, ಎಂಬುದು ಇದರರ್ಥ. (ಕಿಲ್ಬಿಷಂ ಎಂದರೆ 'ಪಾಪ' ಎಂಬ ಅರ್ಥವೂ ಇದೆ, ಆದರೆ ಇಲ್ಲಿ ಅದು 'ರೋಗ' ಎಂಬುದನ್ನು ಸೂಚಿಸುತ್ತದೆ). ಜಡತ್ವವೇ ಒಂದು ರೋಗ ಎಂಬುವವರೂ ಇದ್ದಾರೆ. ಅದು ಕೇವಲ ದೈಹಿಕವಾದುದಲ್ಲ. ಆಲಸಿಕೆಯ ಪರಿಣಾಮವು ಮಾನಸಿಕ ಪ್ರವೃತ್ತಿಯ ಮೇಲೂ ಇರುತ್ತದೆಂಬುದು ಅನುಭವದ ಮಾತು. ಅಂತಹವರು ಇನ್ನು ಪ್ರಾಣಾಯಾಮ, ಧ್ಯಾನ, ಇತ್ಯಾದಿಗಳ ಕಡೆ ಗಮನ ಕೊಡಬೇಕೆಂದು ನಿರೀಕ್ಷಿಸುವುದೇ ತಪ್ಪು. ಲವಲವಿಕೆಯು ಕೇವಲ ಮಾನಸಿಕ ಇಚ್ಛೆಯಿಂದ ಮೈಗೂಡುವುದಿಲ್ಲ. ಅದಕ್ಕೆ ಬೇಕಾದ ಆಯಾಮವು ಮೊದಲು ರಚನೆಯಾಗಬೇಕು. ಅದು ಆಸನಗಳ ಅಭ್ಯಾಸದಿಂದ ಉಂಟಾಗುತ್ತದೆ. ದೇಹದ ವಿವಿಧ ಭಾಗಗಳಿಗೆ ಚಲನೆಯನ್ನು ಕೊಟ್ಟು ಸಡಿಲಗೊಳಿಸಿದರೆ ಉಲ್ಲಾಸ ಏರ್ಪಡುತ್ತದೆ. ಅದು ಮನಸ್ಸನ್ನು ಹಗುರಗೊಳಿಸಲು ಅಗತ್ಯವಾದ ಭೂಮಿಕೆ. ಅದರಿಂದ ಎಲ್ಲ ಭಾರವೂ ಇಳಿದುಹೋಗುತ್ತದೆಂದು ಭಾವಿಸಲಾಗದು. ಸ್ನಾಯುಗಳು ಚುರುಕಾಗಿದ್ದರೂ ಮಿದುಳು ಸುಪ್ತವಾಗಿರಲು ಸಾಧ್ಯ. ದೇಹ-ಮನಸ್ಸುಗಳನ್ನು ಸಮತೋಲನದಲ್ಲಿ ಇರಿಸಿಕೊಳ್ಳಲು ಆಸನ-ಪ್ರಾಣಾಯಾಮಾದಿಗಳು ಸಹಾಯ ಮಾಡುತ್ತವೆ.

ಯೋಗಶಾಸ್ತ್ರದಲ್ಲಿ ''ಕ್ಲೇಶ'' ಎಂದು ಒಂದು ಪರಿಕಲ್ಪನೆ ಇದೆ. (ಅದನ್ನು ಆಯುರ್ವೇದದಲ್ಲೂ ಬಳಸುವುದುಂಟು). ''ಅದು ಮನಸ್ಸಿನ ಲಕ್ಷಣವಾಗಿದ್ದರೂ ಅದರ ಫಲವನ್ನು ಅನುಭವಿಸುವವನು ಪುರುಷನೇ,'' ಎಂದು ವ್ಯಾಸರು ಹೇಳುತ್ತಾರೆ. (ಕ್ಲೇಶಾದಯಃ ಮನಸಿ ವರ್ತಮಾನಾಃ ಪುರುಷೇ ವ್ಯಪದಿಶ್ಯಂತೇ. ಸ ಹಿ ತತ್ಫಲಸ್ಯ ಭೋಕ್ತಾ. - ಯೋಗಸೂತ್ರ ಭಾಷ್ಯ ೧. ೨೪). ಕ್ರಿಯಾಯೋಗದಿಂದ ಕ್ಲೇಶಗಳನ್ನು ನಿಷ್ಕ್ರಿಯಗೊಳಿಸಬಹುದು, ಎನ್ನುತ್ತಾನೆ ಪತಂಜಲಿ (ಸಮಾಧಿ ಭಾವನಾರ್ಥಃ ಕ್ಲೇಶತನೂಕರಣಾರ್ಥಶ್ಚ. -ಯೋಗಸೂತ್ರ ೨.೨). ಅದು ಕ್ಲೇಶಗಳನ್ನು ನಿರ್ಮೂಲನ ಮಾಡುವುದಿಲ್ಲ, ನಿಶ್ಶೇಷ್ಟಗೊಳಿಸುತ್ತದೆ ಮಾತ್ರ ಎಂದು ವಾಚಸ್ಪತಿ ಮಿಶ್ರ ತಿಳಿಸುತ್ತಾನೆ. ಅವು ಸುಟ್ಟ ಬೀಜಗಳಂತಾಗಿ ಮೊಳಕೆಯೊಡೆಯಲು ಸಾಧ್ಯವಾಗುವುದಿಲ್ಲ, ಅಷ್ಟೆ. ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಟ್ಟುಕೊಂಡಿರುವವನಿಗೆ ಯೋಗಾಭ್ಯಾಸವು ಸಹಜವಾಗಿಯೇ ಸರಳವಾಗಿರುತ್ತದೆ. ಆದರೆ ವಿಚಲಿತವಾದ ಮನಸ್ಸುಳ್ಳವನೂ ಸಹ ಯೋಗಾಭ್ಯಾಸಕ್ಕೆ ಭೂಮಿಕೆ ರಚಿಸಿಕೊಳ್ಳಲು ಸಾಧ್ಯವಿದೆ. ಅದೇ ಕ್ರಿಯಾಯೋಗದ ಉದ್ದೇಶ. ವ್ಯಾಸರ ಮಾತುಗಳು ಮೆಲುಕುಹಾಕಲು ಯೋಗ್ಯವಾಗಿವೆ : ಉದ್ದಿಷ್ಟಂ ಸಮಾಹಿತಚಿತ್ತಸ್ಯ ಯೋಗಃ। ಕಥಂ ವ್ಯುತ್ಥಿತಚಿತ್ತೋಽಪಿ ಯೋಗಯುಕ್ತಃ ಸ್ಯಾದಿತಿ ಏತದಾರಭ್ಯತೇ - ತಪಃ ಸ್ವಾಧ್ಯಾಯೇಶ್ವರಪ್ರಣಿಧಾನಾನಿ ಕ್ರಿಯಾಯೋಗಃ॥ (ಯೋ.ಸೂ. ೨.೧).

# ಚರಿತ್ರೆ

ವರ್ತಮಾನದ ವಿದ್ಯಮಾನಗಳಲ್ಲಿ ಗೊಂದಲವೇರ್ಪಟ್ಟಾಗ, ಚರಿತ್ರೆಗೆ ಅಪಚಾರವಾಯಿತೆಂದೂ, ಚರಿತ್ರೆ ಎಂದೆಂದೂ ಇದನ್ನು ಕ್ಷಮಿಸಲಾರದೆಂದೂ ಅಥವಾ ಚರಿತ್ರೆಯ ಪುನರಾವರ್ತನೆಯಾಯಿತೆಂದೂ ಹೇಳುವುದುಂಟು. ಇಂದಿನ ವಿದ್ಯಮಾನಗಳಿಗೂ ನಿನ್ನೆಯ ಚರಿತ್ರೆಗೂ ಅದೆಂಥ ನಂಟು? ನಿನ್ನೆ-ಇಂದು-ನಾಳೆಗಳು ಚರಿತ್ರೆಯ ಬಿಗಿಯಾದ ಕೊಂಡಿಗಳು. ನಿನ್ನೆಯ ಚರಿತ್ರೆಯ ವಿಶ್ಲೇಷಣೆ ಇಂದಿನ ಆಗು-ಹೋಗುಗಳನ್ನು ಸರಿಯಾದ ಕ್ರಮದಲ್ಲಿ ರೂಪಿಸುವುದಕ್ಕೂ, ನಾಳೆಯ ಯೋಜಿತ ಕಾರ್ಯಗಳ ಅಡಿಪಾಯ ನಿರ್ಮಾಣಕ್ಕೂ ನೆರವಾಗುತ್ತದೆ. ಚರಿತ್ರೆಯ ವಸ್ತುನಿಷ್ಠ ಅಧ್ಯಯನ, ವಿಶ್ಲೇಷಣೆ ಮಾತ್ರವೇ ಮಾನವ ಸಮಾಜದ ಮುಂದಿನ ದಾರಿಯನ್ನು ಸುಗಮಗೊಳಿಸುತ್ತದೆ.

ಚರಿತ್ರೆ ಎಂದೊಡನೆ ಉರುಳಿಬಿದ್ದ ಸಿಂಹಾಸನಗಳು, ಮರೆಯಾದ ಸಾಮ್ರಾಜ್ಯಗಳು, ಗತಿ ಬದಲಿಸಿದ ನಾಗರಿಕತೆಗಳ ನೆನಪಾಗುತ್ತದೆ. ಯುದ್ಧ, ತುಳಿತ, ಹಸಿವು, ದಾರಿದ್ರ್ಯ, ನಿಸರ್ಗದ ಪ್ರಕೋಪಗಳು ಇತ್ಯಾದಿ ಎಲ್ಲಾ ಚರಿತ್ರೆಯ ಅವಿಭಾಜ್ಯ ಅಂಗಗಳೇ. ಈ ಸಂಭವಗಳು ಹೇಗೆ ಘಟಿಸುತ್ತವೆ? ಚರಿತ್ರೆಯನ್ನು ರೂಪಿಸುವ, ನಿರ್ಧರಿಸುವ ವಾಸ್ತವ ಘಟನೆಗಳಿಗೆ ದೇವರು ಕಾರಣವೆ? ಒಳಿತು-ಕೆಡುಕುಗಳ ಸಂಘರ್ಷವೆ? ವೀರ ಪುರುಷನ ಅಥವಾ ಚಕ್ರವರ್ತಿಯ ಸಂಕಲ್ಪವೆ? ಈ ಬೆಳವಣಿಗೆಗಳನ್ನು ನಿರ್ಧರಿಸುವ ತತ್ವಗಳೇನಾದರೂ ಇರಲು ಸಾಧ್ಯವೆ? ಹೌದು ಎನ್ನುವವರ ದೃಷ್ಟಿಯಲ್ಲಿ ವ್ಯಕ್ತಿಯೇ ಚರಿತ್ರೆಯ ನಿರ್ಣಾಯಕ ಶಕ್ತಿಯಾಗಿದ್ದಾನೆ. ಯಾವುದೇ ರಾಷ್ಟ್ರದ ಚಾರಿತ್ರಿಕ ಬೆಳವಣಿಗೆಯಲ್ಲಿ ಘಟನೆಗಳನ್ನು ಮಾತ್ರವೇ ಕ್ರಮಬದ್ಧವಾಗಿ ಅದು ದಾಖಲಿಸುತ್ತದೆ. ವ್ಯಕ್ತಿನಿಷ್ಠ ದೃಷ್ಟಿಕೋನವನ್ನು ಮಾತ್ರವೇ ಅದು ವಿವರಿಸುತ್ತದೆ. ಅದು ಸಾಮಾನ್ಯ ಸಾಮಾಜಿಕ ವಿಜ್ಞಾನವಾದ ಪೌರ ಚರಿತ್ರೆಯಾಗಿರುತ್ತದೆ. ವ್ಯಕ್ತಿನಿಷ್ಠವಾದ ಈ ಘಟನೆಗಳ ಸರಮಾಲೆ ವರ್ತಮಾನದ ವಿದ್ಯಮಾನಗಳಿಗೂ, ಭವಿಷ್ಯದ ಯೋಜನೆಗಳಿಗೂ ದಾರಿದೀಪವಾಗಲಾರದು. ಅದಕ್ಕೆ ಬದಲಾಗಿ ವರ್ತಮಾನದ ಗೊಂದಲವನ್ನು ಇನ್ನಷ್ಟು ತೀವ್ರತೆಗೆ ಕೊಂಡೊಯ್ಯಲು ಇಂಥ ಚರಿತ್ರೆಗಳು ಸಹಕಾರಿಯಾಗುತ್ತವೆ. ಚರಿತ್ರೆಯಲ್ಲಿನ ಸಮಾಜದ ಸ್ಥಿತಿಗತಿಗಳಿಗೂ ವರ್ತಮಾನದ ಸಮಾಜದ ಸ್ಥಿತಿಗತಿಗಳಿಗೂ ಅಂತರವನ್ನೇ ಕಂಡುಹಿಡಿಯದೆ ಘಟನೆಗಳನ್ನು ತಿರುಚುವುದಕ್ಕೆ, ಘಟಿಸಿದ ಸಂಭವಗಳನ್ನು ಬೇರೊಂದು ರೀತಿಯಲ್ಲಿ ಹೆಸರಿಸಿ ಅದನ್ನು ನೇರ್ಪುಗೊಳಿಸುವ ನೆಪದಲ್ಲಿ ಸಮಾಜದ ನೆಮ್ಮದಿಯನ್ನು ಕದಡುವುದಕ್ಕೆ ಇಂಥ ಚರಿತ್ರೆಗಳು ನೆರವಾಗುತ್ತವೆ.

ಹಾಗಿದ್ದರೆ ಸಮಾಜದ ಮುನ್ನಡೆಯನ್ನು ಬಯಸುವ ಚರಿತ್ರೆಯ ಗುಣಲಕ್ಷಣಗಳೇನು? ಆರ್ಥಿಕ ಚರಿತ್ರೆ, ಸಾಂಸ್ಕೃತಿಕ ನಡೆವಳಿಕೆ, ಆಧ್ಯಾತ್ಮಿಕ ಬೆಳವಣಿಗೆ, ಹಾಗೂ ಉತ್ಪಾದನಾ ಕ್ರಾಂತಿಯಲ್ಲಿ ತೊಡಗಿ ಜೀವನದ ಮೌಲ್ಯಗಳಲ್ಲಿ ಬದಲಾವಣೆ ತರುವವರ ಚರಿತ್ರೆಯೇ ನಿಜವಾದ ಚರಿತ್ರೆ. ಜನಸಮೂಹದ ಸಮಗ್ರ ಸಂಕಲ್ಪದ ಪರಿಣಾಮವೇ ಚರಿತ್ರೆ ಎನಿಸುತ್ತದೆ. ಅರ್ಥವ್ಯವಸ್ಥೆಯಲ್ಲಿ ಆಗಬಹುದಾದ ಬದಲಾವಣೆಯಿಂದ ಪ್ರೇರಿತಗೊಳ್ಳುವ ಜನಸಮೂಹ ತನ್ನ ನಾಯಕನನ್ನು ತಾನೇ ಸೃಷ್ಟಿಸುತ್ತದೆ. ಇತಿಹಾಸ ಪುರುಷನೆನ್ನುವ ಮಹಾ ವ್ಯಕ್ತಿಯನ್ನು ನಾವು ಹೀಗೆ ನಿರ್ಮಿಸುತ್ತೇವೆ. ಕಾಲ, ಹಾಗೂ ಸಾಮಾಜಿಕ ಪರಿಸ್ಥಿತಿಗಳಿಗನುಸಾರವಾಗಿ ಮನುಷ್ಯರು ತಮ್ಮ ಚರಿತ್ರೆಯನ್ನು ತಾವೇ ಸೃಷ್ಟಿಸಿಕೊಳ್ಳುತ್ತಾರೆ.

ಅಸ್ತಿತ್ವದಲ್ಲಿರುವ ವ್ಯವಸ್ಥೆ ಮತ್ತು ಅದನ್ನು ರಕ್ಷಿಸುವ ಆಡಳಿತ ಯಂತ್ರದ ವಿರುದ್ಧ ಹೋರಾಡಲು ಜನಸಮೂಹವನ್ನು ಪ್ರೇರೇಪಿಸಿದ ಅಂಶಗಳು ಯಾವುವು, ವ್ಯವಸ್ಥೆಯ ಅವಸಾನ, ಹೊಸದರ ಹುಟ್ಟು ಯಾವ ಕಾರಣದಿಂದ, ಇತ್ಯಾದಿಗಳು ಚರಿತ್ರೆಯ ಭಾಗಗಳಾಗಬೇಕು. ಚರಿತ್ರೆಯ ಘಟನಾಬದ್ಧ ನಡೆವಳಿಕೆಯ ಸ್ಥಿತ್ಯಂತರಗಳ ಕಾರ್ಯ-ಕಾರಣ ಸಂಬಂಧ ನಿರೂಪಿತವಾದಲ್ಲಿ ಮಾತ್ರವೇ ಚರಿತ್ರೆಯ ಸಂಭವಗಳು ಯಾಕೆ ಘಟಿಸಿದವು ಎನ್ನುವ ಕಾರಣಗಳು ತಿಳಿಯುತ್ತವೆ. ಇದೇ ವರ್ತಮಾನದ ವಿದ್ಯಮಾನಗಳಿಗೆ, ಭವಿಷ್ಯತ್ತಿನ ಕಾರ್ಯ ಯೋಜನೆಗಳಿಗೆ ನೆರವಾಗಬಲ್ಲದು.

ಆರ್. ಎಸ್. ರಾಜಾರಾಮ್
(ಕೃಪೆ : ಆಕಾಶವಾಣಿ)

# ಯಾವುದು ಪರಮಾನಂದ, ಯಾವುದು ಮಾಯೆ?

ಎರಡು ಮಹತ್ವದ ಘಟನೆಗಳಿವೆ. ಒಂದು ರೈದಾಸನ ಜೀವನದಲ್ಲಿ ನಡೆದುದು, ಇನ್ನೊಂದು ಆಯ್ದಕ್ಕಿ ಮಾರಯ್ಯ ತಂದೆ ಮತ್ತು ಆತನ ಧರ್ಮಪತ್ನಿ ಲಕ್ಕಮ್ಮರ ಬದುಕಿನಲ್ಲಿ ನಡೆದುದು. ಇವೆರಡು ಘಟನೆಗಳಿಗೂ ಮೂಲವಾದ 'ಬೇಕು' 'ಬೇಡ', ಈ ಎರಡೂ ಬೀಜಗಳ ಹುರಿದು ಬದುಕಿದವರು ಇವರು.

ರೈದಾಸ ಕಾಶಿಯ ಮಹಾಸಂತ. ಆಯ್ದಕ್ಕಿ ಮಾರಯ್ಯ ತಂದೆ ಹಾಗೂ ಲಕ್ಕಮ್ಮ ಕಲ್ಯಾಣದ ಶರಣ, ಶರಣೆಯರು. ಇವರು ಅನುಭಾವಿಗಳು. ತಮ್ಮ ತಮ್ಮ ಕಾಯಕದಲ್ಲಿ ನಿಷ್ಠೆಯುಳ್ಳವರು, ಅದೂ ಸತ್ಯಶುದ್ಧವಾದ ಕಾಯಕ ನಿರತರು. ಅದರ ಹೊರಗಿನ ಯಾವ ಸಂಪತ್ತನ್ನೂ ಅವರು ಬಯಸರು.

ಕಾಶಿಯಲ್ಲಿ ಗಂಗಾ ನದಿಯ ತಟದಲ್ಲಿ ಒಂದು ಸಾಧಾರಣ ಗುಡಿಸಲು. ಗುಡಿಸಲ ಮುಂದೆ ಕುಳಿತು ಚಪ್ಪಲಿ ಹೊಲಿಯುವ ಕಾಯಕ. ಬಡತನ, ಕಷ್ಟದ ಜೀವನ ಆತನದು. ಇದನ್ನೆಲ್ಲ ನೋಡಿದ ಓರ್ವ ಸಾಧು ಒಂದು ದಿನ ರೈದಾಸ ಸಂತನ ಗುಡಿಸಲ ಹತ್ತಿರ ಬಂದು ತನ್ನ ಜೋಳಿಗೆಯಲ್ಲಿ ಕೈಹಾಕಿ ಒಂದು ಕಲ್ಲು ತೆಗೆದು ಹೇಳುತ್ತಾನೆ : ''ನೋಡಿಲ್ಲಿ ರೈದಾಸ, ತಗೊ ಇದನ್ನು, ಇದು ಸಾಮಾನ್ಯ ಕಲ್ಲಲ್ಲ, ಪರುಷಗಟ್ಟಿ ಇದು. ಕಬ್ಬಿಣವನ್ನು ಬಂಗಾರವನ್ನಾಗಿ ಮಾಡುತ್ತದೆ...''

ಹೀಗೆ ಹೇಳಿದ ಸಾಧು ತನ್ನಲ್ಲಿದ್ದ ಕಬ್ಬಿಣದ ತುಂಡನ್ನು ತೆಗೆದುಕೊಂಡು ಪರುಷಗಟ್ಟಿಗೆ ತಾಕಿಸಿದ. ಅದರ ಸ್ಪರ್ಶವಾದ ಕೂಡಲೇ ಅದು ಹೊಳೆ ಹೊಳೆವ ಚಿನ್ನವಾಗಿ ಪರಿವರ್ತಿತವಾಯಿತು. ಸಾಧು ರೈದಾಸನಿಗೆ ಇದನ್ನು ತೆಗೆದುಕೊಂಡು ಈ ಬಡತನದಿಂದ ಮುಕ್ತನಾಗೆಂದು ಹೇಳಿದ. ಆಗ ರೈದಾಸ: ''ಮಹಾತ್ಮ, ತಮ್ಮೀ ಸಂಪತ್ತನ್ನು ತಮ್ಮಲ್ಲಿಯೇ ಇರಿಸಿಕೊಳ್ಳಿ. ನನಗಿದು ಸರ್ವಥಾ ಬೇಡ. ನನ್ನ ಕಾಯಕದಿಂದ ನನ್ನ ದುಡಿಮೆಯಿಂದ ನನಗೇನು ಸಿಗುತ್ತದೆಯೋ ಅದೇ ಸಾಕು ನಮಗೆ'' ಎನ್ನುತ್ತಾನೆ.

ಸಾಧು ಇಷ್ಟಕ್ಕೇ ಬಿಡಲಿಲ್ಲ, ಮತ್ತೆ ಮತ್ತೆ ಆತನಿಗೆ ಪರುಷಗಟ್ಟಿ ತೆಗೆದುಕೊಳ್ಳಲು ಒತ್ತಾಯಿಸಿದ. ಆಗ ರೈದಾಸ ಹೇಳಿದ : ''ಮಹಾಸ್ವಾಮೀ, ತಮಗಿದನ್ನು ಯಾರಿಗಾದರೂ ಕೊಡಲೇಬೇಕೆನ್ನಿಸಿದ್ದರೆ ರಾಜನಿಗೆ ಕೊಡಿ. ಅವನು ತುಂಬ ಬಡವ. ಆತನಿಗೆ ಪ್ರತಿ ಕ್ಷಣ ಹಣದ ಆಶೆಯಿರುತ್ತದೆ.'' ಹೀಗೆ ಹೇಳಿ ಚಪ್ಪಲಿ ಹೊಲಿಯುವ ಕಾಯಕದಲ್ಲಿ ನಿರತನಾದ. ಇದಕ್ಕೆ ಪೂರಕವಾದ ಒಂದು ಘಟನೆ 12ನೇ ಶತಮಾನದ ಬಸವಣ್ಣನವರ ಕ್ರಾಂತಿಯಲ್ಲಿ ಪಾಲ್ಗೊಂಡ ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮರ ಬದುಕಿನಲ್ಲಿ ನಡೆಯುತ್ತದೆ.

ಬಸವಣ್ಣ ಮಾತೃಹೃದಯದ ಬಸವಣ್ಣ, ಈ ದಂಪತಿಗಳ ಬಡತನ, ದಿನನಿತ್ಯ ಶರಣರ ಓಣಿಯಲ್ಲಿ ಅಷ್ಟಿಷ್ಟು ಸಿಗುವ ಅಕ್ಕಿಕಾಳು ಆಯ್ದು ತಂದು ಅಡಿಗೆ ಮಾಡಿ ದಾಸೋಹ ನಡೆಸಿ, ಮಿಕ್ಕಿದ್ದನ್ನು ತಾವು ಸೇವಿಸಿ ಜೀವಿಸುವ ಅವರ ನಿತ್ಯ ನೇಮ ಕಂಡು, ಕೆಲಕಾಲವಾದರೂ ಅವರು ಸುಖವಾಗಿರಲೆಂದು ಭಾವಿಸಿ, ತನ್ನ ಮಹಾಮನೆಯ ಒಂದು ಮೂಲೆಯಲ್ಲಿ ಮಾರಯ್ಯ ಹೊರಲಾರದಷ್ಟು ಅಕ್ಕಿ, ಹಾಕಿಸುತ್ತಾನೆ. ಅಕ್ಕಿ ಆಯಲು ಎಂದಿನಂತೆ ಬಂದ ಮಾರಯ್ಯನಂಥ ಶರಣರ ಮನದಲ್ಲೂ ಮನದ ಮುಂದಣ ಆಶೆ ಎಚ್ಚರಗೊಳ್ಳುತ್ತದೆ. ತನ್ನ ಚೀಲದ ತುಂಬ ಅಕ್ಕಿ ತುಂಬಿಕೊಳ್ಳತೊಡಗುತ್ತಾನೆ. ಅಷ್ಟೆಲ್ಲ ತುಂಬಲು ಸಮಯ ಹಿಡಿಯುತ್ತದೆ. ಅತ್ತ ಜಂಗಮ ದಾಸೋಹಕ್ಕೆ ತಡವಾಗುತ್ತದೆ. ಶರಣರು ಇನ್ನೂ ಏಕೆ ಬರಲಿಲ್ಲವೆಂದು ಶರಣೆ ಲಕ್ಕಮ್ಮ ಬಾಗಿಲಿಗೆ ಬಂದು ಕಾಯುತ್ತಾಳೆ. ಹೀಗೆ ಕಾಯುತ್ತಿರುವಾಗಲೇ ಮಾರಯ್ಯ ಶರಣ ಅಕ್ಕಿಯ ಚೀಲದ ಭಾರಕ್ಕೆ ಬಾಗಿಕೊಂಡೇ ಮನೆಯ ಬಾಗಿಲಿಗೆ ಬರುತ್ತಾನೆ. ಇದನ್ನು ಕಂಡ ಲಕ್ಕಮ್ಮನಿಗೆ ಅಚ್ಚರಿ. ಇಷ್ಟೊಂದು ಅಕ್ಕಿ ಈ ಆಶೆ ಶರಣರಿಗೆ ಹೇಗೆ? ಆಗ ಆಕೆ ಗಂಡನಿಗೆ ಹೊರಗೇ ನಿಲ್ಲಿಸಿ ಹೇಳುತ್ತಾಳೆ: ''ಆಸೆಯೆಂಬುದು ಅರಸಂಗಲ್ಲದೆ ಶಿವಶರಣರಿಗೆ ಉಂಟೆ ಎಲೆ ಮಾರಯ್ಯ ತಂದೆ? ಈಸಕ್ಕಿಯ ಆಶೆ ನಿಮಗೇಕೆ?'' ಎನ್ನುತ್ತ - ಎಲ್ಲಿಂದ ಹೊತ್ತು ತಂದಿದ್ದಿರೋ ಅಲ್ಲಿಯೇ ಒಗೆದು ಬನ್ನಿ - ಎನ್ನುತ್ತಾಳೆ, ಆ ಮಹಾಶರಣೆ. ಎಂಥ ಲೋಕೋತ್ತರ ಮಾತು. ಅದೇ ಮಾತು ರೈದಾಸ ಬೇರೆ ರೀತಿಯಲ್ಲಿ ಸಾಧುಗೆ ಹೇಳಿದ. ಎಲ್ಲಿ ಕಾಶಿ, ಎಲ್ಲಿ ಕಲ್ಯಾಣ! ಅಷ್ಟು ದೂರದ ಕಾಶಿಯ ಸಂತ ರೈದಾಸನ ಕಾಯಕ ನಿಷ್ಠೆ, ದುಡಿಮೆಯಲ್ಲಿ ಕಾಣುವ ಸಂತೃಪ್ತಿ, ಆನಂದ, ಇಷ್ಟು ದೂರದ ಕಲ್ಯಾಣದ ಆಯ್ದಕ್ಕಿ ಮಾರಯ್ಯ ತಂದೆಯ ಧರ್ಮಪತ್ನಿ ಲಕ್ಕಮ್ಮಳ ಕಾಯಕ ನಿಷ್ಠೆ ಒಂದೇ ಆಗಿರುವುದು ಕೇವಲ ಆಕಸ್ಮಿಕವೆಂದು ಭಾವಿಸಲಾಗದು.

ಡಾ॥ ಪಂಚಾಕ್ಷರಿ ಹಿರೇಮಠ
ಜಯನಗರ, ಧಾರವಾಡ - ೧




Registered with the Registrar of News Papers for India under No.11308/99. Postal REGISTERED CPMG/KA/BG-7/99

# ೨೦೦೦



**ಹೊಸತು**

ತಿಂಗಳ ಪತ್ರಿಕೆ

ನವಕರ್ನಾಟಕ ಪ್ರಕಾಶನ

## ಜನವರಿ

| | | | | | |
|---|---|---|---|---|---|
| ಭಾನು | ೩೦ | ೨ | ೯ | ೧೬ | ೨೩ |
| ಸೋಮ | ೩೧ | ೩ | ೧೦ | ೧೭ | ೨೪ |
| ಮಂಗಳ | | ೪ | ೧೧ | ೧೮ | ೨೫ |
| ಬುಧ | | ೫ | ೧೨ | ೧೯ | ೨೬ |
| ಗುರು | | ೬ | ೧೩ | ೨೦ | ೨೭ |
| ಶುಕ್ರ | | ೭ | ೧೪ | ೨೧ | ೨೮ |
| ಶನಿ | ೧ | ೮ | ೧೫ | ೨೨ | ೨೯ |

## ಫೆಬ್ರವರಿ

| | | | | | |
|---|---|---|---|---|---|
| ಭಾನು | | ೬ | ೧೩ | ೨೦ | ೨೭ |
| ಸೋಮ | | ೭ | ೧೪ | ೨೧ | ೨೮ |
| ಮಂಗಳ | ೧ | ೮ | ೧೫ | ೨೨ | ೨೯ |
| ಬುಧ | ೨ | ೯ | ೧೬ | ೨೩ | |
| ಗುರು | ೩ | ೧೦ | ೧೭ | ೨೪ | |
| ಶುಕ್ರ | ೪ | ೧೧ | ೧೮ | ೨೫ | |
| ಶನಿ | ೫ | ೧೨ | ೧೯ | ೨೬ | |

## ಮಾರ್ಚ್

| | | | | | |
|---|---|---|---|---|---|
| ಭಾನು | | ೫ | ೧೨ | ೧೯ | ೨೬ |
| ಸೋಮ | | ೬ | ೧೩ | ೨೦ | ೨೭ |
| ಮಂಗಳ | | ೭ | ೧೪ | ೨೧ | ೨೮ |
| ಬುಧ | ೧ | ೮ | ೧೫ | ೨೨ | ೨೯ |
| ಗುರು | ೨ | ೯ | ೧೬ | ೨೩ | ೩೦ |
| ಶುಕ್ರ | ೩ | ೧೦ | ೧೭ | ೨೪ | ೩೧ |
| ಶನಿ | ೪ | ೧೧ | ೧೮ | ೨೫ | |

## ಏಪ್ರಿಲ್

| | | | | | |
|---|---|---|---|---|---|
| ಭಾನು | ೩೦ | ೨ | ೯ | ೧೬ | ೨೩ |
| ಸೋಮ | | ೩ | ೧೦ | ೧೭ | ೨೪ |
| ಮಂಗಳ | | ೪ | ೧೧ | ೧೮ | ೨೫ |
| ಬುಧ | | ೫ | ೧೨ | ೧೯ | ೨೬ |
| ಗುರು | | ೬ | ೧೩ | ೨೦ | ೨೭ |
| ಶುಕ್ರ | | ೭ | ೧೪ | ೨೧ | ೨೮ |
| ಶನಿ | ೧ | ೮ | ೧೫ | ೨೨ | ೨೯ |

## ಮೇ

| | | | | | |
|---|---|---|---|---|---|
| ಭಾನು | | ೭ | ೧೪ | ೨೧ | ೨೮ |
| ಸೋಮ | ೧ | ೮ | ೧೫ | ೨೨ | ೨೯ |
| ಮಂಗಳ | ೨ | ೯ | ೧೬ | ೨೩ | ೩೦ |
| ಬುಧ | ೩ | ೧೦ | ೧೭ | ೨೪ | ೩೧ |
| ಗುರು | ೪ | ೧೧ | ೧೮ | ೨೫ | |
| ಶುಕ್ರ | ೫ | ೧೨ | ೧೯ | ೨೬ | |
| ಶನಿ | ೬ | ೧೩ | ೨೦ | ೨೭ | |

## ಜೂನ್

| | | | | | |
|---|---|---|---|---|---|
| ಭಾನು | | ೪ | ೧೧ | ೧೮ | ೨೫ |
| ಸೋಮ | | ೫ | ೧೨ | ೧೯ | ೨೬ |
| ಮಂಗಳ | | ೬ | ೧೩ | ೨೦ | ೨೭ |
| ಬುಧ | | ೭ | ೧೪ | ೨೧ | ೨೮ |
| ಗುರು | ೧ | ೮ | ೧೫ | ೨೨ | ೨೯ |
| ಶುಕ್ರ | ೨ | ೯ | ೧೬ | ೨೩ | ೩೦ |
| ಶನಿ | ೩ | ೧೦ | ೧೭ | ೨೪ | |





## ಜುಲೈ

| | | | | | |
|---|---|---|---|---|---|
| ಭಾನು | ೩೦ | ೨ | ೯ | ೧೬ | ೨೩ |
| ಸೋಮ | ೩೧ | ೩ | ೧೦ | ೧೭ | ೨೪ |
| ಮಂಗಳ | | ೪ | ೧೧ | ೧೮ | ೨೫ |
| ಬುಧ | | ೫ | ೧೨ | ೧೯ | ೨೬ |
| ಗುರು | | ೬ | ೧೩ | ೨೦ | ೨೭ |
| ಶುಕ್ರ | | ೭ | ೧೪ | ೨೧ | ೨೮ |
| ಶನಿ | ೧ | ೮ | ೧೫ | ೨೨ | ೨೯ |

## ಆಗಸ್ಟ್

| | | | | | |
|---|---|---|---|---|---|
| ಭಾನು | | ೬ | ೧೩ | ೨೦ | ೨೭ |
| ಸೋಮ | | ೭ | ೧೪ | ೨೧ | ೨೮ |
| ಮಂಗಳ | ೧ | ೮ | ೧೫ | ೨೨ | ೨೯ |
| ಬುಧ | ೨ | ೯ | ೧೬ | ೨೩ | ೩೦ |
| ಗುರು | ೩ | ೧೦ | ೧೭ | ೨೪ | ೩೧ |
| ಶುಕ್ರ | ೪ | ೧೧ | ೧೮ | ೨೫ | |
| ಶನಿ | ೫ | ೧೨ | ೧೯ | ೨೬ | |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾನು | | ೩ | ೧೦ | ೧೭ | ೨೪ |
| ಸೋಮ | | ೪ | ೧೧ | ೧೮ | ೨೫ |
| ಮಂಗಳ | | ೫ | ೧೨ | ೧೯ | ೨೬ |
| ಬುಧ | | ೬ | ೧೩ | ೨೦ | ೨೭ |
| ಗುರು | | ೭ | ೧೪ | ೨೧ | ೨೮ |
| ಶುಕ್ರ | ೧ | ೮ | ೧೫ | ೨೨ | ೨೯ |
| ಶನಿ | ೨ | ೯ | ೧೬ | ೨೩ | ೩೦ |

## ಅಕ್ಟೋಬರ್

| | | | | | |
|---|---|---|---|---|---|
| ಭಾನು | ೧ | ೮ | ೧೫ | ೨೨ | ೨೯ |
| ಸೋಮ | ೨ | ೯ | ೧೬ | ೨೩ | ೩೦ |
| ಮಂಗಳ | ೩ | ೧೦ | ೧೭ | ೨೪ | ೩೧ |
| ಬುಧ | ೪ | ೧೧ | ೧೮ | ೨೫ | |
| ಗುರು | ೫ | ೧೨ | ೧೯ | ೨೬ | |
| ಶುಕ್ರ | ೬ | ೧೩ | ೨೦ | ೨೭ | |
| ಶನಿ | ೭ | ೧೪ | ೨೧ | ೨೮ | |

## ನವೆಂಬರ್

| | | | | | |
|---|---|---|---|---|---|
| ಭಾನು | | ೫ | ೧೨ | ೧೯ | ೨೬ |
| ಸೋಮ | | ೬ | ೧೩ | ೨೦ | ೨೭ |
| ಮಂಗಳ | | ೭ | ೧೪ | ೨೧ | ೨೮ |
| ಬುಧ | ೧ | ೮ | ೧೫ | ೨೨ | ೨೯ |
| ಗುರು | ೨ | ೯ | ೧೬ | ೨೩ | ೩೦ |
| ಶುಕ್ರ | ೩ | ೧೦ | ೧೭ | ೨೪ | |
| ಶನಿ | ೪ | ೧೧ | ೧೮ | ೨೫ | |

## ಡಿಸೆಂಬರ್

| | | | | | |
|---|---|---|---|---|---|
| ಭಾನು | ೩೧ | ೩ | ೧೦ | ೧೭ | ೨೪ |
| ಸೋಮ | | ೪ | ೧೧ | ೧೮ | ೨೫ |
| ಮಂಗಳ | | ೫ | ೧೨ | ೧೯ | ೨೬ |
| ಬುಧ | | ೬ | ೧೩ | ೨೦ | ೨೭ |
| ಗುರು | | ೭ | ೧೪ | ೨೧ | ೨೮ |
| ಶುಕ್ರ | ೧ | ೮ | ೧೫ | ೨೨ | ೨೯ |
| ಶನಿ | ೨ | ೯ | ೧೬ | ೨೩ | ೩೦ |



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna